# ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150




## ಪ್ರಕಟಣಪೂರ್ವ ಕೂಪನ್ ಖರೀದಿಸಿ

ಮಹಾನ್ ಮಾನವತಾವಾದಿ, ಚಿಂತಕ ಕಾರ್ಲ್ ಮಾರ್ಕ್ಸ್ (1818–1883) ಅವರ ಜನ್ಮದಿನದ ದ್ವಿಶತಮಾನೋತ್ಸವ ಹಾಗೂ ಅವರು ರಚಿಸಿದ ಜಗತ್ಪ್ರಸಿದ್ಧ ಕೃತಿ 'ದಾಸ್ ಕ್ಯಾಪಿಟಲ್'ನ 150ನೇ ವರ್ಷಾಚರಣೆಯ ಅಂಗವಾಗಿ ಮಾರ್ಕ್ಸ್ ಅವರ ಕೆಲವು ಪ್ರಮುಖ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸುವ ಬೃಹತ್ ಯೋಜನೆಯನ್ನು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಮತ್ತು ಕ್ರಿಯಾ ಮಾಧ್ಯಮ ಪ್ರೈವೆಟ್ ಲಿಮಿಟೆಡ್ ಸಂಸ್ಥೆಗಳು ಹಮ್ಮಿಕೊಂಡಿವೆ. ಈ ಯೋಜನೆಯಲ್ಲಿ ಹಲವಾರು ತಜ್ಞ ಲೇಖಕರು ಅನುವಾದ/ಪರಿಷ್ಕರಣೆ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಮಾರ್ಕ್ಸ್ ಅವರ 201ನೇ ಹುಟ್ಟುಹಬ್ಬದ ದಿನವಾದ 2018 ಮೇ 5ರೊಳಗಾಗಿ ಯೋಜಿತ ಎಲ್ಲ ಏಳು ಕೃತಿಗಳನ್ನು ಪ್ರಕಟಿಸಲಿದ್ದೇವೆ. ಅವುಗಳ ಶೀರ್ಷಿಕೆಗಳು ಇಂತಿವೆ –

- ಬಂಡವಾಳ – ಸಂಪುಟ 1
- ಭಾರತವನ್ನು ಕುರಿತು ಮಾರ್ಕ್ಸ್
- ಫ್ರಾನ್ಸ್‌ನಲ್ಲಿ ಅಂತರ್ಯುದ್ಧ (ಮೊದಲ ಕಾರ್ಮಿಕ ಪ್ರಭುತ್ವ – 1871)
- ಆರ್ಥಿಕ ಮತ್ತು ತತ್ವಶಾಸ್ತ್ರೀಯ ಕೈಬರಹಗಳು–1844
- ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೆ ಒಂದು ಕೊಡುಗೆ
- ಲೂಯಿ ಬೊನಪಾರ್ಟೆಯ 18ನೇ ಬ್ರೂಮೇರ್
- ತತ್ವಶಾಸ್ತ್ರದ ಬಡತನ

ಇಂದೇ ರೂ. 1400 ಪಾವತಿಸಿ ಪ್ರಕಟಣಪೂರ್ವ ಕೂಪನ್ ಖರೀದಿಸಿ, ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ. ಪುಸ್ತಕಗಳನ್ನು ಅಂಚೆ/ಕೊರಿಯರ್ ಮೂಲಕ ನಿಮ್ಮ ಮನೆಬಾಗಿಲಿಗೆ ತಲುಪಿಸಲಾಗುವುದು. ರವಾನೆ ಉಚಿತ. ನಿಮ್ಮ ಗೆಳೆಯರಿಗೆ, ನೀವು ಓದಿದ ಶಾಲೆ-ಕಾಲೇಜುಗಳಿಗೆ, ಇತರ ಸಂಘ-ಸಂಸ್ಥೆ-ಗ್ರಂಥಾಲಯಗಳಿಗೆ ಈ ಪುಸ್ತಕಗಳನ್ನು ಉಡುಗೊರೆಯಾಗಿ ನೀಡಿ ಈ ಯೋಜನೆಯನ್ನು ಯಶಸ್ವಿಗೊಳಿಸಲು ಸಹಕರಿಸಿ.

**ಈ ಏಳು ಪುಸ್ತಕಗಳ ಒಟ್ಟು ಮುಖಬೆಲೆ ರೂ. 2100/–**
**ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 1400/–**

**ರೂ.700/- ರಿಯಾಯಿತಿ**

ಪ್ರಕಟಣಪೂರ್ವ ಕೂಪನ್ ಖರೀದಿಸಲು ಒಂದು ಸೆಟ್‌ಗೆ ರೂ. 1400ರಂತೆ ಹಣವನ್ನು ನಮ್ಮ ಮಳಿಗೆಗಳಲ್ಲಿ ನಗದು ಪಾವತಿಸಿ, ಇಲ್ಲವೇ ನಮ್ಮ ಬ್ಯಾಂಕ್ ಖಾತೆಗೆ ವರ್ಗಾಯಿಸಿ ಅಥವಾ ಆನ್‌ಲೈನ್ ಮೂಲಕ ಸಂದಾಯ ಮಾಡಿ. ಬ್ಯಾಂಕ್ ಖಾತೆಯ ವಿವರಗಳು : Current A/c No. 0788201010612. IFSC Code CNRB0000788 ಕೆನರಾ ಬ್ಯಾಂಕ್, ಮಾಧವನಗರ, ಬೆಂಗಳೂರು (ಬ್ಯಾಂಕ್ ಖಾತೆಗೆ ನೇರವಾಗಿ ಹಣ ವರ್ಗಾಯಿಸಿದವರು navakarnataka@gmail.comಗೆ ವಿವರಗಳನ್ನು ಹಾಗೂ ದಾಖಲೆಗಳನ್ನು ಒದಗಿಸುವುದು.)

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಪ್ರಧಾನ ಕಛೇರಿ : ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560 001. ಫೋನ್ : 080-22161900/01 , ಮೊಬೈಲ್ : 9972590106

e-mail : navakarnataka@gmail.com Shop Online www.navakarnataka.com

ಶಾಖೆಗಳು

✴ ಕೆಂಪೇಗೌಡ ರಸ್ತೆ, ಬೆಂಗಳೂರು-560 009. ಮೊ : 9480686859 ✴ ಗಾಂಧಿನಗರ, ಬೆಂಗಳೂರು-560 009. ಮೊ : 9480686862
✴ ಕೆ. ಎಸ್. ರಾವ್ ರಸ್ತೆ, ಮಂಗಳೂರು-575 001. ಮೊ : 9480686864 ✴ ಬಲ್ಮಠ, ಮಂಗಳೂರು-575 001. ಮೊ : 9480686866
✴ ರಾಮಸ್ವಾಮಿ ವೃತ್ತ, ಮೈಸೂರು-570 024. ಮೊ : 9480686863 ✴ ಸ್ಟೇಷನ್ ರಸ್ತೆ, ಕಲಬುರಗಿ-585 102. ಮೊ : 9480686865

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಉಮೇಶ ಹಿರೇಮಠ,
ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ

**ಮುಖಪುಟ :** ಕಲಾವಿದ ಎಫ್. ವಿ. ಚಿಕ್ಕಮಠ ಅವರ ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಎರಡು ದಿನಗಳ ಹಿಂದೆ ಟೆಲಿವಿಷನ್ನಲ್ಲಿ ಕಂಡ ಒಂದು ದೃಶ್ಯ. ಯಾವುದೋ ಟಿ.ವಿ. ಚಾನೆಲ್‌ಗೆ ಬೇಕಾಗಿದ್ದರು ಆಂಕರುಗಳು, ಕಲಾವಿದರು, ಇತ್ಯಾದಿ. ಗೇಟು ತೆರೆಯುತ್ತಿದ್ದಂತೆ ಸಾವಿರಾರು ಆಕಾಂಕ್ಷಿಗಳ ನುಗ್ಗಾಟ, ಪೊಲೀಸರಿಂದ ಲಾಠಿ ಏಟು. ಎಲ್ಲ ಯುವಜನರ ದಂಡು. ಇಂಥ ದೃಶ್ಯ ಅಪರೂಪವೇನಲ್ಲ. ದೇಶದಲ್ಲಿ ತಾಂಡವವಾಡುತ್ತಿರುವ ನಿರುದ್ಯೋಗಕ್ಕೆ ಅದು ಸಾಕ್ಷಿ. ಮೊನ್ನೆ ಮೋದಿ ಬೆಂಗಳೂರಿಗೆ ಬಂದು ಭಾಜಪ ರ‍್ಯಾಲಿಯಲ್ಲಿ ಭಾಗಿಯಾದಾಗ ಅರಮನೆ ಮೈದಾನದ ರಸ್ತೆಯಲ್ಲಿ ಕಾನ್ವೊಕೇಶನ್ ದಿರಿಸು ಧರಿಸಿ ವಿದ್ಯಾರ್ಥಿಗಳ ತಂಡವೊಂದು ಪಕೋಡ ಮಾರಾಟ ಮಾಡುತ್ತಿದ್ದರು, ಪ್ರತಿಭಟನಾರ್ಥವಾಗಿ. ಅವರನ್ನು ಪೊಲೀಸರು ಹಿಡಿದು ವ್ಯಾನಿನಲ್ಲಿ ತುಂಬಿ ಕೊಂಡೊಯ್ದರು. ಪಕೋಡಾ ಮಾರುವುದೂ ಒಂದು ಉದ್ಯೋಗವೇ ಎಂದು ಪ್ರಧಾನಿ ಖಾಸಗಿ ಟಿ.ವಿ. ವಾಹಿನಿಗೆ ನೀಡಿದ ಸಂದರ್ಶನದಲ್ಲಿ ಹೇಳಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅಧಿಕಾರಕ್ಕೇರುವ ಮುನ್ನ ಮೋದಿ ಎರಡು ಕೋಟಿ ಉದ್ಯೋಗ ಕಲ್ಪಿಸುವುದಾಗಿ ಭರವಸೆ ನೀಡಿದ್ದರು. ಇತರ ಎಲ್ಲ ಭರವಸೆಗಳಂತೆಯೇ ಅದೂ ಹುಸಿಯಾಯಿತು. ನಾಲ್ಕು ವರ್ಷ ಕಳೆದರೂ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಲಿದೆಯೇ ಹೊರತು ಕಮ್ಮಿಯಾಗಿಲ್ಲ. ಮೋದಿ ಮಾತ್ರ ಹೊಸ ಹೊಸ ಭರವಸೆಗಳನ್ನು ನೀಡುತ್ತಲೇ ಇದ್ದಾರೆ. ಪಕೋಡಾ ಪ್ರಕರಣ ಲೋಕಸಭೆಯಲ್ಲೂ, ರಾಜ್ಯಸಭೆಯಲ್ಲೂ ಅನುರಣಿಸಿತು. ಮೋದಿ ಯಥಾಪ್ರಕಾರ ಪ್ರತಿಪಕ್ಷಗಳ ಮೇಲೆ ಹರಿಹಾಯ್ದರು, ತಮ್ಮ ಸರಕಾರದ ಅಭಿವೃದ್ಧಿಪರ ಮಂತ್ರ ಜಪಿಸಿದರು ಅಷ್ಟೆ. ಪಕೋಡಾ ಪ್ರಸ್ತಾಪ ಮಾಡಲಿಲ್ಲ, ಅದನ್ನು ಮಿತ್ರ ಅಮಿತ್ ಶಾಗೆ ಬಿಟ್ಟರು. ಅಂತೂ ನಿರುದ್ಯೋಗಕ್ಕಿಂತ ಪಕೋಡಾ ಮಾರಾಟವೇ ಲೇಸು. ಇನ್ನೇಕೆ ಚಿಂತೆ, ನಿರುದ್ಯೋಗ ಸಮಸ್ಯೆ ಬಗೆಹರಿಯಿತಲ್ಲ!

*  *  *

ಸಾಮಾಜಿಕ ಜಾಲ ತಾಣ ಈಗ ಬಹುದೊಡ್ಡ ಪ್ರಭಾವಶಾಲಿ ಮಾಧ್ಯಮವಾಗಿ ಬಿಟ್ಟಿದೆ. ಫೇಸ್‌ಬುಕ್, ವಾಟ್ಸ್‌ಅಪ್, ಟ್ವೀಟ್ ಮುಂತಾದವನ್ನೆಲ್ಲ ಗಮನಕ್ಕೆ ತೆಗೆದು ಕೊಳ್ಳದೇ ಬಿಡಲಾಗದು. ಬಹುತೇಕ ರಾಜಕಾರಣಿಗಳಿಗೆ ಅದು ಭಾರಿ ತಲೆನೋವು. ಹಿರಿಯ ವಕೀಲ ಪ್ರಶಾಂತ್ ಭೂಷಣ್ ಅವರ ಒಂದು ಟ್ವೀಟ್ ನನ್ನ ಗಮನ ಸೆಳೆಯಿತು. ಅದು ಇಂತಿದೆ : ಮೋದಿಯವರ ಸ್ನೇಹಿತ ಇಸ್ರೇಲ್‌ನ ಪ್ರಧಾನಿ ನೆತನ್ಯಾಹು ವಿರುದ್ಧ ಅಲ್ಲಿನ ಪೊಲೀಸರು ಲಂಚ, ವಂಚನೆ ಹಾಗೂ ವಿಶ್ವಾಸಘಾತುಕತನ ಆರೋಪದ ಎರಡು ಪ್ರಕರಣಗಳನ್ನು ದಾಖಲಿಸಿದ್ದಾರೆ. ನಮ್ಮಲ್ಲೂ ಸಿಬಿಐ, ಪಂಜರದ ಗಿಣಿ ಆಗಿರದಿದ್ದರೆ ಬಿರ್ಲಾ ಸಹಾರ ಲಂಚ ಪ್ರಕರಣ ಹಾಗೂ ರಫೇಲ್ ಹಗರಣದಲ್ಲಿ ಮೋದಿಗೆ ಇದೇ ಪರಿಸ್ಥಿತಿ ಬರುತ್ತಿತ್ತು. ಇದು ಅಕ್ಷರಶಃ ನಿಜ. ಅಮಿತ್ ಶಾ–ಮೋದಿ ಮೊದಲಾದವರು ಯಾವ ಭೀತಿಯು ಇಲ್ಲದೆ ಓಡಾಡಿಕೊಂಡಿರುವುದೇ ಸಾಕ್ಷಿ.

ನೆತನ್ಯಾಹುಗೆ ಶಿಕ್ಷೆಯಾಗುತ್ತದೋ, ಇಲ್ಲವೋ ಅದು ಬೇರೇ ವಿಷಯ, ಮೋದಿ–ಶಾಗಂತೂ ಆ ಭಯವಿಲ್ಲ. ಅಂದಹಾಗೆ ಈಚೆಗೆ ಇಸ್ರೇಲಿ ನಾಯಕ ಬಹುದೊಡ್ಡ ತಂಡದೊಂದಿಗೆ ಭಾರತಕ್ಕೆ ಬಂದಿದ್ದ. ಗೆಳೆಯ ಮೋದಿಯನ್ನು ಅಪ್ಪಿಕೊಂಡು, ಹಲವು ಒಪ್ಪಂದಗಳಿಗೆ ಸಹಿ ಹಾಕಿ, ಪ್ರಮುಖ ಶಸ್ತ್ರಾಸ್ತ್ರ ಸರಬರಾಜುಗಾರನಾಗಿ ಬಿಟ್ಟಿದ್ದಾನೆ. ಪ್ಯಾಲಸ್ತೈನಿನ ಬಹುಭಾಗ ನುಂಗಿ ಹಾಕಿರುವ ಇಸ್ರೇಲಿನೊಂದಿಗೆ ನಮ್ಮ ನಂಟು ಭಾಜಪ ಆಡಳಿತದಲ್ಲಿ ಪುಷ್ಟಿಯಾಗಿ ವರ್ಧಿಸುತ್ತಿದೆ. ಭಾರತ ಯಾವತ್ತೂ ಪ್ಯಾಲಸ್ತೀನ್ ಅರಬ್ಬರ ಸ್ವತಂತ್ರ ರಾಷ್ಟ್ರ ಸ್ಥಾಪನೆ ಹೋರಾಟಕ್ಕೆ ಬೆಂಬಲ ನೀಡುತ್ತ ಬಂದಿತ್ತು. ಭಾಜಪ ಅಧಿಕಾರಕ್ಕೆ ಬರುವವರೆಗೆ ಇಸ್ರೇಲಿನೊಂದಿಗೆ ರಾಯಭಾರಿ ಸಂಬಂಧವೂ ಇರಲಿಲ್ಲ. ಈಗ ಇಸ್ರೇಲ್ ಪರಮಮಿತ್ರ. ಪ್ರಾಯಶ್ಚಿತ್ತವೋ ಎನ್ನುವಂತೆ ಮೋದಿ ಮೊನ್ನೆ ಪ್ಯಾಲಸ್ತೈನ್‌ಗೆ ಹಾರಿದ್ದರು ಜೋರ್ಡಾನಿನಿಂದ. ಕೆಲಗಂಟೆಗಳ ಕಾಲ ಇದ್ದ ಅವರು ಬುದ್ಧಿವಂತಿಕೆಯಿಂದ ಔಪಚಾರಿಕವಾಗಿ ಪ್ಯಾಲಸ್ತೈನ್ ಹೋರಾಟಕ್ಕೆ ಬೆಂಬಲ ಸೂಚಿಸಿದರು. ವಿವಾದಾತ್ಮಕವಾದ ಯಾವ ವಿಷಯವನ್ನೂ ಪ್ರಸ್ತಾಪಿಸಲಿಲ್ಲ,

(೬ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೮ ಮಾರ್ಚ್ ೨೦೧೮



■ **ಮುದ್ರಣ**
**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

# ಸಂಪಾದಕೀಯ

## ಮಹಿಳೆಗೆ ಹೊರೆಯಾದ 'ಸಂಸ್ಕೃತಿ'ಯ ಕಿರೀಟ

"ತೊಡಿಸದಿರು ಚಂದ್ರ ಕಿರೀಟವನು, ಕೊರಳಿಗೆ ಭಾರ ನಕ್ಷತ್ರ ಮಾಲೆ" – ಕೆ. ಎಸ್. ನರಸಿಂಹಸ್ವಾಮಿ ಅವರ ಕವನದ ಈ ಸಾಲುಗಳು ತಂದೆ–ಮಗನ ನಡುವಿನ ಸಂಭಾಷಣೆಯ ಮಾತುಗಳು. ಆದರೆ ಈ ಮಾತನ್ನು ಇಂದು ಪುರುಷ ಸಮಾಜಕ್ಕೆ ಹೆಣ್ಣು ಹೇಳುತ್ತಿರುವ ಮಾತುಗಳಾಗಿ ಓದಿಕೊಳ್ಳಬೇಕಾದ ತುರ್ತು ಒದಗಿಬಂದಿದೆ. ಹೆಣ್ಣಿಗೇ ವಿಶಿಷ್ಟವಾದ ವಸ್ತ್ರಸಂಹಿತೆ, ನೀತಿಸಂಹಿತೆ ಮತ್ತು ಆಚಾರಸಂಹಿತೆಯನ್ನು ಬೋಧಿಸುತ್ತಾ ಅದೇ ನಿಜವಾದ 'ಭಾರತೀಯ ಸಂಸ್ಕೃತಿ' ಎಂದು ವ್ಯಾಖ್ಯಾನಿಸುತ್ತಿರುವ ಇಂದಿನ ಸಂದರ್ಭದಲ್ಲಿ ಮಹಿಳೆಗೆ ಹೆಚ್ಚು ಹೆಚ್ಚು ಲಕ್ಷ್ಮಣ ರೇಖೆಗಳು ಸೃಷ್ಟಿಯಾಗುತ್ತಿವೆ. ಈ ಲಕ್ಷ್ಮಣ ರೇಖೆಗಳು ಚಂದ್ರ, ನಕ್ಷತ್ರರಂತೆ ಆಕರ್ಷಕವಾಗಿ ಕಂಡರೂ ಅವು ಬೇಡಿಗಳೇ.

ವಸಾಹತುಶಾಹಿ ಭಾರತದಲ್ಲಿ ರಾಷ್ಟ್ರೀಯತಾ ಚಳುವಳಿ ಬಿರುಸಾಗಿದ್ದಾಗ ರಾಷ್ಟ್ರೀಯತೆಯ ನಿರ್ಮಾಣದ ಕೇಂದ್ರವೇ ಗಾಢವಾದ ಸ್ತ್ರೀತ್ವದ ಆಯಾಮಗಳಿಂದ ಆವೃತವಾಗಿದ್ದನ್ನು ಕಾಣುತ್ತೇವೆ. ವಿಶೇಷವಾಗಿ ಪೌರ್ವಾತ್ಯ ಸಮಾಜಗಳಲ್ಲಿ ಹೆಣ್ಣನ್ನು ಸಮಾಜದ ಭಾಗವಾಗಿಯೇ ಗ್ರಹಿಸಲಾಗುತ್ತದೆ. ಆಶೀಶ್ ನಂದಿಯವರು ೧೯೮೦ರಲ್ಲಿ ಹೇಳಿದಂತೆ "ವಸಾಹತುಶಾಹಿ ಭಾರತದಲ್ಲಿ ಭಾರತೀಯ ಸಮಾಜದ ಸಂಸ್ಕೃತಿಯ ಅಂತಃಸತ್ವವನ್ನು ಶೋಧಿಸುವ ಕೆಲಸ ಉಗ್ರ ತಪಸ್ಸಿನಂತೆ ನಡೆಯುತ್ತಿತ್ತು. ಇಲ್ಲಿ ಭಾರತೀಯ ಸ್ತ್ರೀತ್ವ ಎನ್ನುವುದು ಈ ಸಂಸ್ಕೃತಿಯ ಮಕುಟಮಣಿಯಾಗಿ ರೂಪುಗೊಂಡಿತು." ಹೀಗೆ 'ಭಾರತೀಯ ಸಂಸ್ಕೃತಿ'ಯ ಚೌಕಟ್ಟಿನಲ್ಲಿ ವ್ಯಾಖ್ಯಾನಗೊಂಡ ಭಾರತೀಯ ಮಹಿಳೆಯ ಚಿತ್ರಣವು ಈ ಕಳೆದ ನೂರು ವರ್ಷಗಳಲ್ಲಿ ಮಹತ್ತರ ಬದಲಾವಣೆಯನ್ನೇನೂ ಕಂಡಿಲ್ಲ. ಅದಕ್ಕೆ ಮುಖ್ಯ ಕಾರಣ, ಅವಳನ್ನು ದಮನ ಮಾಡುತ್ತಲೇ ಜೊತೆಜೊತೆಗೇ ಅವಳನ್ನು 'ಶಕ್ತಿ'ಯಾಗಿ ಮತ್ತು 'ದೇವಿ'ಯಾಗಿ ವೈಭವಿಸುತ್ತಾ ಬಂದಿರುವ ಮಾನಸಿಕ ಸ್ಥಿತಿಯೇ ಆಗಿದೆ. ವರ್ಗ, ಭಾಷೆ, ಜಾತಿ, ಧರ್ಮದ ಶ್ರೇಣೀಕರಣಗೊಂಡ ನಮ್ಮ ಭಾರತೀಯ ಸಮಾಜದ ವಿವಿಧ ಸಮುದಾಯಗಳ ವೈವಿಧ್ಯಮಯ ಜೀವನ ವಿಧಾನವನ್ನು ಗಣನೆಗೆ ತೆಗೆದುಕೊಳ್ಳದೆ 'ಸಂಸ್ಕೃತಿ' ಯೆಂಬ ಪರಿಕಲ್ಪನೆಯನ್ನು ಏಕಪ್ರಕಾರವಾಗಿ ಬಳಸುವುದರ ವಿರುದ್ಧವೇ ಗಂಭೀರ ಚಿಂತನೆಗಳು ನಡೆಯಬೇಕಾಗಿದೆ.

ಇಂದು ಸಂಸ್ಕೃತಿಯ ವಕ್ತಾರರ ಸಂಖ್ಯೆ ಹೆಚ್ಚಿದೆ. ನಾವು ಓದುವ ದಿನಪತ್ರಿಕೆಯಲ್ಲಿ, ನೋಡುವ ಟಿ.ವಿ.ಯ ವಿವಿಧ ಚಾನೆಲ್‌ಗಳಲ್ಲಿ, ಸಾರ್ವಜನಿಕ ಸಭೆ, ಸಮಾರಂಭಗಳಲ್ಲಿ ಎಲ್ಲೆಲ್ಲೂ ಸಂಸ್ಕೃತಿಯ ವಿವಿಧ ವಿಶ್ಲೇಷಣೆಗಳು ಕೇಳಿಬರುತ್ತವೆ. ಯಾವ ಪುಸ್ತಕ ಓದಬಾರದು, ಯಾವ ಚಿತ್ರ ನೋಡಬಾರದು, ಯಾವ ಉಡುಗೆ ತೊಡಬಾರದು, ಯಾವ ಆಹಾರ ತಿನ್ನಬಾರದು, ಯಾರು, ಎಲ್ಲೆಲ್ಲಿಗೆ ಹೋಗಬಾರದು – ಎಂಬ ದೀರ್ಘವಾದ ಪಟ್ಟಿಯೊಂದಿಗೆ ಸಂಸ್ಕೃತಿಯ ಚಿಂತನೆಯು ನಡೆಯುತ್ತದೆ. ಅದರೊಂದಿಗೆ, ಪಾಶ್ಚಾತ್ಯ ಸಂಸ್ಕೃತಿಯ ದಾಳಿಗೆ ಸಿಕ್ಕಿದ ನಮ್ಮ ಸಂಸ್ಕೃತಿಯನ್ನು ರಕ್ಷಿಸುವ ಸಲುವಾಗಿ ಕೆಲವೊಂದು ಆಚರಣೆಗಳು, ಕಾರ್ಯಕ್ರಮಗಳು ಭರದಿಂದ ಸಾಗಿವೆ. ಭಾರತದಲ್ಲಿ ಕಳೆದ ಒಂದೆರಡು ದಶಕದಲ್ಲಿ ನಡೆದಿರುವಷ್ಟು 'ಸಂಸ್ಕೃತಿ'ಯ ಬಗೆಗಿನ ಚಿಂತನೆ, ಸಂಶೋಧನೆ, ಚಳುವಳಿ, ಹೋರಾಟ – ಇವು ಬೇರೆ ಯಾವ ಸಂದರ್ಭದಲ್ಲೂ ನಡೆದಿಲ್ಲ. ಸಂಸ್ಕೃತಿಯೆಂದರೆ ಅದೊಂದು ಜನಸಮುದಾಯದ ಜೀವನಕ್ರಮ, ಜನರ ಆಚಾರ–ವ್ಯವಹಾರಗಳು ಎಂಬ ವ್ಯಾಖ್ಯಾನವನ್ನು ನಮ್ಮ ಸಮಾಜಶಾಸ್ತ್ರಜ್ಞರು ಈಗಾಗಲೇ ಕೊಟ್ಟಿದ್ದಾರೆ. ಹಾಗಾದರೆ 'ಸಂಸ್ಕೃತಿ' ಎನ್ನುವ ಪರಿಕಲ್ಪನೆಗೆ ದಿಢೀರನೆ ಒದಗಿಬಂದ ಈ ಪ್ರಾಶಸ್ತ್ಯಕ್ಕೆ ಕಾರಣವೇನು? ಅದರಲ್ಲೂ ಸಾಂಸ್ಕೃತಿಕ ರಾಜಕಾರಣದಲ್ಲಿ ನಡೆಯುವ ಲಿಂಗರಾಜಕಾರಣ ನಿಜಕ್ಕೂ ಆತಂಕ ಹುಟ್ಟಿಸುವಂತಹುದು.

ಇಂದಿನ ಕಾರ್ಪೊರೇಟ್‌ಶಾಹಿ ಭಾರತದಲ್ಲಿ 'ಮಹಿಳೆ'ಯ ಸಾಂಸ್ಕೃತಿಕ ಅಸ್ಮಿತೆಯು ಶೋಷಣಾತ್ಮಕವಾಗಿ ಪುನರ್ ರಚಿಸಲ್ಪಡುತ್ತಿದೆ. ಭ್ರಮೆಯ ಪಾತಾಳದಲ್ಲಿ ಅವಳು ಬದುಕುತ್ತಿದ್ದಾಳೆ. ಮೇಲ್ನೋಟಕ್ಕೆ ಹಲವಾರು ಆದ್ಯತೆಗಳಿರುವಂತೆ ಕಂಡರೂ ವಾಸ್ತವದಲ್ಲಿ ಅವಳು ಸೀಮಿತ ಚೌಕಟ್ಟಿನಲ್ಲಿಯೇ ಬದುಕಬೇಕಾಗಿದೆ. ಯಾರೊಡನೆ ಮಾತನಾಡಬೇಕು, ಎಂತಹ ವಸ್ತ್ರ ಧರಿಸಬೇಕು ಹಾಗೂ ಯಾರನ್ನು ಮದುವೆಯಾಗಬೇಕು, ಎಂಬುದನ್ನೆಲ್ಲಾ ಅವಳ ಕುಟುಂಬದ ಹಾಗೂ ಸಮುದಾಯದ ಮರ್ಯಾದೆಯ ಪರಿಧಿಯು ನಿರ್ಧರಿಸುತ್ತದೆ. ಅವಳ ಮೇಲೆ ಘಟಿಸುತ್ತಿರುವ ಎಲ್ಲ ದೌರ್ಜನ್ಯಗಳಿಗೂ ಅವಳು ತೊಡುವ ಬಟ್ಟೆಯೋ, ಅವಳ ಬಹಿರಂಗ ಚಟುವಟಿಕೆಯೋ ಕಾರಣವೆಂದು ಹೇಳುತ್ತಾ ಅವಳ ಚಲನಶೀಲತೆಗೆ ದಿಗ್ಬಂಧನಗಳನ್ನು ಹಾಕಲಾಗುತ್ತಿದೆ. ಹೆಣ್ಣಿನ ತೀವ್ರವಾದ ವೈಯಕ್ತಿಕತೆ, ಮಹತ್ವಾಕಾಂಕ್ಷೆ ಮತ್ತು ಅವಳ ಆಯ್ಕೆಯ ಸ್ವಾತಂತ್ರ್ಯದ ಹಕ್ಕು – ಈ ಗುಣಗಳು ಭಾರತೀಯ ಸಂಸ್ಕೃತಿಗೆ ಸವಾಲಾಗುವ ಇಲ್ಲವೆ ತೀರಾ ಅವಮಾನ ಮಾಡುವ ಗುಣಗಳಾಗಿ ಕಾಣುತ್ತವೆ.

ಆಧುನಿಕತೆ v/s ಸಂಸ್ಕೃತಿ ಎಂಬರ್ಥದಲ್ಲಿ ಇಂದು ಸಂಸ್ಕೃತಿಯ ವಿಶ್ಲೇಷಣೆ ಸಾಗಿದೆ. ಮಹಿಳೆಯರ ಆಧುನಿಕ ವೇಷಭೂಷಣಗಳು ಹಾಗೂ ಅವಳು ಮೊಬೈಲ್ ಬಳಸುವುದು ಅವಳ ಮೇಲಿನ ಹಲ್ಲೆಗೆ ದಾರಿ ಮಾಡಿಕೊಡುತ್ತದೆ. ಹೆಣ್ಣು ಸಂಸ್ಕೃತಿಯ ರಕ್ಷಕಳಾಗಿರಬೇಕು, ಎಂದರೆ ಅವಳು ಆಧುನಿಕತೆಗೆ ವಿರುದ್ಧವಾಗಿರಬೇಕು ಎನ್ನುವ ಚಿಂತನೆಗಳೇ ಇರುವುದರಿಂದ ಪಬ್ ದಾಳಿ ನಡೆದಾಗ ಮಹಿಳೆಯರ ಮೇಲಾದ ಹಲ್ಲೆಯನ್ನು ಅವರಿಗೆ ತಕ್ಕ ಶಾಸ್ತಿಯಾಯ್ತು ಎಂದು ವ್ಯಾಖ್ಯಾನಿಸಿದ ಮನಸ್ಸುಗಳು ಹಲವಾರು ಇದ್ದವು. ಅಲ್ಲದೆ ಇಂದು ಅಸ್ಮಿತೆಯ ಗುಂಪುಗಳಾದ ಜಾತಿ, ಲಿಂಗಭೇದಗಳು ಹೊಸ ತರಹದ ಗೋಡೆಗಳನ್ನೆಬ್ಬಿಸಿಕೊಂಡು ಮೇಲೇರುತ್ತಿವೆ. ಹೆಂಗಸರನ್ನು ಶೋಷಿಸುವ, ಅಲ್ಪಸಂಖ್ಯಾತರನ್ನು ಹೆದರಿಸುವ ನವೀನ ರೀತಿಯ ಪಿತೃಪ್ರಾಧಾನ್ಯತೆಗಳು ಹುಟ್ಟಿಕೊಳ್ಳುತ್ತಿವೆ. ಗ್ರಾಹಕ ಸಂಸ್ಕೃತಿಯನ್ನು ವೈಭವೀಕರಿಸುವ ಪ್ರಯತ್ನದಲ್ಲಿ ಮದರ್‌ಡೆ, ಫಾದರ್‌ಡೆ ಮತ್ತು ವ್ಯಾಲಂಟೈನ್ಸ್‌ಡೆಗಳು 'ಆಧುನಿಕತೆ'ಯನ್ನು ವೈಭವೀಕರಿಸುವ ಪ್ರಯತ್ನ ಒಂದೆಡೆಯಾದರೆ, ಇದನ್ನು ಕುರಿತ ಜನಪ್ರಿಯ ಸಿನಿಮಾ, ಟಿ.ವಿ. ಚಾನೆಲ್‌ಗಳು ಮತ್ತು ಸೋಶಿಯಲ್ ಮೀಡಿಯಾಗಳು ಹೆಣ್ಣನ್ನು ಅರಿಶಿನ, ಕುಂಕುಮ

ತಾಳಿಭಾಗ್ಯ ಹಾಗೂ ಆಣೆ–ಪ್ರಮಾಣಗಳ ಸಾಂಸ್ಕೃತಿಕ ಚೌಕಟ್ಟಿಗೇ ಜೋತುಬೀಳಿಸುತ್ತವೆ. ಅಂದರೆ ಹೊಸ ವಿಚಾರಗಳು ಮತ್ತು ಉದಾರ ಮೌಲ್ಯಗಳು ಆಧುನಿಕತೆ ಎನ್ನುವುದಾಗಲಿ, ಅದನ್ನು ಹೆಣ್ಣು ಬಯಸಬೇಕೆಂದಾಗಲೀ ನಮ್ಮ ಸಂಸ್ಕೃತಿಯ ವಕ್ತಾರರು ಯೋಚಿಸಲೂ ಸಾಧ್ಯವಿಲ್ಲ.

ಹೆಣ್ಣಿನ ಸಾಂಪ್ರದಾಯಿಕ ಪಾತ್ರಗಳ ಮೇಲೆ ವಿಶೇಷ ಒತ್ತು ಬೀಳುತ್ತಿದೆ. ಮಹಿಳೆಯರ ಮೇಲೆ ಅವರ ಸಮುದಾಯದ ಶುದ್ಧತೆ ಮತ್ತು ಒಗ್ಗಟ್ಟನ್ನು ಕಾಯ್ದುಕೊಳ್ಳುವ ಹೆಚ್ಚಿನ ಹೊಣೆಗಾರಿಕೆಯನ್ನು ಹೊರಿಸಲಾಗುತ್ತಿದೆ. ಹಿಂದೂ ಮಹಿಳೆಯರು ಹೆಚ್ಚು ಮಕ್ಕಳನ್ನು ಹೆರಬೇಕು ಎನ್ನುವ ವಿಶ್ವ ಹಿಂದೂ ಪರಿಷತ್ತಿನ ಹೇಳಿಕೆಯು ಸಮಾಜದ ಮೂಲಭೂತವಾದಿ ಐಡಿಯಾಲಜಿಯ ನಿರೀಕ್ಷೆಯಾಗಿದೆ. ತಮ್ಮ ನೈತಿಕ ಪೊಲೀಸ್‌ಗಿರಿಯ ಲಾಠಿಯನ್ನು ಅವರ ಸಂಸ್ಕೃತಿಯ ವ್ಯಾಖ್ಯಾನಕ್ಕಾಗಿ ಬಳಸುತ್ತಿದ್ದಾರೆ. ಹಿಂದೆಂದಿಗಿಂತ ಇಂದು ಹೆಣ್ಣುಮಕ್ಕಳು ತಮ್ಮ ಸಂಕಷ್ಟಗಳ ಪರಿಹಾರಕ್ಕೆ ವ್ರತ, ಪೂಜೆ ಪುನಸ್ಕಾರಗಳಲ್ಲಿ ಮುಳುಗಿ ಹೋಗಿದ್ದಾರೆ. ವೈಕುಂಠ ಏಕಾದಶಿಯಂದು ದೇವಾಲಯದ ಮುಂದೆ ನಾವು ಕಾಣುವ ಉದ್ದುದ್ದ ಸಾಲುಗಳು ಮತ್ತು ಅರಮನೆಯ ಮೈದಾನದಲ್ಲಿ ಲಲಿತಾ ಸಹಸ್ರನಾಮ ಹೇಳಲು ಸಹಸ್ರ ಸಂಖ್ಯೆಯಲ್ಲಿ ಸೇರುವ ಹೆಂಗಳೆಯರು ವ್ಯಾಖ್ಯಾನಿಸುತ್ತಿರುವ 'ಸಂಸ್ಕೃತಿ'ಯ ಸ್ವರೂಪವು ಅವರಿಗೆ ಧನ್ಯತೆಯ ಭಾವವನ್ನು ಕೊಡುವುದರ ಜೊತೆಗೆ ಇಂದಿನ ಸಮಕಾಲೀನ ಸಂದರ್ಭದ ಜ್ವಲಂತ ಸಮಸ್ಯೆಗಳನ್ನು ವಿಸ್ಮೃತಿಗೆ ತಳ್ಳಲು ರಾಮಬಾಣವೂ ಆಗಿದೆ. ಈ ಗೋಷ್ಠಿಗಳನ್ನು ಉದ್ಘಾಟಿಸಲು ದೆಹಲಿಯಿಂದ ಬರುವ ನೇತಾಗಳು ಸಂಸ್ಕೃತಿಯ ವ್ಯಾಖ್ಯಾನಕ್ಕೆ ರಾಜಕೀಯ ಆಯಾಮವನ್ನು ತೊಡಿಸುವ ಮತ್ತು ತಮ್ಮ ಮತ ಬ್ಯಾಂಕುಗಳನ್ನು ಭದ್ರಗೊಳಿಸುವ ಸಂಸ್ಕೃತಿಯ ವಿಸ್ತರಣೆಯಾಗಿದ್ದಾರೆ.

ನಮ್ಮ ಸಂವಿಧಾನದ ರಚನಕಾರರಲ್ಲಿ ಮುಖ್ಯರಾದ ಡಾ॥ ಅಂಬೇಡ್ಕರ್‌ರವರು ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನವನ್ನು ಕುರಿತಂತೆ ಹೀಗೆ ಹೇಳಿದ್ದರು : "ಒಂದು ಸಮಾಜದ ಪ್ರಗತಿಯ ಮಾಪನ ಮಾಡಬೇಕಾದರೆ, ಆ ಸಮಾಜದಲ್ಲಿರುವ ಹೆಣ್ಣಿನ ಸ್ಥಾನಮಾನದ ಮೇಲೆಯೇ ಅದನ್ನು ನಿರ್ಧರಿಸಬೇಕಾಗುತ್ತದೆ" ಎಂದಿದ್ದರು. ಹಾಗೆಯೇ, ಇತ್ತೀಚಿನ ಕೆಲವು ಘಟನೆಗಳನ್ನು ಗಮನಿಸಿದಾಗ ಈ ನಾಡಿನ ಜೀವನಕ್ರಮದಲ್ಲಿ ಹೆಣ್ಣಿನ ಪಾತ್ರವೇನಾಗಿದೆಂಬುದು ನಿಜಕ್ಕೂ ಆಶ್ಚರ್ಯ, ಗಾಬರಿ, ಆತಂಕದ ಸಂಗತಿಗಳಾಗಿವೆ. ಹಾಗಾದರೆ ಈಗ ಯಾರು, ಯಾವ ಸಂಸ್ಕೃತಿಯ ರಕ್ಷಣೆ ಮಾಡಬೇಕು? ಹೇಗೆ ಮತ್ತು ಯಾರಿಂದ ರಕ್ಷಿಸಬೇಕು? ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆಗಳು. ಈ ದಿಕ್ಕಿನಲ್ಲಿ ದಿಕ್ಕು ಕಾಣದ ಪುರುಷ ಪ್ರಧಾನ ಸಮಾಜ ಹಲ್ಲೆ ಮಾಡಿದವರನ್ನು ಶಿಕ್ಷಿಸದೆ, ಹಲ್ಲೆಗೀಡಾದವರನ್ನು ಅನುಮಾನದಿಂದ ನೋಡುತ್ತಿದೆ. ಆದ್ದರಿಂದಲೇ ಅವಳು ತೊಡುವ ಬಟ್ಟೆ, ಮಾಡುವ ಕೆಲಸ, ಕೈಯಲ್ಲಿ ಹಿಡಿಯುವ ಮೊಬೈಲ್, ಸಾಮಾಜಿಕ ಚಟುವಟಿಕೆಗಳನ್ನೆಲ್ಲ ನಿಯಂತ್ರಿಸುವ, ನಿರ್ಬಂಧಿಸುವ ಲಕ್ಷ್ಮಣ ರೇಖೆಗಳು ಸೃಷ್ಟಿಯಾಗುತ್ತಿವೆ. ಎಲ್ಲರೂ ತಮ್ಮ ನೈತಿಕ ಪೊಲೀಸ್‌ಗಿರಿಯ ಲಾಠಿಯನ್ನು ಅವರ ಸಂಸ್ಕೃತಿಯ ವ್ಯಾಖ್ಯಾನಕ್ಕಾಗಿ ಬಳಸುತ್ತಿದ್ದಾರೆ.

ಇಂದು 'ಸಂಸ್ಕೃತಿ'ಯ ನಿರ್ವಚನದಲ್ಲಿಯೇ ಬಿಕ್ಕಟ್ಟಿದೆ. ಅದರ ಜೊತೆಗೆ ಸಾಂಸ್ಕೃತಿಕ ರಾಷ್ಟ್ರೀಯತೆಯೆಂಬ ಮೇಲು ಪದರದ ಹೊದಿಕೆಯೊಂದು ಭಾರತೀಯತ್ವವೆಂಬ ಪರಿಕಲ್ಪನೆಯನ್ನು ಹರಿಯಬಿಟ್ಟು ಬಹುತ್ವದ ಸಮಾಜದ ಮೇಲೆ ಏಕಸಂಸ್ಕೃತಿಯ ಹೆಣ್ಣಿನ ಪರಿಕಲ್ಪನೆಯನ್ನು ಬಿತ್ತುತ್ತಿದೆ ಹಾಗೂ ಏಕ ಸಂಸ್ಕೃತಿಯ ಮೌಲ್ಯಗಳನ್ನು ಹೇರುತ್ತಿದೆ. 'ಪಾಕಿಸ್ತಾನದ ಜನರೂ ನಮ್ಮಂತೆ. ಆ ದೇಶವೂ ಚೆನ್ನಾಗಿದೆ' ಎಂದ ನಟಿ ರಮ್ಯ ಮತ್ತು 'ನನ್ನ ತಂದೆಯನ್ನು ಕೊಂದದ್ದು ಪಾಕಿಸ್ತಾನವಲ್ಲ, ಯುದ್ಧ' ಎಂದ ದೆಹಲಿಯ ವಿದ್ಯಾರ್ಥಿನಿ – ಈ ಇಬ್ಬರೂ ತಕ್ಷಣ ದೇಶದ್ರೋಹಿಗಳೆನಿಸಿಕೊಳ್ಳುವುದು ಈ ಸಂಸ್ಕೃತಿಯ ವೈಚಿತ್ರ್ಯಗಳಲ್ಲೊಂದು. ಭಾರತೀಯ ಸಂಸ್ಕೃತಿ ಎನ್ನುವುದನ್ನು ಶಾಸ್ತ್ರೀಯವಾದ ಬ್ರಾಹ್ಮಣಿಕೆಯಲ್ಲಿ ಗುರುತಿಸುವ ಪ್ರಯತ್ನ ನಡೆಯುತ್ತಿರುವುದರಿಂದ, ಅದರಲ್ಲಿ ಪಿತೃ ಸಂಸ್ಕೃತಿಯ ಕೋರೆ ಹಲ್ಲುಗಳು ಢಾಳಾಗಿ ಕಾಣಿಸುತ್ತಿವೆ. ಸಾಂಸ್ಕೃತಿಕ ರಾಷ್ಟ್ರೀಯತೆಯ ಪರಿಕಲ್ಪನೆಗೆ ಒಂದು ಪುನರುತ್ಥಾನದ ಮತ್ತು ಮತೀಯವಾದದ ಆಯಾಮಗಳನ್ನು ತಮಗರಿವಿಲ್ಲದೆಯೇ ನೀಡಿಬಿಡಲಾಗಿದೆ.

ತನ್ನ ವಿವಾಹದ ಮತ್ತು ತನ್ನ ಮತದ ಆಯ್ಕೆಯನ್ನು ಸಮರ್ಥಿಸಿಕೊಳ್ಳಲು ಕೇರಳದ ಹದಿಯಾ ನಡೆಸಿದ ಹೋರಾಟ ಇಂದಿನ ಹೆಣ್ಣಿನ ಹೋರಾಟದ ಒಂದು ಪರಿಯನ್ನು ತೋರಿಸಿದರೆ, ಸಾಮಾಜಿಕ ಜಾಲತಾಣದಲ್ಲಿ 'ನಾನು ಮುಸ್ಲಿಂರನ್ನು ಇಷ್ಟಪಡುತ್ತೇನೆ, ಎಂದ ಮಾತಿಗೆ ಜೀವಕೊಟ್ಟ ಮಂಗಳೂರಿನ ಧನ್ಯಶ್ರೀಯ ಪ್ರಕರಣ ಆಧುನಿಕ ಜಗತ್ತಿನ ವಿಕೃತಿಗಳಾಗಿ ನಮ್ಮ ಮುಂದೆ ಎದ್ದುಕಾಣುತ್ತಿವೆ. ಈ ಎಲ್ಲ ಘಟನೆಗಳು ಕಳೆದ ದಶಕಗಳಲ್ಲಿ ಪ್ರಖರವಾಗುತ್ತಿರುವ ಜಾಗತೀಕರಣ ಮತ್ತು ಅದರಿಂದಾಗಿ ಹೆಚ್ಚುತ್ತಿರುವ ಧರ್ಮದ ರಾಜಕಾರಣದ ಪರಿಣಾಮವೇ ಆಗಿದೆ ಎಂಬುದು ಇಂದು ಸ್ಪಷ್ಟವಾಗಿ ಅನಾವರಣವಾಗುತ್ತಿದೆ. ಇದು ಇಡೀ ದೇಶದ ನಕಾಶೆಯಲ್ಲಿ ವ್ಯಾಪಕವಾಗಿ ಹರಡಿರುವುದನ್ನು ಕಾಣಬಹುದು. ಕೆಲವು ವರ್ಷಗಳ ಹಿಂದೆ ಮಂಗಳೂರಿನಲ್ಲಿ ನಡೆದ ಪಬ್ ದಾಳಿ, ಹೋಂ ಸ್ಟೇಗಳಲ್ಲಿ ನಡೆದ ದುಂಡಾವರ್ತಿ, ಕೆಲವು ತಿಂಗಳ ಹಿಂದೆ ಹರಿಯಾಣದಲ್ಲಿ ನಲವತ್ತು ವರ್ಷ ವಯಸ್ಸಿನ ಕೆಳಗಿನ ಮಹಿಳೆಯರು ಸಂಜೆಯ ನಂತರ ಹೊರಗೆ ಹೋಗುವಂತಿಲ್ಲ ಎಂದು ಅಲ್ಲಿನ ಕಾಪ್ ಸಮಿತಿಗಳು ಫತ್ವಾ ಹೊರಡಿಸಿವೆ. ಕಾಶ್ಮೀರದಲ್ಲೂ ತಲೆಗೆ ಸ್ಕಾರ್ಫ್ ಇಲ್ಲದೆ ಹೊರಗೆ ಬಂದ ಮಹಿಳೆಯರಿಗೆ ಶಿಕ್ಷೆ. ಈಗಷ್ಟೇ ಝಾರ್‌ಖಂಡ್‌ನ ವಿಮುಕ್ತಿ ಸಂಘದವರು ಹೆಣ್ಣುಮಕ್ಕಳು ಜೀನ್ಸ್ ತೊಟ್ಟರೆ ಅವರ ಮೇಲೆ ಆ್ಯಸಿಡ್ ಎಸೆಯುವುದಾಗಿ ಬೆದರಿಕೆ ಹಾಕಿದ್ದಾರೆ. ಇದಕ್ಕೆ ಕೊನೆಯೇ ಇಲ್ಲ. ಈ ಸಾಂಕ್ರಾಮಿಕ ಕಾಯಿಲೆ ಹಬ್ಬಲು ಜಾಗತೀಕರಣದ ತೈಲ ಸಾಥ್ ನೀಡುತ್ತಿದೆ.

ನಮ್ಮ ಸಂಸ್ಕೃತಿಯ ಕಪ್ಪು ಚುಕ್ಕೆಗಳು ಹಲವಾರಿವೆ : ವರದಕ್ಷಿಣೆ, ವಧೂದಹನ, ಭ್ರೂಣಹತ್ಯೆ, ದೇವದಾಸಿ ಪದ್ಧತಿ ಮುಂತಾಗಿ. ಇವೆಲ್ಲವನ್ನೂ ನಿವಾರಿಸುವ ಪ್ರಯತ್ನ ಮಾಡದೆ, ಯಾರು ಎಷ್ಟು ಬಟ್ಟೆ ಹಾಕಿಕೊಂಡರು? ಏಕೆ ಪಾರ್ಟಿ ಮಾಡಿದರು? ಎನ್ನುವ ನಗಣ್ಯ ವಿಷಯಗಳ ಬಗ್ಗೆ ತಲೆಕೆಡಿಸಿಕೊಳ್ಳುವುದನ್ನು ಮೊದಲು ನಿಲ್ಲಿಸಬೇಕಿದೆ. ಹಾಗೆಯೇ ಹೆಣ್ಣು ಕೂಡ 'ನಾನು ದೇವಿಯಲ್ಲ, ದೆವ್ವವಲ್ಲ ನಾನು ಮನುಜಳು' ಎಂಬ ಭಾವವನ್ನು ಬೆಳೆಸಿಕೊಳ್ಳಬೇಕಿದೆ. ಒಟ್ಟಿನಲ್ಲಿ ಸಂಸ್ಕೃತಿಯ ಪ್ರಾತಿನಿಧಿತ್ವನ್ನುವುದು ಮಹಿಳೆಯರಿಗೆ ಹೊರೆಯೂ ಹೌದು, ಸೆರೆಯೂ ಹೌದು. ಇನ್ನೂ ಹೆಚ್ಚೆಂದರೆ ಕೆಲವೊಮ್ಮೆ ಉರುಳೂ ಆಗಬಹುದು. ಇವೆಲ್ಲದರಿಂದ ಮುಕ್ತವಾಗುವುದು ಹೇಗೆಂಬುದೇ ಇಂದಿನ ಮಹಿಳಾ ಚಳುವಳಿಯ ಮುಂದಿರುವ ಸವಾಲು ಆಗಿದೆ. ಆಗ ಮಾತ್ರ ಮಾನವೀಯ ಘನತೆಯನ್ನು ಎತ್ತಿಹಿಡಿಯುವ ರಾಜಕೀಯ ನಿರ್ಧಾರಗಳಿಂದ ರೂಪಿತವಾದ ಸಮಾಜದ ಎಲ್ಲ ವರ್ಗದವರ ಸೃಜನಶೀಲ ಅಭಿವ್ಯಕ್ತಿಯೇ ಸಂಸ್ಕೃತಿಯೆಂಬ ವ್ಯಾಖ್ಯಾನವನ್ನು ಬದಲಿಸುವುದು ಸಾಧ್ಯವಾಗುತ್ತದೆ.

ಗಾಯತ್ರಿ. ಎಸ್.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

■ **ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಇನ್ನೊಬ್ಬ ಆಪ್ತ ಅಮೆರಿಕದ ಟ್ರಂಪ್ ಈಚೆಗೆ ಜೆರೂಸಲೆಮ್‌ಅನ್ನು ಇಸ್ರೇಲಿನ ರಾಜಧಾನಿಯಾಗಿಸಲು ಪ್ರಯತ್ನಿಸಿ ಧೂಳೆಬ್ಬಿಸಿದ್ದರು. ಅಂತರರಾಷ್ಟ್ರೀಯ ಒತ್ತಡದಿಂದ ಅದು ಸದ್ಯಕ್ಕೆ ಸ್ಥಗಿತಗೊಂಡಿದೆ.

✶ ✶ ✶

'ವ್ಯಾಲಂಟೈನ್ಸ್ ಡೇ' ಅಥವಾ ಪ್ರೇಮಿಗಳ ದಿನಾಚರಣೆ ಭಾರತಕ್ಕೆ ಆಮದಾಗಿ ಸಾಕಷ್ಟು ವರ್ಷಗಳೇ ಕಳೆದಿವೆ. ಈ ವರ್ಷವೂ ನಮ್ಮ ಯುವಜನರು ಅದನ್ನು ಆಚರಿಸಿದರು ಗಲಾಟೆ ಗಲಭೆಗಳ ಮಧ್ಯೆ. ಯಾವತ್ತಿನಂತೆ ಹಿಂದೂಪರ ಸಂಘಟನೆಗಳಿಂದ ಹಲವೆಡೆ ಪೆಟ್ಟು ತಿಂದರು. ಆದರೆ ಈ ಸಲ ನಮ್ಮ ಯುವ ಪ್ರೇಮಿಗಳಿಗೆ ಅನಿರೀಕ್ಷಿತವಾಗಿ ವಿಶ್ವ ಹಿಂದೂ ಪರಿಷತ್ತಿನ ನಾಯಕ ಪ್ರವೀಣ ತೊಗಾಡಿಯಾ ಬೆಂಬಲ ದೊರಕಿರುವುದು ಆಶ್ಚರ್ಯ. ಕೆಲದಿನಗಳ ಹಿಂದೆಯಷ್ಟೇ ತೊಗಾಡಿಯಾ ಉಡುಪಿಯಲ್ಲಿ ಜರುಗಿದ 'ಧರ್ಮ ಸಂಸತ್'ನಲ್ಲಿ ಭಾಗವಹಿಸಿ ಹಿಂದೂ ಸಂಸ್ಕೃತಿ ರಕ್ಷಣೆ ಕುರಿತು ಅಬ್ಬರಿಸಿದ್ದರು. ಆದರೆ ಈಚೆಗೆ ಏಕೋ ಏನೋ ಉಲ್ಟಾ ಹೊಡೆದಿದ್ದಾರೆ. ಭಾಜಪದ ಮೇಲೆ ತಿರುಗಿಬಿದ್ದಿದ್ದಾರೆ. ತನಗೆ ಕೊಲೆ ಬೆದರಿಕೆ ಎಂದು ಬೇರೆ ಹೇಳಿಕೊಂಡಿದ್ದಾರೆ. ಅಯೋಧ್ಯೆಯಲ್ಲಿ ರಾಮಮಂದಿರ ಕಟ್ಟುವ ಕಟ್ಟಾಳುವಿನ ಈಚೆಗಿನ ವರ್ತನೆ ವಿಚಿತ್ರವಾಗಿದೆ. ಈ ಪ್ರವೀಣ ಇನ್ನೂ ವಿಶ್ವ ಹಿಂದೂ ಪರಿಷತ್ತಿನಿಂದ ಕಳಚಿಕೊಂಡಿಲ್ಲ. ಸಂಘಪರಿವಾರದ ಅಂಗಸಂಸ್ಥೆಯಲ್ಲಿ ನಾಯಕತ್ವ ಸ್ಥಾನದಲ್ಲಿರುವ ಈತನ ಈ ಚರ್ಯೆ ಹಲವು ಅನುಮಾನಗಳಿಗೆ ಎಡೆಯಾಗಿದೆ. ಮುಂದೆ ಈ ತೊಗಾಡಿಯಾ ಅವತಾರ ಏನಾಗುತ್ತೋ.

ಆರೆಸ್ಸೆಸ್ ಅಧಿನಾಯಕ ಮೋಹನ ಭಾಗವತ್ ಬಾಯಿಗೆ ಬಂದಹಾಗೆ ಮಾತಾಡುವುದನ್ನು ಮೋದಿ ಅಧಿಕಾರಕ್ಕೆ ಬಂದಮೇಲೆ ರೂಢಿಸಿಕೊಂಡುಬಿಟ್ಟಿದ್ದಾರೆ. ಲಾಠಿಹಿಡಿದ ಸ್ವಯಂಸೇವಕರ ಪಡೆ ಕಟ್ಟಿರುವ ಈ ಸಂಘಟನೆ ವಿಜಯದಶಮಿ ದಿನ ಪೆರೇಡ್ ನಡೆಸುತ್ತದೆ. ಸಮವಸ್ತ್ರ ಧರಿಸಿರುವ ಈ ಸಿಪಾಯಿಗಳು ಮೂರೇ ದಿನಗಳಲ್ಲಿ ಸಮರಕ್ಕೆ ಸಜ್ಜಾಗಬಲ್ಲರು, ಸೇನೆಗಾದರೆ ಆರು ತಿಂಗಳು ಬೇಕು ಎಂದು ಭಾಗವತ್ ಕೊಚ್ಚಿಕೊಂಡಿದ್ದಾರೆ. ಅಲ್ಪಸಂಖ್ಯಾತರಿಗೆ ಇದೂ ಒಂದು ಎಚ್ಚರಿಕೆ ಎಂದು ತೋರುತ್ತದೆ. ಏನೋ ಸಮಜಾಯಿಷಿ ನೀಡಿದ್ದಾರೆ ಪ್ರತಿಭಟನೆ ಬಂದಾಗ. ಪರಿವಾರದ ಅಂಚಿನ ಉಪಟಳ ಈಗ ಅನುಭವಿಸುತ್ತಿದ್ದೇವೆ ಹಲವು ಕಡೆಗಳಲ್ಲಿ. ಇನ್ನು ಪರಿವಾರವೇ ಬಿದ್ದರೆ...

✶ ✶ ✶

ಕರ್ನಾಟಕದಲ್ಲಿ ಮೋದಿ–ಶಾ ದಂಡಯಾತ್ರೆ ಮುಗಿದು ಪರಿವರ್ತನೆ ಪೂರ್ಣಾಹುತಿ ಆಯಿತು. ಇನ್ನು ಮತ್ತೆ ಮತ್ತೆ ಬರುತ್ತಿರುತ್ತಾರೆ ಚುನಾವಣೆ ಸಮೀಪಿಸುತ್ತಿದ್ದ ಹಾಗೆ. ಸಿದ್ದರಾಮಯ್ಯ ಸರಕಾರದ ಸಾಧನೆಗಳನ್ನು ಕೊಚ್ಚಿಕೊಳ್ಳಲು ಕಾಂಗ್ರೆಸ್ ಅಧ್ಯಕ್ಷಪೀಠ ಅಲಂಕರಿಸಿರುವ ಗಾಂಧಿ ವಂಶದ ಕುಡಿ ರಾಹುಲ್ ಗಾಂಧಿ ನಾಲ್ಕು ದಿನಗಳು ಹೈದರಾಬಾದ್ ಕರ್ನಾಟಕದಲ್ಲಿ 'ಬೀದಿ ನಾಟಕ' ಪ್ರದರ್ಶಿಸಿದ್ದಾರೆ. ಇನ್ನೂ ಈತ ಉತ್ತರ ಕರ್ನಾಟಕ, ದಕ್ಷಿಣ ಕನ್ನಡ, ಮೈಸೂರು ಪ್ರಾಂತಗಳಲ್ಲಿ ಪ್ರಚಾರ ನಡೆಸಬೇಕಾಗಿದೆ. ಮಿರ್ಚಿ ಬಜ್ಜಿ, ಬೋಂಡ, ಚುರುಮುರಿ ಸವಿದ ರಾಹುಲ ಗಾಂಧಿ 'ರೋಡ್ ಶೋ' ಎಷ್ಟು ಮತ ಗಳಿಸಿಕೊಟ್ಟೀತೋ ನೋಡಬೇಕು. ಚುನಾವಣೆಗಳು ಬರಲು ಇನ್ನೂ ಮೂರು ತಿಂಗಳಿದೆ. ರಾಜ್ಯದ ಮೂರೂ ಪಕ್ಷಗಳು ಈಗಾಗಲೇ ಬಿರುಸಿನ ಪ್ರಚಾರ ಕೈಗೊಂಡಿವೆ. ಟಿಕೇಟ್ ಹಂಚಿಕೆಯಾಗುವಾಗ ಅತ್ತಿಂದಿತ್ತ ಪರದಾಟ, ಹಾರಾಟ ಆಗುವುದರಲ್ಲಿ ಸಂಶಯವಿಲ್ಲ. ಪತ್ರಿಕೆಗಳಿಗೆ, ಮಾಧ್ಯಮಗಳಿಗೆ ಈಗ ಸುಗ್ಗಿ, ಜಾಹೀರಾತಿನ ಸುರಿಮಳೆ. ಇಷ್ಟಾದರೂ ಮೂರೂ ಪಕ್ಷಗಳಲ್ಲಿ ಭಿನ್ನರು ಎದ್ದು ಕಾಣುತ್ತಿದ್ದಾರೆ. ಭಾಜಪದಲ್ಲಿ ಈಶ್ವರಪ್ಪ–ಯಡಿಯೂರಪ್ಪ ವೈಷಮ್ಯ ತಾರಕಕ್ಕೇರುತ್ತಿದೆ. ಟಿಕೆಟ್ ಹಂಚಿಕೆಯಲ್ಲಿ ಏರುಪೇರಾದರೆ ರಾಯಣ್ಣ ಬ್ರಿಗೇಡ್ ರೆಡಿ. ಹೀಗೆಂದು ಈಶ್ವರಪ್ಪ ಈಗಲೇ ಎಚ್ಚರಿಕೆ ನೀಡಿದ್ದಾರೆ. ಏನೇನಾಗುತ್ತೋ ನೋಡಬೇಕು.

✶ ✶ ✶

ಬ್ಯಾಂಕುಗಳಿಂದ ಸಾಲ ಪಡೆದು, ವಂಚನೆ ಮಾಡಿ ಪರಾರಿಯಾಗುವುದು ಮಾಮೂಲಾಗುತ್ತಿದೆ. ಕ್ರಿಕೆಟ್ ಟಿ–೨೦ ಮೋಸಗಾರ ಲಲಿತ್ ಮೋದಿ ಪರಾರಿಯಾಗಿ ಹಲವು ವರ್ಷಗಳೇ ಕಳೆದಿವೆ. ಆತನ ಹಿಂದೆಯೇ ಮದ್ಯದ ದೊರೆ, ಕಿಂಗ್ ಫಿಷರ್ ಏರ್‌ಲೈನ್ಸ್‌ನ ಮಾಲೀಕ ವಿಜಯ ಮಲ್ಯ ಬ್ಯಾಂಕುಗಳಿಗೆ ೯,೦೦೦/– ಕೋಟಿ ಪಂಗನಾಮ ಹಾಕಿ, ಮೋದಿ–ಜೇಟ್ಲಿ ಮುಖಕ್ಕೆ ಮಸಿ ಬಳಿದು ಲಂಡನ್ನಿನಲ್ಲಿ ಅರಾಮವಾಗಿದ್ದಾನೆ. ಈಗ ಈ ಮಲ್ಯನನ್ನು ಮೀರಿಸಿದ ಇನ್ನೊಬ್ಬ ಮೋದಿ ಕೂಡ ಪರಾರಿಯಾಗಿದ್ದಾನೆ. ಈತ ಸಾಮಾನ್ಯನೇನಲ್ಲ ಹನ್ನೊಂದು ಸಾವಿರದ ಐದುನೂರು ಕೋಟಿ ಲೂಟಿ ಹೊಡೆದು ಸಂಸಾರ, ಪರಿವಾರ ಸಮೇತನಾಗಿ ಅದೃಶ್ಯನಾಗಿದ್ದಾನೆ. ವಜ್ರದ ವ್ಯಾಪಾರಿ, ಮೋದಿಗೆ ಬೇಕಾದವ, ಈಚೆಗೆ ದಾವೋಸ್‌ನಲ್ಲಿ ಜರುಗಿದ ಜಾಗತಿಕ ಆರ್ಥಿಕ ಸಮಾವೇಶದಲ್ಲಿ ಭಾಗಿಯಾಗಿದ್ದು, ಮೋದಿ ಜೊತೆ ಗ್ರೂಪ್ ಫೋಟೋದಲ್ಲಿ ಕಾಣಿಸಿಕೊಂಡಿರುವ ಈ ನೀರವ್ ಮೋದಿ ವಂಚಿಸಿದ್ದು ಪಂಜಾಬ್ ನ್ಯಾಷನಲ್ ಬ್ಯಾಂಕ್. ಬ್ಯಾಂಕಿನ ಅಧಿಕಾರಿಗಳನ್ನು ಮರುಳು ಮಾಡಿ ಅವಾಂತರ ಸೃಷ್ಟಿಸಿರುವ ಈತ ಪರಾರಿಯಾಗಿದ್ದು ವಿಸ್ಮಯ. ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಮೇಲೆ ನಡೆದಿರುವ ಎರಡನೇ ಪ್ರಕರಣವಿದು. ಠೇವಣಿದಾರರ ಗತಿಯೇನು ಹೀಗಾದರೆ ಎನ್ನುವ ಪ್ರಶ್ನೆ ಮುಂದಾಗಿದೆ. ಸಾಲ ತೀರಿಸಲಾಗದೆ ಆತ್ಮಹತ್ಯೆಗೆ ಶರಣಾಗುವ ರೈತ ಒಂದು ಕಡೆ, ಸಾವಿರಾರು ಕೋಟಿ ಗುಳುಂಮಾಡಿ ಪರದೇಶಕ್ಕೆ ಹಾರುವ ಉದ್ಯಮಿಗಳು ಇನ್ನೊಂದು ಕಡೆ.

✶ ✶ ✶

ತಿಂಗಳ ಮೊದಲ ವಾರದಲ್ಲಿ ವಿದ್ಯಾರ್ಥಿ ಸಂಘಟನೆಯೊಂದರ ಸಭೆಯು ಧಾರವಾಡದಲ್ಲಿ ಆಯೋಜಿತವಾಗಿತ್ತು. ಜೈಪುರದ ಎಂಎನ್‌ಐಟಿ ನಿರ್ದೇಶಕ ಪ್ರೊಫೆಸರ್ ಉದಯ ಕುಮಾರ ವಿದ್ಯಾರ್ಥಿಗಳಿಗೆ ಹಿತವಚನ ನುಡಿದರು. ಅವರದು ಅದೇನು ಹುದ್ದೆಯೋ ಸರಿಯಾಗಿ ತಿಳಿದಿಲ್ಲ, ಆದರೆ ವಿಜ್ಞಾನ–ತಂತ್ರಜ್ಞಾನಗಳಿಂದ ಅವರ ಜೀವನ ಸಾಗುತ್ತಿದೆಯೆಂದು ತಿಳಿದು ಬಂದಿದೆ. ಇಂತಹ ಮಹಾತ್ಮರು ವಿದ್ಯಾರ್ಥಿಗಳಿಗೆ ಬೋಧನೆ ನೀಡುತ್ತಿದ್ದಾರೆಂದರೆ ವಿದ್ಯಾರ್ಥಿಗಳ ಬಗ್ಗೆ ಕನಿಕರ ಮೂಡುತ್ತದೆ. ಅವರ ಜ್ಞಾನಭಂಡಾರ ಎಷ್ಟು ಅಪಾರವೆಂದು ತಿಳಿದು ಸಭೆಯಲ್ಲಿದ್ದ ವಿದ್ಯಾರ್ಥಿಗಳು ಮೂಕರಾಗಿಬಿಟ್ಟರಂತೆ. ಅವರ ಪಾಂಡಿತ್ಯದ ತುಣುಕುಗಳನ್ನು 'ಪ್ರಜಾವಾಣಿ' ಪತ್ರಿಕೆಯು ಪ್ರಕಟ ಮಾಡಿತ್ತು. ಅವುಗಳಲ್ಲಿ ಕೆಲವು ಇಲ್ಲಿವೆ : ಜಗತ್ತಿಗೆ ಸೊನ್ನೆಯನ್ನು ಪರಿಚಯಿಸಿದವನು ಆರ್ಯಭಟ (ಅವನಿಗಿಂತಲೂ ಬಹಳ ಮುಂಚೆಯೇ ಭಾರತದ ಗಣಿತಶಾಸ್ತ್ರಜ್ಞರಿಗೆ ಸೊನ್ನೆಯ ಮೌಲ್ಯ ತಿಳಿದಿತ್ತು); ಭೂಮಿಯು ಸೂರ್ಯನ ಸುತ್ತ ಸುತ್ತಲು ೩೬೫ ದಿನ ಬೇಕೆಂದು ಭಾಸ್ಕರಾಚಾರ್ಯ ಲೆಕ್ಕ ಮಾಡಿದ್ದ; ವಿದ್ಯುತ್ ಕಂಡುಹಿಡಿದದ್ದು ಎಡಿಸನ್ ಅಲ್ಲ (ಈ ಪ್ರಾಧ್ಯಾಪಕರು ಫ್ಯಾರಡೆ ಹೆಸರು ಕೇಳಿಲ್ಲದಿರಬಹುದು), ಮೊದಲೇ ವಿದ್ಯುತ್ ಚಕ್ರವರ್ತಿ ಅದನ್ನು ಶೋಧಿಸಿದ್ದ (ಈ ಚಕ್ರವರ್ತಿ ಯಾರೋ ನಮಗೆ ತಿಳಿದಿಲ್ಲ); ಚಂದ್ರನ ಮೇಲೆ ಮೊದಲು ಹೆಜ್ಜೆ ಇಟ್ಟಿದ್ದು ರಾಕೇಶ ಶರ್ಮ, ಇತ್ಯಾದಿ. "ನೀವೆಲ್ಲಾ ಅಮೆರಿಕಾಕ್ಕೆ ಹೋಗಿ ಹೆಚ್ಚು ಹಣ ಸಂಪಾದಿಸಿ ಮತ್ತು ಅದನ್ನು ಭಾರತಕ್ಕೆ ತೆಗೆದುಕೊಂಡು ಬನ್ನಿ", ಎಂಬುದು ಅವರ ಭರತವಾಕ್ಯ. "ಭಾರತದಲ್ಲಿ ಮಾಡಿ" ಎಂಬ ಪ್ರಧಾನಿಯ ಘೋಷಣೆ ಹೇಗೂ ನುಚ್ಚುನೂರಾಗಿ ಅಪ್ರಸ್ತುತವಾಗಿಬಿಟ್ಟಿದೆ, ಆದ್ದರಿಂದ ಅದಕ್ಕೆ ಪರ್ಯಾಯವನ್ನು ಉದಯೋನ್ಮುಖ ಪ್ರತಿಭಾವಂತ ಉದಯ ಕುಮಾರ ಕಂಡುಹಿಡಿದಿದ್ದಾರೆ. ಈ ವಿದ್ವಾಂಸರ ಮಾತುಗಳಲ್ಲಿ ವಿಜ್ಞಾನದ ಮಾಹಿತಿ ಬಹಳ ತಪ್ಪುತಪ್ಪಾಗಿ ಅಡಕಗೊಂಡಿದೆ ಮತ್ತು ವೈಜ್ಞಾನಿಕ ಮನೋಭಾವದ ಲವಲೇಶವೂ ಅದರಲ್ಲಿಲ್ಲ. ಇವರು ಅದೇನನ್ನು ನಿರ್ದೇಶಿಸಿ ಜೈಪುರಕ್ಕೆ ಕಿರೀಟ ತೊಡಿಸುತ್ತಿದ್ದಾರೋ ಎಂಬ ಆತಂಕ ಉಂಟುಮಾಡಿದ್ದಾರೆ. ಹಸುವಿನ ಗಂಜಳದ ಬಗ್ಗೆ ಅವರೇಕೆ ಏನನ್ನೂ ಹೇಳಲಿಲ್ಲವೋ ತಿಳಿಯದು. ಪಾಪ, ನಮ್ಮ ಪ್ರಧಾನಿಯ ಬತ್ತಳಿಕೆಯಲ್ಲಿರುವ ಬೌದ್ಧಿಕ ಬಂಡವಾಳಕ್ಕೆ ಉದಯ ಕುಮಾರರಂಥವರೇ ಮಹಾನ್ ಸಾಕ್ಷಿಗಳು. ಈತನ ಪ್ರತಿಭೆಯನ್ನು ಗುರುತಿಸಿ ಮುಂದೊಂದು ದಿನ ಯಾವುದಾದರೂ ಸಂಶೋಧನಾ ಪ್ರಯೋಗಶಾಲೆಗೆ ಕಳಿಸಬೇಕಾಗುತ್ತದೋ ಏನೋ ! ಆಗಂತೂ ಅವರ ಕಾಣಿಕೆಯು "ಆರ್ಯಭಟನು ನೀಡಿದ್ದ ಸೊನ್ನೆ"ಯನ್ನು ಮೀರುವುದಿಲ್ಲವೆಂಬುದು ಖಚಿತ.

✶ ✶ ✶

ಹಲವು ವರ್ಷಗಳ ಹಿಂದಿನ ಸಮಾಚಾರ : ಆಗವರು ದೇಶದ ನಾಗರಿಕ ವಿಮಾನಯಾನ ಖಾತೆಯ ಕೇಂದ್ರ ಸಚಿವರು. ಸಾಕಷ್ಟು ದೊಡ್ಡ ಗಂಟುಗಳಿರುವ ಖಾತೆ ಅದು ಎನ್ನುತ್ತಾರೆ. ಆದರೂ ಅವರಿಗೆ ಆ ಖಾತೆಗೆ ಹೋಗಲು ಇಷ್ಟವಿರಲಿಲ್ಲ, ಏಕೆಂದರೆ ಅವರಿಗೆ ಮೊದಲಿನ ನಗರಾಭಿವೃದ್ಧಿ ಖಾತೆಯು ಹೆಚ್ಚು ಖಾಸಗಿ ವರಮಾನ ನೀಡುವಂತಹ ಖಾತೆಯಾಗಿತ್ತು. ಅಂದಿನ ಅವರ ಮೇಲಿನ ಮೊಕದ್ದಮೆಗಳು ಇನ್ನೂ ವಿಚಾರಣೆಗೆ ಬಂದಿಲ್ಲ; ಅಂದರೆ ಅವರ ಪ್ರಭಾವ ಎಷ್ಟೆಂದು ಗೊತ್ತಾಗುತ್ತದಲ್ಲವೆ? ಬೆಂಗಳೂರಿನ ಅಶೋಕ ಹೊಟೇಲ್ ಮಾರಾಟದ ಬಾಬ್ತಿನಲ್ಲೇ ನೂರಾರು ಕೋಟಿ ಝುಣಝುಣ ಎಂದು ಹಿರಣ್ಣಯ್ಯನವರ

ನಾಟಕದಲ್ಲಿ ಉದುರುತ್ತಿದ್ದಂತೆ ಇವರ ಜೇಬುಗಳಿಗೆ ಉದುರಿತ್ತೆನ್ನುತ್ತಾರೆ. ಇರಲಿ, ಇವರು ನಾಗರಿಕ ವಿಮಾನಯಾನ ಖಾತೆ ವಹಿಸಿಕೊಂಡಾಗ ಒಟ್ಟಿಗೇ ನೂರಾರು ಗಣಕಯಂತ್ರಗಳನ್ನು ಕೊಳ್ಳಲಾಯಿತು. ಆಗಿನ್ನೂ ಅವುಗಳ ಬೆಲೆ ಈಗಿನಷ್ಟು ಕಡಿಮೆ ಆಗಿರಲಿಲ್ಲ. ನಮ್ಮ ಮಾನ್ಯ ಸಚಿವರು ಏನು ಮಾಡಿದರು ಗೊತ್ತೆ? "ಅವುಗಳ ಪೈಕಿ ಹತ್ತನ್ನು ನಮ್ಮ ಮನೆಗೆ ಕಳಿಸಿಬಿಡಿ" ಎಂದರು. ಮಾರನೆಯ ದಿನ ಸಚಿವರು ಕಚೇರಿಗೆ ಹೇಳಿಕಳಿಸಿದರು : "ತುರ್ತು ಉಕ್ತಲೇಖನ ಕೊಡ ಬೇಕಾಗಿದೆ, ಶೀಘ್ರಲಿಪಿಕಾರನನ್ನು ಮನೆಗೆ ಕಳಿಸಿ." ಯಾರೋ ಒಬ್ಬಾತ ಬಂದರು. ಸ್ಟೆನೋ ಸಹಾಯ ಬೇಕಿದ್ದುದು ಮಂತ್ರಿಗಲ್ಲ, ಮಂತ್ರಿಪತ್ನಿಗೆ. ಅವರದ್ದೂ ಏನೋ ವ್ಯವಹಾರ ಇದ್ದಿರಬೇಕು. ಏನೋ ಹೇಳಿದರು, ಶೀಘ್ರಲಿಪಿಕಾರ ಬರೆದುಕೊಂಡರು. "ಏನು ಬರೆದು ಕೊಂಡಿದ್ದೀರಿ, ಓದಿ" ಎಂದರು ಮಹಾರಾಜ್ಞಿ. ಇವರು ಓದಿದರು. ಆಕೆ ಸಿಡಿಮಿಡಿಗೊಂಡರು. "ಒಂದು ಡಿಕ್ಟೇಶನ್ ತೆಗೆದುಕೊಳ್ಳಲು ಬರುವುದಿಲ್ಲ, ಎಂಥವರನ್ನು ಕಳಿಸಿದ್ದಾರೆ ನೋಡಿ" ಎಂದು ಕೂಗಾಡಿದರು. ಸ್ಟೆನೋ ಏನೋ ಹೇಳಲು ಮುಂದಾದರು : "ಮಾತಾಡ ಬೇಡ, ಹೊರಟುಹೋಗು" ಎಂದು ಚೈತನ್ಯಶೀಲೆ ಮಂತ್ರಿಪತ್ನಿ ಉದ್ಗರಿಸಿದರು. ಇದೆಲ್ಲಾ ನಡೆದು ಎಷ್ಟೋ ವರ್ಷಗಳು ಕಳೆದಿವೆ. ಈಗ ಬೇರಾವುದೋ ಹೊಸ ಖಾತೆ ಮಂತ್ರಿಗಳಿಗೆ ಸಿಕ್ಕಿದೆ. ದೇಶದ ಮೊದಲ ಪ್ರಜೆಗೆ ಹೇಳಿ, ಬೇಕಾದರೆ ಈಗ ಮಾನ್ಯ ಮಂತ್ರಿಗಳು ಪದ್ಮ ಪುರಸ್ಕಾರ ಕೊಡಿಸಬಲ್ಲರು ಎಂಬ ಗುಲ್ಲು ಎದ್ದಿದೆ. ಅವರ ಸುತ್ತ ಗ್ರಹಗಳು ಸುತ್ತುತ್ತಿವೆ. ಪ್ರಧಾನಿಯವರ ಮಾತುಗಳಲ್ಲಿ ಹೇಳುವುದಾದರೆ ಅವರು "ಒಳ್ಳೆಯ ದಿನಗಳನ್ನು ಕಾಣುತ್ತಿದ್ದಾರೆ." ಆದರೇನು, ಮುಂದಿನ ಪದ್ಮ ಕಂತಿಗೆ ಒಂದು ವರ್ಷ ಕಾಯಬೇಕಲ್ಲ, ಎಂದು ಕೆಲವು ಕ್ಷುದ್ರಗ್ರಹಗಳು ಕೈ ಕೈ ಹಿಸುಕಿಕೊಳ್ಳುತ್ತಿವೆ.

✶ ✶ ✶

ಆಕಾಶವಾಣಿಯನ್ನು ಬಹು ಹಿಂದಿನಿಂದ "ಅವಕಾಶ ವಾಣಿ" ಎನ್ನುತ್ತಲೇ ಬಂದಿರುವವರು ಕೆಲವರಿದ್ದಾರೆ. ಕಳೆದ ಮೂರು ವರ್ಷಗಳಲ್ಲಿ ಅಲ್ಲಿ ಅನೇಕ ವಿಶ್ವವಿನೂತನ ಕಾರ್ಯಕ್ರಮಗಳು ಜಾರಿಗೆ ಬಂದಿವೆ. ಇತಿಹಾಸದ ಸಂಶೋಧನೆಯೂ ಸೇರಿದಂತೆ ಬಗೆಬಗೆಯ ಆವಿಷ್ಕಾರಗಳು ಆಕಾಶವಾಣಿಯಲ್ಲಿ ರಂಜಿಸುತ್ತಿವೆ. ವಿದ್ವಾಂಸರು ವರ್ಷಗಟ್ಟಲೆ ಅಧ್ಯಯನ ನಡೆಸಿ ನಿಷ್ಕೃಷ್ಟ ತೀರ್ಮಾನಗಳನ್ನು ಕೈಗೊಳ್ಳಲು ಅಂಜಿಯಾರು, ಆದರೆ ಆಕಾಶವಾಣಿ ವಿದ್ವಾಂಸರಿಗೆ ಸಂಶೋಧನೆಗಳ ಫಲಿತಾಂಶ ಚಿಟಿಕೆ ಹೊಡೆದಷ್ಟು ಸಲೀಸಾಗಿ ಕರಗತವಾಗಿಬಿಡುತ್ತದೆ. ದಾಖಲೆಗಳನ್ನು ನೀಡಿ ತೀರ್ಮಾನಗಳನ್ನು ಸಮರ್ಥಿಸಿಕೊಳ್ಳ ಬೇಕಾದ ಅಗತ್ಯವೂ ಇಲ್ಲ; ಕೇಳುಗರು ಪ್ರಶ್ನೆ ಹಾಕಿಯಾರೆಂಬ ಅಳುಕೂ ಇಲ್ಲ. "ಇತಿಹಾಸವನ್ನು ತಿದ್ದಿ ಬರೆಯಬೇಕು" ಎಂಬುದು ಪ್ರಧಾನಿ ಮೋದಿ ಯವರ ಕಾರ್ಯಸೂಚಿಯಲ್ಲಿ ನಮೂದಾಗಿಲ್ಲ ದಿದ್ದರೂ ಅವರ ಕಾರ್ಯಕರ್ತರು ಈಗಾಗಲೆ ತಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ ಪೂರೈಸುತ್ತಿದ್ದಾರೆ. ಕಳೆದ ವಾರವಷ್ಟೆ ಚೆನ್ನೈನ "ಅಭಿವೃದ್ಧಿ ಅಧ್ಯಯನ




ಸಂಸ್ಥೆ"ಯ ಪ್ರಾಧ್ಯಾಪಕರೊಬ್ಬರು ತಮ್ಮ ಅಳಲನ್ನು ತೋಡಿಕೊಳ್ಳುತ್ತಿದ್ದರು : "ಎಂತಹ ದುರವಸ್ಥೆ, ನೋಡಿ. ಸಂಸ್ಥೆಗೆ ಹೊಸ ಪ್ರಾಧ್ಯಾಪಕರನ್ನು ಮತ್ತು ಸಂಶೋಧಕರನ್ನು ನೇಮಕ ಮಾಡಿಕೊಳ್ಳಬೇಕು. ದೆಹಲಿಯ ಪ್ರಭೃತಿಗಳು ನೇಮಕಾತಿ ಸಮಿತಿಗೆ 'ತಮ್ಮವರನ್ನು', ಅಂದರೆ ಗುರು ಗೋಲ್ವಾಲ್ಕರ್ ಸಂಪ್ರದಾಯದ ಒಬ್ಬ ಪರಿಣತರನ್ನು, ಕಳಿಸಿ ಬಿಡುತ್ತಾರೆ. ಆ ಪುಣ್ಯಾತ್ಮ, ಪಾಪ, ಬಾಯೇ ಬಿಡುವುದಿಲ್ಲ. ಹಾಗಿರುವಾಗ ಪ್ರಶ್ನೆ ಕೇಳುವ ವಿಚಾರವೇ ಇಲ್ಲ. ಆದರೆ 'ಅವರು ಬೇಡ, ಇವರು ಬೇಡ, ಇಂಥವರನ್ನೇ ಆಯ್ಕೆ ಮಾಡಿಕೊಳ್ಳಿ' ಎಂದು ಒತ್ತಾಯಿಸುವುದರಲ್ಲಿ ಆತನಿಗೆ ನೈಪುಣ್ಯ ಉಂಟು." ಬೆಂಗಳೂರು ಆಕಾಶವಾಣಿ ಎಂಬ ಅವಕಾಶವಾಣಿಯಲ್ಲಿ ಈ ರೀತಿಯ ವಿಶಿಷ್ಟ ಪರಿಣತರು ಭಾರತದ ಪ್ರಾಚೀನ ಚರಿತ್ರೆಯನ್ನು ಪರಿಷ್ಕರಿಸಿ ನೂತನ ಜ್ಞಾನವನ್ನು ಕೇಳುಗರಿಗೆ ಉಣಬಡಿಸುತ್ತಿದ್ದಾರೆ. ಅದೊಂದು ಭುವನದ ಭಾಗ್ಯ ಎನ್ನಬೇಕು. ಇತ್ತೀಚೆಗೆ ಕೇಳಿಬಂದ ಒಂದು ತುಣುಕು ಹೆಚ್ಚುಕಡಿಮೆ ಹೀಗಿದೆ :

"ಸಿಂಧು ನದಿ ನಾಗರಿಕತೆಯು ವೈದಿಕ ಸಾಹಿತ್ಯದ ಕಾಲದ ನಂತರದ್ದು ಎಂದು ಮೊದಲೇ ಊಹಿಸ ಲಾಗಿತ್ತು. ಈಗಂತೂ ಅದಕ್ಕೆ ಸೂಕ್ತ ಪುರಾವೆಯೂ ಸಿಕ್ಕಿದೆ. ವೈದಿಕ ಸಾಹಿತ್ಯದ ನಿರ್ಮಾತೃಗಳೇ ಹರಪ್ಪ ಸಂಸ್ಕೃತಿಯ ನಿರ್ಮಾತೃಗಳೂ ಆಗಿದ್ದಾರೆಂಬುದು ಈಗ ಖಚಿತಪಟ್ಟಿದೆ. ಇತ್ಯಾದಿ."

ಇದೊಂದು ಗೊಡ್ಡು ತೀರ್ಮಾನವೆಂದು ಯಾವುದೇ ಇತಿಹಾಸದ ವಿದ್ಯಾರ್ಥಿ ಹೇಳಲು ಸಾಧ್ಯವಿದೆ. ಸಿಂಧು ನಾಗರಿಕತೆಯ ಕಾಲ ಸುಮಾರು ಕ್ರಿ. ಪೂ. ೩೦೦೦ ಎನ್ನಲಾಗಿದೆ. ಅಂದರೆ ಅದು ಐದುಸಾವಿರ ವರ್ಷಗಳಷ್ಟು ಪುರಾತನವಾದ್ದು. ವೈದಿಕ ಸಾಹಿತ್ಯದ ಆದಿಭಾಗವಾದ ಋಗ್ವೇದವು ಸುಮಾರು ಕ್ರಿ. ಪೂ. ೧೬೦೦ರ ಕಾಲದ್ದು; ಅಂದರೆ ಅದು ಮೂರು ಸಾವಿರದ ಐನೂರು ವರ್ಷಗಳಷ್ಟು ಪುರಾತನವಾದ್ದು. ಇವೆರಡರ ಅಂತರ ೧೫೦೦ ವರ್ಷಗಳಷ್ಟಾದರೂ ಇದೆ. ಆದರೆ ಆಕಾಶವಾಣಿ ಸಂಶೋಧನೆಯು ಋಗ್ವೇದವನ್ನು ಹರಪ್ಪ ಸಂಸ್ಕೃತಿ ಗಿಂತಲೂ ಹೆಚ್ಚು ಪ್ರಾಚೀನವಾಗಿಸಿದೆ. ಇಂತಹ ಸಂಶೋಧನಾ ಚಮತ್ಕಾರಗಳು "ಆಧುನಿಕ ಸಂಶೋಧನೆ"ಯೆಂಬ ಹೆಸರಿನಲ್ಲಿ ಚಲಾವಣೆ ಯಲ್ಲಿವೆ. ಋಗ್ವೇದವನ್ನು "ಆರ್ಯರು" ರಚಿಸಿದ್ದೆಂದೂ, ಅವರು ಭಾರತದ ಹೊರಗಿಂದೆಲ್ಲೋ ಬಂದವರೆಂದೂ, ಸಾಮಾನ್ಯವಾಗಿ ಭಾವಿಸಲಾಗಿದೆ. ಅವರು "ಹೊರಗಿನವರು" ಎಂಬುದನ್ನು ಒಪ್ಪಲು ಕೆಲವರಿಗೆ ಸಂಕೋಚ. ಆದ್ದರಿಂದ ಅವರನ್ನು ಮೂಲನಿವಾಸಿಗಳು ಎಂದು ಕರೆಯುತ್ತಾರೆ. ಮೂಲ ನಿವಾಸಿಗಳಲ್ಲದಿದ್ದರೆ ಅವರ ನಂತರದ ಪೀಳಿಗೆಗಳ ವರೆಗೆ, ಅಂದರೆ ವರ್ತಮಾನದ ಉತ್ತರ ಭಾರತದ ನಾಗರಿಕರಿಗೆ, ತಾವು ಆಗಂತುಕರು ಎಂಬ ಕೀಳರಿಮೆ ಬಂದುಬಿಡುತ್ತದೆ. ಕ್ರಿ. ಶ. ಹತ್ತನೆಯ ಶತಮಾನದಲ್ಲಿ ಭಾರತಕ್ಕೆ ದಂಡಯಾತ್ರೆ ಬಂದು "ನಮ್ಮ ದೇಶದ ಭವ್ಯ ಸಂಸ್ಕೃತಿಯನ್ನು" ಹಾಳುಗೆಡವಿದವರ ಸಾಲಿಗೆ ತಾವೂ ಸೇರಬೇಕಾಗುತ್ತದೆಂಬ ಪಾಪಪ್ರಜ್ಞೆಯಿಂದ ಪಾರಾಗಲು ಈ ಸಂಶೋಧನೆಯ ಅಗತ್ಯ ಅವರಿಗೆ ಕಂಡುಬಂದಿದೆ. ಅದಕ್ಕಾಗಿ ಭಾರತೀಯರ ವಂಶ ತಂತುಗಳ ಅಧ್ಯಯನ ನಡೆಸಿ ಉತ್ತರ ಮತ್ತು ದಕ್ಷಿಣದ ಭಾರತೀಯರಲ್ಲೆಲ್ಲಾ ಒಂದೇ ವಂಶವಾಹಿ ಇದೆ ಎಂದು ಅವರು ಪ್ರಕಟಿಸುತ್ತಿರುತ್ತಾರೆ. ಅದನ್ನು ಆಕಾಶವಾಣಿ ಸಂಶೋಧಕರು ಎತ್ತಿಹಾಕಿಕೊಳ್ಳುತ್ತಾರೆ. ಸಚಿವೆ ಸ್ಮೃತಿ ಇರಾನಿ ಅವರಿಗೆ ಅದರಿಂದ ಏನೋ ಸಂತೃಪ್ತಿ! ಆದರೆ ಮುಜುಗರ ಆರಂಭವಾಗುವುದು ಯಾವಾಗೆಂದರೆ ಗೋಲ್ವಾಲ್ಕರ್ ಬೌದ್ಧಿಕ ಸಂತತಿ ಯವರ ಸಂಶೋಧನೆಯ ತರುವಾಯದಲ್ಲಿ ಅವೇ ವಂಶವಾಹಿಗಳ ಅಧ್ಯಯನವನ್ನು ಕೆಲವು ಪಾಶ್ಚಾತ್ಯ ವಿದ್ವಾಂಸರು ಕೈಗೊಂಡು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಪ್ರತ್ಯೇಕ ವಂಶವಾಹಿಗಳು ಕಂಡು ಬಂದಿವೆಯೆಂದು ಘೋಷಿಸುತ್ತಾರಲ್ಲ, ಆಗ. ಇದು ಈಗಾಗಲೆ ನಡೆದುಹೋಗಿದೆ. ಒಟ್ಟಿನಲ್ಲಿ "ಆರ್ಯರು" ಸ್ವಕೀಯರೋ ಇಲ್ಲವೇ ಪರಕೀಯರೋ ಎಂಬ ಪ್ರಶ್ನೆ ಬಂದಾಗ ಕೇಳುಗರ ತಲೆ ತೊಳೆದು "ಅವರು ಸಂಪೂರ್ಣವಾಗಿ ಸ್ವಕೀಯರು" ಎಂದು ಆಕಾಶವಾಣಿ ಬಿನ್ನವಿಸಿಕೊಳ್ಳುತ್ತಿದೆ. ಮಾನ್ಯ ಡಾ॥ ಎಸ್. ಎಲ್. ಭೈರಪ್ಪನವರು ಆಗಾಗ್ಗೆ ತಮ್ಮ ವಿದ್ವತ್ತಿನ ಮೊನಚನ್ನು ಪ್ರದರ್ಶಿಸುತ್ತಾ "ಎಡಗೈಯವರು ಇತಿಹಾಸ ತಿರುಚುತ್ತಾರೆ" ಎಂದು ಆಪಾದಿಸುತ್ತಿರುತ್ತಾರೆ. ಆ ಕೆಲಸ ಮಾಡುತ್ತಿರುವವರು ಅವರ ಬಗಲಲ್ಲೇ ಇದ್ದಾರೆಂಬುದು ಅವರಿಗೆ ಕಾಣುತ್ತಿಲ್ಲ, ಇಲ್ಲವೇ ಕಂಡರೂ ಅವರನ್ನು ಹಾಗೆ ಗುರುತಿಸಲು ಅವರಿಗೆ ಇಷ್ಟವಾಗುತ್ತಿಲ್ಲ. ಏನೇ ಸಂಶೋಧನೆಗಳಿರಲಿ, ಯಾರೂ ಯಾರನ್ನೂ 'ನೀನು ಈ ದೇಶ ಬಿಟ್ಟುಹೋಗು' ಎನ್ನುವಂತಿಲ್ಲ. ನಮ್ಮ ದೇಶವು ನಮಗೆ ಹಾಗೆ ಹೇಳಿದರೆ ಬೇರೆ ದೇಶದವರೇಕೆ ನಮಗೆ ಮಣೆ ಹಾಕಿ ಕೂರಿಸುತ್ತಾರೆ, ಅಲ್ಲವೆ ?




✉ ೨೦೧೮ರ ವಿಶೇಷ ಸಂಚಿಕೆಯಲ್ಲಿ ಡಾ॥ ಸಬಿತಾ ಬನ್ನಾಡಿಯವರ ಲೇಖನ 'ಅಧಿಕಾರದ ರಾಗವನು ನಿರಾಕರಿಸುವ ರಾಗಿ' ಎಂಬ ಲೇಖನ ಸ್ವಾರಸ್ಯಕರ ಚರ್ಚೆಯನ್ನು ಓದುಗರ ಮುಂದಿರಿಸಿದೆ. ಒಂದು ಪ್ರದೇಶದ ಆಹಾರ ಪದ್ಧತಿ ಆ ಪ್ರದೇಶದ ಸಂಸ್ಕೃತಿಯ ಭಾಗವಾಗಿರುತ್ತದೆ. ಭತ್ತ ಅಥವಾ ಅಕ್ಕಿಯಾಗಲೀ, ರಾಗಿಯಾಗಲೀ, ಮನುಷ್ಯನ ಹಸಿವನ್ನು ನೀಗಿಸಿ, ದೇಹಕ್ಕೆ ಶಕ್ತಿಯನ್ನು ನೀಡುವ ಗುಣವನ್ನು ಹೊಂದಿರುತ್ತದೆ. ಸಾಮಾಜಿಕ ಶ್ರೇಣೀಕರಣ, ಈ ಆಹಾರ ಧಾನ್ಯಗಳ ಬಳಕೆಯ ವಿಷಯದಲ್ಲೂ, ಪ್ರಭಾವ ಬೀರಿರುವುದು, ಈ ಲೇಖನದಲ್ಲಿ ವ್ಯಕ್ತವಾಗಿದೆ. ಕೃಷಿ ಪದ್ಧತಿ ಬಳಕೆಯಲ್ಲಿ ಬರುವವರೆಗೂ ಮನುಷ್ಯನಿಗೆ ಆಹಾರದ ವಿಷಯದಲ್ಲಿ ಆಯ್ಕೆಯಿರಲಿಲ್ಲ. ಮಾನವ ಕಾಡುಮೇಡುಗಳಲ್ಲಿ ಅಲೆಯುತ್ತಾ ಪ್ರಾಣಿಗಳನ್ನು ಬೇಟೆಯಾಡುತ್ತಾ, ತನಗೆ ಸಿಕ್ಕ ಪ್ರಾಣಿ ಮಾಂಸ, ಹಣ್ಣು, ಗೆಡ್ಡೆ-ಗೆಣಸುಗಳಿಂದ ತನ್ನ ಹಸಿವನ್ನು ನೀಗಿಸಿಕೊಂಡು, ಜೀವನ ನಡೆಸುತ್ತಿದ್ದ ಕಾಲಘಟ್ಟವೊಂದಿತ್ತು.

ತದನಂತರ ಸಾಮಾಜಿಕ ವಿಕಾಸದ ಹಂತದಲ್ಲಿ, ಕೃಷಿ ಮನುಷ್ಯನ ಕಸುಬಾಗಿ, ಬೇಸಾಯದ ಮೂಲಕ ಅನೇಕ ವಿಧದ ಧಾನ್ಯಗಳನ್ನು ಬೆಳೆಯಲು ಪ್ರಾರಂಭಿಸಿದ ಮೇಲೆ, ಆಹಾರ ಪದ್ಧತಿಯಲ್ಲಿ ಆಯ್ಕೆ ಕಾಣಿಸಿಕೊಂಡಿತು, ಅಕ್ಕಿ ಸುಶಿಕ್ಷಿತ, ವಿದ್ಯಾವಂತ, ಮೇಲ್ವರ್ಗದ ಬ್ರಾಹ್ಮಣರ ಆಹಾರಧಾನ್ಯವಾದರೆ, ಮತ್ತೊಂದೆಡೆ ರಾಗಿ ಬಡವರ, ಶ್ರಮಿಕ ವರ್ಗದ ಆಹಾರ ಧಾನ್ಯವಾಗಿ ನೆಲೆಯೂರಿತು. ಶ್ರೇಷ್ಠ, ಕನಿಷ್ಠ, ಉತ್ತಮ ಮತ್ತು ನೀಚ ಎಂಬ ಭಾವನೆಗಳು ಜನಸಾಮಾನ್ಯರ ಮನಸ್ಸಿನಲ್ಲಿ ಚಿಗುರೊಡೆದವು. ಅಕ್ಕಿ, ತಾನು, ಶುಭಸಂದರ್ಭಗಳಲ್ಲಿ, ಬಳಕೆಯಾಗುವ ಧಾನ್ಯ ಎಂದು ಬೀಗಿದರೆ, ರಾಗಿ ತಾನು, ಶ್ರಮಿಕರ ಸ್ವಾದಿಷ್ಟ, ಅಚ್ಚುಮೆಚ್ಚಿನ, ಆಹಾರ ಧಾನ್ಯವೆಂದು ತನ್ನನ್ನು ತಾನು ಬಣ್ಣಿಸಿಕೊಳ್ಳುತ್ತದೆ. ಎರಡೂ ಧಾನ್ಯಗಳೂ, ಮನುಷ್ಯನ ಆಹಾರಪದ್ಧತಿಯಲ್ಲಿ ತಮ್ಮದೇ ಆದ ಸ್ಥಾನಗಳನ್ನು ಗಳಿಸಿದ್ದರೂ ಸಾಮಾಜಿಕ ಶ್ರೇಣೀಕರಣ, ಅವುಗಳಲ್ಲಿ ಮೇಲು, ಕೀಳು ಎಂಬ ತಾರತಮ್ಯವನ್ನು ಸೃಷ್ಟಿಸಿದೆ.

ಇತ್ತೀಚಿನ ದಿನಗಳಲ್ಲಿ ಕೆಲವು ಸಂಘಟನೆಗಳು, ಕೆಲವು ಸಮುದಾಯದ ಆಹಾರ ಪದ್ಧತಿಯನ್ನೇ ಗುರಿಯಾಗಿಸಿ, ದೊಡ್ಡ ವಿವಾದ ಸೃಷ್ಟಿಸಿ, ಹಿಂಸಾಚಾರಕ್ಕೆ ಇಳಿದಿವೆ. ಲೇಖನದ ಕೊನೆಯಲ್ಲಿ, ರಾಮನು ತೀರ್ಪು ನೀಡಿ, ಅಕ್ಕಿ ಮತ್ತು ರಾಗಿಯ ನಡುವೆ ಸಂಧಾನ ಮಾಡಿ, ರಾಗಿಯ ಮೇಲೆ ಅಕ್ಷತೆ ಕೀಳು ಎಂದು ತೀರ್ಮಾನಿಸಿ, ಎರಡೂ ಧಾನ್ಯಗಳ ಮಹತ್ವ ಪ್ರಕಟಿಸಿರುವುದು ಸೂಕ್ತವಾಗಿದೆ.

*ಬೆಂಗಳೂರು* ***ಶಂಕರನಾರಾಯಣ***

### ವಿಶೇಷ ಸಂಚಿಕೆಯ ಮೆರಗು

✉ ೨೦೧೮ನೇ ಜನವರಿ 'ಹೊಸತು' ವಿಶೇಷ ಸಂಚಿಕೆ ಹೊರಹೊಮ್ಮಿರುವುದು ಓದುಗರಿಗೆ ಆಕರ್ಷಣೆಯಾಗಿದೆ. ಬದುಕಿನ ಪ್ರೇರಣೆ, ಶ್ರದ್ಧೆ, ಆಸಕ್ತಿ, ಉತ್ಸಾಹ ಮೂಡಿಸಿದೆ. ಪತ್ರಿಕೆಯ ವಿವಿಧ ಲೇಖಕರು, ಸಾಹಿತಿಗಳು, ಸಂದರ್ಶಕ, ಕಲೆಗಾರರು, ತಮ್ಮ ಸಾಧನೆ ಪ್ರತಿಭೆಯ ಕಥೆ, ಕಾದಂಬರಿ, ಕವನ, ಪ್ರವಾಸ, ಸಾಹಿತ್ಯದ ಲೇಖನ, ಚರ್ಚೆ, ವಿಮರ್ಶೆ ಸಭೆ-ಸಮಾರಂಭ, ಹಲವು ರೀತಿಯ ಮೂಲಕ ಲೇಖನ ಹೊರಹೊಮ್ಮಿಸಿರುವುದು ಕುತೂಹಲ ಮೂಡಿಸಿದೆ. ಲೇಖಕರು ವಸ್ತುಸ್ಥಿತಿ ಅರ್ಥೈಸಲು ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಇತಿಹಾಸದ ಸಾಹಿತ್ಯ ಕಲೆಯ ಪುನರವಲೋಕನ ಮೆಲುಕುಹಾಕಿದ್ದರಿಂದ ಓದುಗರಲ್ಲಿ ಆಸಕ್ತಿ ಮೂಡಿಸಿದೆ.




ದೇಶ, ವಿದೇಶಗಳ ಸುದ್ದಿ ಸಮಾಚಾರ, ಮಹಾನ್ ವ್ಯಕ್ತಿಗಳ ಕಿರುಪರಿಚಯ, ಪ್ರಾಚೀನ, ನವೀನ ಇತಿಹಾಸದ ಚರ್ಚೆ, ವಿಮರ್ಶೆ, ಶೋಧನೆ, ಅದ್ಭುತ ವಾಗಿದೆ. ಅರಿವಿನ ಜ್ಞಾನ ಬೆಳಕು ಬೆಳಗುವ ಕೈಗನ್ನಡಿಯ ಸಾಧನೆಯ ಪತ್ರಿಕೆಯಾಗಿ ಪ್ರಕಟ ಗೊಂಡಿದೆ. ಲೇಖನಗಳು ಅರ್ಥಗರ್ಭಿತವಾಗಿದ್ದು, ಅರಿವಿನ ದೀಪದ ಬೆಳಕು ಚೆಲ್ಲಿವೆ.

ಪತ್ರಿಕೆಯಲ್ಲಿ ಹೊರಹೊಮ್ಮಿದ ಸುಪ್ತ ಶೋಧನೆಗಳು ಅಂದಿನ ಮತ್ತು ಇಂದಿನ ಸ್ಥಿತಿಯ ಮೌಲ್ಯದ ವಿಷಯಗಳೂ ಇವೆ. ಖಗೋಲ, ಕೃಷಿ, ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ ಕಲೆ ವಿವಿಧ ಕ್ಷೇತ್ರಗಳ ಸಂಶೋಧನೆ, ಮುಂತಾದುವು ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಮಾಹಿತಿ ಒದಗಿಸಿವೆ. ಇತರ ಭಾಷೆಗಳ ಸಾಹಿತ್ಯದ ಸೊಗಡನ್ನು ಕನ್ನಡಕ್ಕೆ ಅನುವಾದಿಸಿ ಓದುಗರಿಗೆ ಪೂರೈಸುವುದು ಶ್ರಮದ ಕೆಲಸ. ಈ ಮೂಲಕ ಕನ್ನಡ ಸಾಹಿತ್ಯ ಅಭಿವೃದ್ಧಿಗೆ ಪತ್ರಿಕೆ ಕಾರಣವಾಗಿದೆ.

"ಭಗವದ್ಗೀತೆ" – ಒಂದು ಅವಲೋಕನದ ಗೀತೆಯ ಶ್ಲೋಕ, ಉಪದೇಶಗಳು, ಧಾರ್ಮಿಕ ವಿಚಾರ ಚಿಂತನೆಗಳು ಸಾಮಾನ್ಯರಿಗೂ ಅರ್ಥವಾಗಿ ಮನಮುಟ್ಟುವಂತೆ, ಬರವಣಿಗೆಯನ್ನು ಸರಳಗೊಳಿಸಿ ರುವುದು ವಸ್ತುಸ್ಥಿತಿಗೆ ಸರಿಹೊಂದಿದೆ.

ಜಿ.ಎಸ್.ಟಿ. ತೆರಿಗೆಯ ಬಗ್ಗೆ ಅನುಭವ ಅನಿಸಿಕೆ ಲೇಖಕರ ಮನದಾಳದ ಅಭಿಪ್ರಾಯಗಳು ಓದುಗರ ವೇದಿಕೆಗೆ ನೀಡಿರುವುದು ವಸ್ತುಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

*ಚೌಡಾಪುರ, ಕೂಡ್ಲಿಗಿ* ***ಮರಿದೇವರ ಸಿದ್ದಪ್ಪ ಮೇಷ್ಟ್ರು***

### ಮಂಥನ

✉ ಮಥನ ಅಥವಾ ಮಂಥನ ಅಂದರೆ ಕಡೆಯುವುದು, ಯಾವುದಾದರೂ ವಿಷಯವನ್ನು ಕೂಲಂಕಷವಾಗಿ ಚರ್ಚಿಸುವುದು. ಕಡೆಯುವುದು ಅಂದ ಕೂಡಲೇ ಹಳ್ಳಿಗಳಲ್ಲಿ ಹುಟ್ಟಿ ಬೆಳೆದು ಈಗ ಇಳಿ ವಯಸ್ಸಿನಲ್ಲಿರುವವರಿಗೆ ಮೊಸರು ಕಡೆಯುವ ಕ್ರಿಯೆ ನೆನಪಾಗದೇ ಇರದು. ಅಡಿಗೆ ಮನೆಯಲ್ಲಿ ಮೂಲೆಯಲ್ಲಿ ಹುಗಿದ ಗೂಟ. ಅದರ ಮುಂದೆ ಮೊಸರಿನ ಮಡಕೆ ಅಥವಾ ಗಡಿಗೆ. ಗೂಟವನ್ನು ಸುತ್ತಿದ ನುಣುಪಾದ ಹಗ್ಗ. ಹುಲ್ಲಿನ ಸಿಂಬಿಯ ಮೇಲೆ ಮೊಸರು ತುಂಬಿ ಗಡಿಗೆ ಇಡುವುದು. ನೆಲದ ಮೇಲೆ ಅಮ್ಮ, ಅಜ್ಜಿಯೋ ಕುಳಿತು ಮೊಸರು ಕಡೆಯುವ ಚಿತ್ರ.

ಮೊಸರು ಕಡೆಯುವುದು ಅಷ್ಟೇನೂ ಸರಳವಾದ ಪ್ರಕ್ರಿಯೆಯಲ್ಲ. ಹಾಲನ್ನು ಚೆನ್ನಾಗಿ ಕಾಯಿಸಿ, ಅದು ಹದವಾಗಿ ಬಿಸಿ ಇದ್ದಾಗ ಸ್ವಲ್ಪ ಹೆಪ್ಪು ಹಾಕಿ ರಾತ್ರಿ ಮುಚ್ಚಿಟ್ಟರೆ ಬೆಳಿಗ್ಗೆ ದಪ್ಪ ಮೊಸರು ಸಿದ್ಧ. ಹಾಲು ದಪ್ಪವಾಗಿರಬೇಕು. ಹದವಾಗಿ ಬಿಸಿ ಇರಬೇಕು. ತುಸುವೇ ಹೆಪ್ಪು ಹಾಕಬೇಕು, ಸರಿಯಾಗಿ ಮುಚ್ಚಿಡ ಬೇಕು. ಯಾವುದೇ ಹೆಚ್ಚು ಕಮ್ಮಿಯಾದರೂ ಗಟ್ಟಿ ಮೊಸರು ಸಿಗಲಾರದು. ಅದನ್ನು ಮಥಿಸುವ ಕ್ರಿಯೆ ಧ್ಯಾನದ ಹಾಗೆ. ಏಕಾಗ್ರತೆಯಿಂದ ಮಾಡಬೇಕು. ಕಡೆಗೋಲನ್ನು ನುಣುಪಾದ ಹಗ್ಗದಿಂದ ಸುತ್ತಿ, ಗೂಟದ ಜೊತೆ ಇನ್ನೊಂದು ಹಗ್ಗದಿಂದ ಜೋಡಿಸಿ ಎರಡೂ ಕೈಯಿಂದ ಕಡೆಗೋಲಿಗೆ ಸುತ್ತಿದ ಹಗ್ಗವನ್ನು ಸಮತೋಲನದಿಂದ ಎಳೆಯುತ್ತಾ, ಮೊಸರು ಕಡೆಯ ಬೇಕು. ಗಡಿಗೆಯಲ್ಲಿ ಕಡೆಗೋಲನ್ನು ಅರ್ಧದಷ್ಟೇ ಅದ್ದುತ್ತಾ, ಎಳೆಯುತ್ತಾ ಲಯಬದ್ಧವಾಗಿ ಮೊಸರು ಕಡೆದರೆ ಮೊಸರು ಮಜ್ಜಿಗೆಯಾಗಿ ಬೆಣ್ಣೆ ಬರುತ್ತದೆ.

ಈ ಮೊಸರು ಕಡೆಯುವಾಗ ಏಕಾಗ್ರತೆ ಭಂಗ ವಾದರೆ ಬೆಣ್ಣೆ ಬರಲಾರದು. ಎರಡೂ ಕೈಗಳನ್ನೂ ಸಮತೋಲನದಿಂದ ಹದವಾಗಿ ಕಡೆದರೆ ಮಾತ್ರ ಬೆಣ್ಣೆ ಸಿಗುತ್ತದೆ. ಈ ರೂಪಕವನ್ನು ನಮ್ಮ ಜೀವನಕ್ಕೂ ಅನ್ವಯಿಸಿಕೊಳ್ಳಬಹುದು. ಯಾವುದೇ ವಿಷಯ, ಘಟನೆ, ಸಂದರ್ಭಗಳಿಗೆ ಹಲವಾರು ಮುಖಗಳಿರುತ್ತವೆ, ಆಯಾಮಗಳಿರುತ್ತವೆ. ಕುಟುಂಬ, ಸಮಾಜ ಅಥವಾ ದೇಶದ ಹಿತದೃಷ್ಟಿಯಿಂದ ಮಹತ್ವದ ನಿರ್ಣಯ ತೆಗೆದು ಕೊಳ್ಳುವಾಗ ಎಲ್ಲರೂ ಸೇರಿ ಮಂಥನ ಮಾಡಬೇಕು.

ಮೊದ-ಮೊದಲು ಚರ್ಚೆ, ತರ್ಕ, ವಾಗ್ವಾದ ಗಳಾದಾಗ ನಿರ್ಣಯಕ್ಕೆ ಬರುವುದು ಕಷ್ಟವಾಗಬಹುದು.

ಆದರೆ ಸರಿಯಾದ ರೀತಿಯಲ್ಲಿ ಚಿಂತನ ನಡೆದು ಮಂಥನವಾದರೆ ನವನೀತ ಬರುತ್ತದೆ. ಮಾತು ಮಾತು ಮಥಿಸಿದಾಗ ನಾದ ನವನೀತ ಬರುತ್ತದೆ ಎಂದು ಅಂಬಿಕಾತನಯದತ್ತರು ಹಾಡಿದ್ದಾರಲ್ಲವೇ? ಕಾವ್ಯವೇ ಇರಲಿ, ಸಂಗೀತವೇ ಆಗಲಿ ಶಬ್ದಗಳನ್ನು ನಾದಿದಾಗ ರಾಗ–ನವನೀತ. ಯಾವುದೇ ವಿಷಯದಲ್ಲಿ ಪೂರ್ವಾಗ್ರಹ ಗಳಿಲ್ಲದೆ ಮುಕ್ತವಾದ ಮನಸ್ಸಿನಿಂದ ಮಂಥನವಾಗಬೇಕು.

ಸಮುದ್ರಮಥನವೆಂಬುದು ನಮ್ಮ ನಮ್ಮ ಅಂತರಂಗದಲ್ಲೇ ನಡೆದು ನಮ್ಮ ತಾಮಸ ವೃತ್ತಿ ನಾಶವಾಗಿ ನಾವೆಲ್ಲರೂ ಸನ್ಮಾರ್ಗದಲ್ಲಿ ನಡೆಯುವಂತಾದರೆ ಅದೇ ಮಂಥನದ ಅಮೃತ ಫಲ !

*ಶಿವಮೊಗ್ಗ* **ವಿಜಯಾ ಶ್ರೀಧರ್**

### "ಬ್ಯಾಗ್ ಲೆಸ್ ಡೇ" ಜಾರಿಯಾಗದಿರಲಿ

ಶಾಲಾ ಮಕ್ಕಳಿಗೆ ಭಾರದ ಪಾಟೀ ಚೀಲದ ಹೊರೆಯನ್ನು ಒಂದು ದಿನ ಶಾಲೆಗೆ ಚೀಲ ತರದೆ ಬರಲು "ಬ್ಯಾಗ್ ಲೆಸ್ ಡೇ" ಜಾರಿಯಲ್ಲಿ ತರುವ ಕುರಿತು ಚಿಂತನೆ ನಡೆದಿದೆ.

ಅವುಗಳ ಕುರಿತು ಸಾರ್ವಜನಿಕ ಅಭಿಪ್ರಾಯ ಕ್ರೋಢೀಕರಿಸಿ ವಿದ್ಯಾರ್ಥಿಗಳ ಪಾಟೀಚೀಲಗಳ ಭಾರ ಕಡಿಮೆ ಮಾಡಲು ಸರಕಾರದ ಸಕಾರಾತ್ಮಕ ನಿರ್ಣಯಕ್ಕೆ ಬರಲು ಮನವಿ ಮಾಡಬಹುದಾಗಿದೆ.

**ಸಚಿವರಿಗೆ ಸಲ್ಲಿಸಿದ ಮನವಿಗಳು :**

೧. ಶಾಲೆಗಳಲ್ಲಿ ಪ್ರತಿದಿನ ಸಾಮಾನ್ಯವಾಗಿ ಐದು ವಿಷಯಗಳನ್ನು ಬೋಧಿಸಲಾಗುವುದು. ಇನ್ನೂರು ಪುಟಗಳ ಕಚ್ಚಾ ನೋಟು ಪುಸ್ತಕ ಮಾಡಿ ಅದರಲ್ಲಿ ಶಾಲೆಯಲ್ಲಿ ಮಾಡಿದ ಪಾಠಗಳ ಸಂಕ್ಷಿಪ್ತ ವಿವರ ಬರೆದುಕೊಂಡು ಅದರ ವಿವರಗಳನ್ನು ಮನೆಯಲ್ಲಿ ನೋಟು ಪುಸ್ತಕಗಳಲ್ಲಿ ಬರೆಯಲು ಸೂಚಿಸಬೇಕು.

೨. ಶಾಲೆಯ ವತಿಯಿಂದ ಡೈರಿ ಒದಗಿಸಿ ಅದರಲ್ಲಿ ವಿದ್ಯಾರ್ಥಿಗಳು ಮಾಡಬೇಕಾದ ಮನೆಗೆಲಸದ ವಿವರ ಬರೆದು ಕಳುಹಿಸಬೇಕು. ಮನೆಯಲ್ಲಿ ವಿದ್ಯಾರ್ಥಿಗಳು ಪ್ರತಿದಿನ ಮನೆಗೆಲಸ ಮಾಡಿದ ಬಗ್ಗೆ ಅವರ ಪಾಲಕರು ಡೈರಿಯಲ್ಲಿ ಸಹಿ ಮಾಡಿ ಕಳುಹಿಸುವುದನ್ನು ಕಡ್ಡಾಯಗೊಳಿಸಬೇಕು.

೩. ಮನೆಗೆಲಸ ಮಾಡಿಸುವ ಜವಾಬ್ದಾರಿಯನ್ನು ಪಾಲಕರ ಮೇಲೆ ಹೊರಿಸುವುದರಿಂದ ಅವರುಗಳು ಕೂಡ ತಮ್ಮ ಮಕ್ಕಳ ಅಭ್ಯಾಸದತ್ತ ಗಮನಹರಿಸಲು ಅವಕಾಶ ಮಾಡಿಕೊಟ್ಟಂತೆ ಆಗುವುದು.

೪. ವಾರದ ಕೊನೆಯ ದಿನವಾದ ಶನಿವಾರದ ದಿನ ವಾರವಿಡೀ ಮಾಡಿದ ಅಧ್ಯಯನದ ಬಗ್ಗೆ ವಿದ್ಯಾರ್ಥಿಗಳಿಗೆ ಶಿಕ್ಷಕರು ಉಜಳಣಿ ಮಾಡಿಸಬೇಕು. ಹೀಗೆ ಮಾಡುವುದರಿಂದ ಪ್ರತಿದಿನ ವಿದ್ಯಾರ್ಥಿಗಳು ಹೊರಬೇಕಾದ ಪುಸ್ತಕಗಳ ಸಂಖ್ಯೆ ೩೦ರ ಬದಲಿಗೆ ಕೇವಲ ೧೦ ಪುಸ್ತಕಗಳಿಗೆ ಇಳಿಯಲಿದೆ.

ಇದರಿಂದ ಪಾಟೀಚೀಲದ ಭಾರ ಗಮನಾರ್ಹವಾಗಿ ಕಡಿಮೆಯಾಗಿ ಅವರ ಬೆನ್ನು / ದೇಹದ ಮೇಲಾಗುವ ದುಷ್ಪರಿಣಾಮ ಕಡಿಮೆಯಾಗುತ್ತದೆ.

ಈ ಕುರಿತು ವಿದ್ಯಾರ್ಥಿಗಳ ಭವಿಷ್ಯ, ಆರೋಗ್ಯದ ಬಗ್ಗೆ ಕ್ರಿಯಾತ್ಮಕ ಚಿಂತನೆ ಮಾಡುವ ಪಾಲಕರು, ಶಿಕ್ಷಕರು, ಶಿಕ್ಷಣತಜ್ಞರು, ವಿವಿಧ ಸಂಘಟನೆಗಳು ಚಿಂತನ ಮಾಡಿ "ಬ್ಯಾಗ್ ಲೆಸ್ ಡೇ"ಗೆ ಬದಲಾಗಿ ಪಾಟೀಚೀಲದ ಭಾರ ಕಡಿಮೆ ಮಾಡಲು ಸರಕಾರ / ಶಾಲಾ ವ್ಯವಸ್ಥಾಪಕರ ಮೇಲೆ ಒತ್ತಡ ಹೇರಲು ಕೋರುತ್ತೇನೆ.

*ಬೆಂಗಳೂರು* **ಬಸವರಾಜ ಹುಡೇದಗಡ್ಡಿ**

### ಬಜೆಟ್ – ಓಟು

ಬಜೆಟ್ ನಾವೇ ಆರಿಸಿದ ವ್ಯಕ್ತಿಗಳು ತಮ್ಮವರಿಗಾಗಿ ಒಳಿತು ಮಾಡುವ ಒಂದು ಸಾಧನೆ.

ಬಜೆಟ್ ಒಳ್ಳೆಯದಿದ್ದರೂ ಕೆಟ್ಟದಿದ್ದರೂ ಅದನ್ನು ಹೊಗಳುವವರು ಅದೇ ಪಾರ್ಟಿಯ ಸದಸ್ಯರು. ದೂರುವವರು ವಿರೋಧ ಪಕ್ಷದವರು. ನಮ್ಮನ್ನು ಆರಿಸಿ, ಉಳಿಸಿ ಎಂದು ಜನಸಾಮಾನ್ಯರನ್ನು ಅಷ್ಟೋ ಇಷ್ಟೋ ಕೊಟ್ಟು ಕೈತೊಳೆದು ಕೊಳ್ಳುವವರು ಎಲ್ಲಾ ಪಕ್ಷಗಳ ಓಟು ಆಕಾಂಕ್ಷಿಗಳು ಮತ್ತೆ ನಾವೇನೂ ಕೊಡಲಿಲ್ಲ ಎಂದು ಘೋಷಿಸುವವರೂ ಅವರೇ ಎಂದು ಎಲ್ಲರಿಗೂ ಗೊತ್ತು.

ಒಟ್ಟಿನಲ್ಲಿ ನಿಲ್ಲುವ, ಗೆಲ್ಲುವ ವಿಚಾರದಲ್ಲಿ ಎಲ್ಲಾ ಅಭ್ಯರ್ಥಿಗಳ ಮುಖ್ಯ ಆಸೆ ಎಂದರೆ ಗೆಲ್ಲಬೇಕು, ಎಂಎಲ್ಎ ಆಗಬೇಕು ದುಡ್ಡು ಮಾಡಬೇಕೆಂಬ ಬಯಕೆ ಹಾಗೂ ತನ್ನ ಮುಂದೆ ಹಿಂದೆ ಪೊಲೀಸ್ ಜೀಪ್ ಇರಬೇಕೆಂಬ ಮಹದಾಸೆಯೂ ಇದೆ. ಜೀಪಿನಲ್ಲಿ ಹೋಗುವಾಗ ಎಲ್ಲರೂ ಕೈಮುಗಿಯಬೇಕು ಅದಕ್ಕೆ ನಾನೂ ಸ್ಪಂದಿಸಬೇಕೆಂಬ ಬಯಕೆಯೂ ಇಲ್ಲದಿಲ್ಲ.

ಓಟಿಗೂ ಬಜೆಟಿಗೂ ಸಂಬಂಧವಿದೆಯೇ? ಹೌದು ಕಂಡಾಪಟ್ಟೆ ಸಂಬಂಧವಿದೆ. ಬಜೆಟ್ ಸಮಯ ಬಂದಾಗ ಬಜೆಟ್ ಮಂಡಿಸುವವರು ಮಿತಿ ಮೀರಿ ಬಜೆಟ್ ಸೌಲಭ್ಯ ಕೊಡ್ತಾರೆ 'ಇದು ಬಡಜನರ ಏಳಿಗೆಗಾಗಿ' ಎನ್ನುವ ಅವರಿಗೆ ಬಡವರೆಂದರೆ ಯಾರೆಂದೂ ತಿಳಿದಿಲ್ಲ. ಪ್ರಾಯಶಃ ಎಸ್.ಟಿ. ಎಸ್.ಸಿ.ಗಳೇ ಬಡವರಾಗಿರಬೇಕು, ಅವರ ಕೇರಿಗೆ ಹೋಗಿ ಬೆನ್ನು ಬಾಗಿಸಿ ಕೈಮುಗಿದು ಯಾರೂ ನೋಡದ ಹಾಗೆ ಏನನ್ನಾದರೂ ಕೊಟ್ಟು ಅವರ ಮನೆಯಲ್ಲೇ ಟಿಫಿನ್ ಮಾಡ್ತಾರೆ. ಆ ಟಿಫಿನಿನ ಪಾತ್ರೆ ಪ್ಲೇಟ್ ಲೋಟಗಳು ಮಾತ್ರ ಅವರದ್ದು, ತಿಂಡಿ ತೀರ್ಥ ಕಾಮತ್ ಹೋಟೆಲಿನದ್ದು.

*ಉಡುಪಿ* **ರಾಘವೇಂದ್ರ**


Statement about ownership and other particulars about newspaper

**FORM IV**

| | | |
|---|---|---|
| 1. Place of publication | : | Bengaluru |
| 2. Periodicity of its publication | : | Monthly |
| 3. Printer's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 4. Publisher's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 5. Editor's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre, Crescent Road P. B. No. 5159 Bengaluru - 560 001 (Sole Proprietors) |

**I, Dr. Siddanagouda Patil, hereby declare that the particulars given above are true to the best of my knowledge and belief.**

Sd/-
Dr. Siddanagouda Patil
Publisher

28-2-2018

# ಕ್ರಾಂತಿ ಕೆಂಡ ದೀಪವಾಗಬೇಕು ಅಕ್ಕಾ...

ಡಾ|| ಎಚ್. ಎಸ್. ಅನುಪಮಾ

ಜಗತ್ತಿನ ಎಲ್ಲ ಸಮಾಜಗಳಲ್ಲಿ ದಮನಿತ ವರ್ಗವಾಗಿಯೇ ಉಳಿದು ಬಂದವರು ಮಹಿಳೆಯರು. ದನಿಯಿರದವರಿಗೆ ದನಿ ಕೊಟ್ಟು ಜಾಗೃತಿ ಮೂಡಿಸಿ, ಹಕ್ಕುಗಳನ್ನು ಪಡೆಯುವ ಹೋರಾಟ ಕಟ್ಟುತ್ತ ಮಹಿಳಾ ಚಿಂತನೆ, ಚಳುವಳಿ ಬೆಳೆದಿದೆ. ಪ್ರಪಂಚದ ಬಹುಪಾಲು ದೇಶಗಳಲ್ಲಿ ಸಂಭವಿಸಿದ ಮಹಿಳಾ ಹೋರಾಟಗಳು ಅವರಲ್ಲಿ ಹೊಸ ಕನಸುಗಳನ್ನು ಬಿತ್ತಿ ಬದಲಾವಣೆಯ ಪ್ರಯತ್ನಗಳಿಗೆ ನಾಂದಿ ಹಾಡಿವೆ. ಒಂದು ಶತಮಾನಕ್ಕೂ ಮಿಗಿಲಾದ ಇತಿಹಾಸವಿರುವ ಭಾರತದ ಮಹಿಳಾ ಚಳುವಳಿ, ಹೋರಾಟದ ಪ್ರತಿಫಲವಾಗಿ ಈಗ ಎಲ್ಲ ಜನಪರ ಚಳುವಳಿಗಳಲ್ಲಿ, ಎಲ್ಲ ರಂಗಗಳಲ್ಲಿ ಸ್ಫೂರ್ತಿದಾಯಕ ಮಹಿಳಾ ಮಾದರಿಗಳು ಕಂಡುಬರುತ್ತಿವೆ. ಇವತ್ತು ಭಾರತದಲ್ಲಿ ಎಲ್ಲ ಪಕ್ಷಗಳಲ್ಲೂ ಮಹಿಳಾ ಘಟಕಗಳಿವೆ. ಎಲ್ಲ ಸಂಘಟನೆಗಳಲ್ಲೂ ಮಹಿಳಾ ಸದಸ್ಯೆಯರಿದ್ದಾರೆ.

ಆದರೆ ರಾಜಕೀಯ ರಂಗವೇ ಇರಲಿ, ಸಮಸಮಾಜದ ಉದಾತ್ತ ಗುರಿ ಹೊತ್ತ ಚಳುವಳಿಗಳೇ ಆಗಲಿ, ಮಹಿಳೆಯರ ನಾಯಕತ್ವ ಎಷ್ಟಿದೆ ಎಂದು ಹುಡುಕ ಹೊರಟರೆ ನಿರಾಸೆಯಾಗುತ್ತದೆ. ಭಾರತದಲ್ಲಷ್ಟೇ ಅಲ್ಲ, ವಿಶ್ವದಾದ್ಯಂತ ಲಿಂಗ ಸಮಾನತೆಯನ್ನು ಆಚರಣೆಗೆ ತರುವುದರಲ್ಲಿ ಪ್ರಭುತ್ವ, ಸಮಾಜಗಳು ದೂರವೇ ಉಳಿದಿರುವುದು ಕಂಡುಬರುತ್ತದೆ.

ಕೇರಳ ಭಾರತದ ಮುಂದುವರಿದ, ಮಾನವ ಅಭಿವೃದ್ಧಿ ಸೂಚ್ಯಂಕಗಳು ಉತ್ತಮವಾಗಿರುವ ಅಕ್ಷರಸ್ಥರ ರಾಜ್ಯ. ಅಲ್ಲಿ ಎಡಪಂಥೀಯ ಆಲೋಚನೆಗಳು ಬದುಕಿನ ಕ್ರಮವೇ ಆಗಿ ಹಾಸುಹೊಕ್ಕಾಗಿವೆ. ಸ್ವಾತಂತ್ರ್ಯ ಬಂದಾಗಿನಿಂದ ಹೆಚ್ಚುಕಮ್ಮಿ ಎಡಪಂಥೀಯ ಪಕ್ಷಗಳೇ ಆಳ್ವಿಕೆ ನಡೆಸಿವೆ. ಅಲ್ಲಿ ಅತಿ ಹೆಚ್ಚು ಕಾರ್ಮಿಕ ಸಂಘಟನೆಗಳಿವೆ. ಆದರೆ ಅವೆಲ್ಲದರಲ್ಲೂ ಮಹಿಳಾ ಪ್ರಾತಿನಿಧ್ಯ ಹೇಗಿದೆ? ವರ್ಗ ಸಮಾನತೆಯ ಮಾತುಗಳು ಕೇಳುವಲ್ಲಿ ಲಿಂಗ ಸಮಾನತೆ ಸಾಕಾರವಾಗಿದೆಯೆ? – ಎಂಬ ಪ್ರಶ್ನೆಗಳು ಎಡಬಲಗಳ ರಕ್ತಸಿಕ್ತ ಕದನ ಶುರುವಾಗಿರುವ ಪ್ರಸಕ್ತ ಕಾಲದಲ್ಲಿ ಅಸಮಂಜಸ ಎನಿಸಬಹುದಾದರೂ, ಕಳೆದ ದಶಕದ ಬೆಳವಣಿಗೆಗಳು ಈ ಕುರಿತು ಗಮನ ಸೆಳೆಯುವಂತಿವೆ. ಕೇರಳದಲ್ಲಿ ಆಳವಾಗಿರುವ ಲಿಂಗತಾರತಮ್ಯ, ಮಹಿಳಾ ದೌರ್ಜನ್ಯ, ಸ್ತ್ರೀವಾದ ಕುರಿತ ತಪ್ಪು ಅಭಿಪ್ರಾಯಗಳು ಮಹಿಳೆಯರು ಸಂಘಟಿತರಾಗಿ ಮಾತನಾಡ ತೊಡಗಿದ ಮೇಲೆ ತಿಳಿದುಬರುತ್ತಿವೆ.

ತಾರತಮ್ಯವನ್ನು ಹುಟ್ಟಿದಾಗಿನಿಂದ ಅನುಭವಿಸುವ ಹೆಣ್ಣುಮನಸ್ಸುಗಳು ಸದಾ ಬಂಡೆದ್ದ ಸ್ಥಿತಿಯಲ್ಲಿ, ಅದನ್ನು ಹತ್ತಿಕ್ಕಲ್ಪಟ್ಟ ಅವಸ್ಥೆಯಲ್ಲಿರುತ್ತವೆ. ಅದರಲ್ಲೂ ಶ್ರಮದ ದುಡಿಮೆಗೊಳಗಾಗುವ ಹೆಣ್ಮಕ್ಕಳು ಇಮ್ಮುಖ ಶ್ರಮಕ್ಕೆ ಈಡಾಗಿ ಆಕ್ರೋಶಗೊಂಡಂತೆ ಇರುತ್ತಾರೆ. ತಮ್ಮ ಅಸಹಾಯಕ ಘಳಿಗೆಗಳಲ್ಲಿ ಬೆಂಬಲ ನೀಡುವ ಸಂಘಟನೆ, ಮುಖಂಡರು ಕೂಡಾ ಲಿಂಗ ಪ್ರಶ್ನೆಯನ್ನೆತ್ತಿಕೊಳ್ಳದೇ ಹೋದಾಗ ಹೆಣ್ಣುಮನಸ್ಸುಗಳು ಬಂಡೇಳುತ್ತವೆ. ಮಹಿಳಾ ಕಾರ್ಮಿಕರೇ ಪ್ರತ್ಯೇಕವಾಗಿ ಸಂಘಟನೆ ಕಟ್ಟಬೇಕಾಗುತ್ತದೆ.

ಹಾಗೆ ಮಹಿಳೆಯರೇ ಮುಂದಾಗಿ ಸಂಘಟನೆ ಕಟ್ಟುವುದರ ಏಳುಬೀಳುಗಳು, ಸವಾಲುಗಳು ಕಡಿಮೆಯದಲ್ಲ. ಆ ಕುರಿತು ತಿಳಿಯಲು ಕೇರಳದ ಕೋಯಿಕ್ಕೋಡ್ ಮತ್ತು ಮನ್ನಾರ್‌ನಲ್ಲಿ ರೂಪುಗೊಂಡ ಮಹಿಳಾ ಕಾರ್ಮಿಕ ಸಂಘಟನೆಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಪೆಣ್ ಕೂಟ್ಟು – ಅಸಂಘಡಿತ ಮಗಿಳಾ ತೊಳಿಲಾಲಿ ಯೂನಿಯನ್ – (ಎಎಂಟಿಯು)**

ಕೇರಳದ ಮೊದಲ ಮಹಿಳಾ ಕಾರ್ಮಿಕ ಸಂಘಟನೆ ಕೋಯಿಕ್ಕೋಡಿನ 'ಅಸಂಘಡಿತ ಮಗಿಳಾ ತೊಳಿಲಾಲಿ ಯೂನಿಯನ್ (ಎಎಂಟಿಯು). ೨೦೦೯ರಿಂದಲೇ 'ಪೆಣ್ ಕೂಟ್ಟು' ಹೆಸರಿನಲ್ಲಿ ಮಹಿಳಾ ಪರ ಹೋರಾಟಗಳನ್ನು ಕೈಗೆತ್ತಿಕೊಂಡ ಅದು ೨೦೧೬ರಲ್ಲಿ ನೋಂದಾಯಿಸಲ್ಪಟ್ಟಿತು. ಪೆಣ್ ಕೂಟ್ಟು ಈವರೆಗೆ ನಡೆದ ಹಾದಿ ಸ್ಫೂರ್ತಿದಾಯಕವಾಗಿದೆ.

ಕೋಯಿಕ್ಕೋಡಿನಲ್ಲಿ 'ಮಿಠಾಯಿ ಬೀದಿ' ಇದೆ. ಅದು ಪಟ್ಟಣದ ಹಳೆಯ, ಜನನಿಬಿಡ, ವ್ಯಾಪಾರಿ ಸ್ಥಳ. ರಸ್ತೆ ಬದಿಯಿದ್ದ ಗೂಡಂಗಡಿಗಳು, ದೂಡಂಗಡಿಗಳು ಎತ್ತಂಗಡಿಯಾಗಿ, ಮಾಲ್‌ಗಳು ಮೇಲೆದ್ದು ನಗರದ ಚಹರೆ ಬದಲಾಗುವಾಗ ಮಿಠಾಯಿ ಬೀದಿಯ ಏಕೈಕ 'ಪೇ ಅಂಡ್ ಯೂಸ್' ಟಾಯ್ಲೆಟ್ ಮುಚ್ಚಿಹೋಯಿತು. ಅಲ್ಲಿದ್ದ ದುಡಿಯುವ ಮಹಿಳೆಯರ ಪಾಲಿಗದು ಕೆಟ್ಟ ಸುದ್ದಿ. ಆಗ ಅದೇ ಬೀದಿಯಲ್ಲಿ ಟೈಲರ್ ಆಗಿದ್ದ ಪಿ. ವಿಜಿ ಶೌಚಾಲಯ ತೆರವಿನ ವಿರುದ್ಧ ಟೊಂಕಕಟ್ಟಿ ನಿಂತರು. ಬೀದಿಯ ಹೆಣ್ಮಕ್ಕಳನ್ನೆಲ್ಲ ಸೇರಿಸಿ ಪ್ರತಿಭಟನೆ ನಡೆಸಿದರು. 'ಪೆಣ್ ಕೂಟ್ಟು' ಅಸ್ತಿತ್ವಕ್ಕೆ ಬಂತು. ಆ ಬೀದಿಯಲ್ಲಿದ್ದ ಸ್ವಚ್ಛತೆ ಕೆಲಸ ಮಾಡುವವರು, ಟೈಲರುಗಳು, ಬಟ್ಟೆ ಅಂಗಡಿಯಲ್ಲಿ ಸೇಲ್ಸ್ ವುಮೆನ್ ಆಗಿರುವವರು ಅವರ ಜೊತೆ ಬಂದರು. 'ರೈಟ್ ಟು ಪೀ' (ಉಚ್ಚೆಹೊಯ್ಯುವ ಹಕ್ಕು) ಚಳುವಳಿ ಶುರುವಾಯಿತು. ಆ ಹೆಣ್ಮಕ್ಕಳು ಅಂಗಡಿ ಮಾಲೀಕರು, ಗೂಂಡಾಗಳನ್ನಷ್ಟೇ ಅಲ್ಲ, ಕೇರಳದ ಬಲಿಷ್ಠ ಟ್ರೇಡ್ ಯೂನಿಯನ್ನುಗಳನ್ನೂ ಎದುರುಹಾಕಿಕೊಂಡಿದ್ದರು. ಆ ಹೊತ್ತಿನಲ್ಲಿ ವಿಜಿ ಸಹಾಯಕ್ಕೆ ನಿಂತವರು 'ನಕ್ಸಲ್ ಮಹಿಳೆ' ಅಜಿತಾ.




ಕೊನೆಗೆ ಇವರ ಬೇಡಿಕೆಗೆ ಸ್ಪಂದಿಸಿದ ಜಿಲ್ಲಾಡಳಿತ ಆ ಶೌಚಾಲಯ ಉಳಿಸಿತು, ಅಷ್ಟೇ ಅಲ್ಲ ಮತ್ತೂ ೧೦ ಶೌಚಾಲಯಗಳನ್ನು ತೆರೆಯಿತು. ಅಸಂಘಟಿತ ವಲಯದ ಮಹಿಳೆಯರ ಹಕ್ಕು ಮತ್ತು ಸಮಸ್ಯೆಗಳ ಕುರಿತು ಚರ್ಚೆ ಶುರುವಾಯಿತು. ಬಟ್ಟೆ ಅಂಗಡಿಗಳಲ್ಲಿ ಸೇಲ್ಸ್ ವುಮೆನ್ ದಿನಕ್ಕೆ ೮ರಿಂದ ೧೨ ತಾಸು ನಿಂತೇ ಕೆಲಸ ಮಾಡಬೇಕಿತ್ತು. ಇದು ಹಲವು ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗಿತ್ತು. ಅಲ್ಲದೆ ಕೆಲಸ ಅಭದ್ರತೆಯದಾಗಿತ್ತು. ಆರೋಗ್ಯ ತಪ್ಪಿ ಕೆಲವೇ ದಿನ ರಜೆ ಮಾಡಿದರೂ ಕೆಲಸ ಹೋಗುತ್ತಿತ್ತು. ದಿನಗೂಲಿ ಬರೀ

## ಶ್ರೀ ಅರವಿಂದ ಗುಪ್ತ ಅವರಿಗೆ ಪದ್ಮಶ್ರೀ ಪ್ರಶಸ್ತಿ

ಮಹಾರಾಷ್ಟ್ರದ ಪುಣೆಯ ಮೂಲದವರಾಗಿರುವ ಹಾಗೂ ಕೇವಲ ಕಸ, ಕಡ್ಡಿಪುಳ್ಳೆಗಳಿಂದ ಮಕ್ಕಳ ಆಟಿಕೆಗಳನ್ನು ಮಾಡುವ ಕಲೆಯಲ್ಲಿ ನಿಷ್ಣಾತರಾಗಿರುವ ಖ್ಯಾತ ವಿಜ್ಞಾನಿ ಶ್ರೀ ಅರವಿಂದ ಗುಪ್ತ ಅವರು ವಿಜ್ಞಾನ ಮತ್ತು ಶಿಕ್ಷಣ ಕ್ಷೇತ್ರಗಳಿಗೆ ನೀಡಿರುವ ಕೊಡುಗೆ ವಿಶಿಷ್ಟವಾದುದು. ಅದಕ್ಕಾಗಿ ೨೦೧೮ರ ಪದ್ಮಶ್ರೀ ಪ್ರಶಸ್ತಿ ನೀಡಿ ಅವರನ್ನು ಗೌರವಿಸಲಾಗಿದೆ. ಅವರ ಹಲವಾರು ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ. ಶ್ರೀ ಗುಪ್ತ ಅವರಿಗೆ 'ನವಕರ್ನಾಟಕ ಪ್ರಕಾಶನ' ಮತ್ತು 'ಹೊಸತು' ಬಳಗದ ಅಭಿನಂದನೆಗಳು.

೫೦ರಿಂದ ೭೦ ರೂಪಾಯಿ. ಇಂತಹ ಬಟ್ಟೆ ಅಂಗಡಿಗಳ ವಿರುದ್ಧ, ಅದರಲ್ಲೂ ಕಲ್ಯಾಣ್ ಸ್ಯಾರೀಸ್ ಮಳಿಗೆಗಳ ವಿರುದ್ಧ ಪೆಣ್ ಕೂಟ್ಟುವಿನ ಐವರು ಸದಸ್ಯರು ೨೦೧೪ನೇ ಡಿಸೆಂಬರ್‌ನಲ್ಲಿ ಧರಣಿ ಕೂತರು. ೧೦೦ ದಿನಕ್ಕಿಂತ ಹೆಚ್ಚು ಕಾಲ ಮುಷ್ಕರ ನಡೆಯಿತು. ಕೊನೆಗೆ ಕೇರಳದ ಅಂಗಡಿ–ವಾಣಿಜ್ಯ ಮುಂಗಟ್ಟುಗಳ ೧೯೬೦ರ ಕಾಯ್ದೆಗೆ ತಿದ್ದುಪಡಿ ತಂದು ಬಟ್ಟೆ ಅಂಗಡಿಗಳಲ್ಲಿ ಕೂರುವ ವ್ಯವಸ್ಥೆ ಆಯಿತು. ದಿನಗೂಲಿ ೧೦೦ ರೂಪಾಯಿ ಮಾಡಲಾಯಿತು.

ಈ ಯಶಸ್ಸಿನಿಂದ ಸ್ಫೂರ್ತಿಗೊಂಡು ಪೆಣ್ ಕೂಟ್ಟು ಕೆಲಸ ಮುಂದುವರೆಸಿತು. ಬೀದಿಯಲ್ಲಿ ನಡೆಯುತ್ತಿದ್ದ ಚುಡಾಯಿಸುವಿಕೆ, ಲೈಂಗಿಕ ದೌರ್ಜನ್ಯದ ವಿರುದ್ಧ ದನಿಯೆತ್ತಿತು. ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯ ಒಂದು ವಾರ 'ಕೂಟ್ಟು'ವಿನ ೧೦ ಮಹಿಳೆಯರ ಗುಂಪು ಸಾರ್ವಜನಿಕ ಸ್ಥಳಗಳಲ್ಲಿ ಹೆಣ್ಮಕ್ಕಳನ್ನು ಚುಡಾಯಿಸುವ, ದೌರ್ಜನ್ಯ ನಡೆಸುವ ಪುಂಡರನ್ನು ಅಲ್ಲಲ್ಲೇ ಹಿಡಿದು ಪೊಲೀಸರಿಗೊಪ್ಪಿಸಿತು. ಕೆಲವೆಡೆ ಅವರ ಮೇಲೇ ಗೂಂಡಾಗಳು ದಾಳಿ ಮಾಡಿದರು.

೨೦೧೧ರಲ್ಲಿ ಸಂಘಟನೆಯಾಗಿ ರೂಪುಗೊಂಡರೂ ಪೆಣ್ ಕೂಟ್ಟು ರಿಜಿಸ್ಟರ್ ಆಗಿರಲಿಲ್ಲ. ೨೦೧೨ರಲ್ಲಿ ಪ್ರಯತ್ನಿಸಿದರೂ ತಾಂತ್ರಿಕ ಕಾರಣಗಳಿಗಾಗಿ ತಿರಸ್ಕೃತವಾಗಿತ್ತು. ೨೦೧೩ರಲ್ಲಿ ಅನಿಮಾ ಮುಯರತ್ ಎಂಬ ಯುವ ವಕೀಲೆ ಕೋಯಿಕ್ಕೋಡ್‌ಗೆ ಬಂದರು. ಕೇರಳದ ನ್ಯಾಯಾಲಯಗಳಲ್ಲಿ ಅನುಭವಕ್ಕೆ ಬಂದ ಲಿಂಗಅಸೂಕ್ಷ್ಮತೆಯ ನಡೆಗಳಿಗೆ ಆಕೆ ಬೆಚ್ಚಿಬಿದ್ದರು. ಪೆಣ್ ಕೂಟ್ಟುವಿನ ಚಟುವಟಿಕೆ ಅವರ ಗಮನ ಸೆಳೆಯಿತು. ಅದು ನೋಂದಾವಣಿ ಆಗದೇ ರಿಜಿಸ್ಟರ್ ಆಫೀಸಿನಲ್ಲಿ ರಗಳೆಯಾಗುತ್ತಿದ್ದದ್ದು ತಿಳಿಯಿತು. ಜುಲೈ ೨೦೧೫ರಲ್ಲಿ ನೋಂದಾವಣೆಗಾಗಿ ಮತ್ತೆ ಅರ್ಜಿ ಸಲ್ಲಿಸಿದರು. 'ಅಸಂಘಟಿತ' ಪದ ಚರ್ಚೆಗೊಳಗಾಯಿತು. ಆ ಪದವನ್ನು ವ್ಯಾಖ್ಯಾನಿಸಲು ಬರುವುದಿಲ್ಲ, ಗುರುತಿಸಲೂ ಸಾಧ್ಯವಾಗುವುದಿಲ್ಲ; ಅದಕ್ಕಿಂತ 'ಬಟ್ಟೆ ಅಂಗಡಿ ಕೆಲಸಗಾರರ ಸಂಘ', 'ಮಾಲ್ ಕೆಲಸಗಾರರ ಸಂಘ'ದಂತಹ ಖಚಿತ ಪದ ಬೇಕು ಎಂದು ಹೇಳಿದರು. ಕೊನೆಗೆ ಮಹಿಳೆಯರೇ ಇರುವ ಯೂನಿಯನ್ ನೋಂದಾಯಿಸಲು ಬರುವುದಿಲ್ಲ ಎಂದು ತಕರಾರು ತೆಗೆದರು! ಆಗ ೧೯೭೨ರಲ್ಲಿ ನೋಂದಾಯಿಸಲ್ಪಟ್ಟ 'ಸೆಲ್ಫ್ ಎಂಪ್ಲಾಯ್ಡ್ ವಿಮೆನ್ಸ್ ಅಸೋಸಿಯೇಷನ್' (ಸೇವಾ) ನೋಂದಣಿ ಕುರಿತು ಹೇಳಬೇಕಾಯಿತು. ಕೊನೆಗಂತೂ ೨೦೧೬ ಜನವರಿಯಲ್ಲಿ ಸಂಘಟನೆ ನೋಂದಣಿಯಾಯಿತು.

ಈ ಎಲ್ಲ ಆಗುಹೋಗುಗಳ ಸಮಯದಲ್ಲಿ ಯೂನಿಯನ್ನುಗಳು ಅವರನ್ನು ಬೆಂಬಲಿಸಲೂ ಇಲ್ಲ, ಗಂಭೀರವಾಗಿ ಪರಿಗಣಿಸಲೂ ಇಲ್ಲ.

ಈಗ ಆ ಸಂಘಟನೆಯಲ್ಲಿ ೧೦ ಸಾವಿರಕ್ಕಿಂತ ಹೆಚ್ಚು ಸದಸ್ಯೆಯರಿದ್ದಾರೆ. ಬಟ್ಟೆ ಅಂಗಡಿ, ನರ್ಸಿಂಗ್, ಅಂಗನವಾಡಿ–ಕುಡುಂಬಶ್ರೀ ಕಾರ್ಯಕರ್ತೆ ಮಹಿಳೆಯರು ಅದರ ಸದಸ್ಯೆಯರಾಗಿದ್ದಾರೆ. ಗಂಡಸರೂ ಸದಸ್ಯರಾಗಿದ್ದಾರೆ. ಕಾರ್ಯಕಾರಿ ಸಮಿತಿಯಲ್ಲಿ ೭೫% ಹೆಣ್ಮಕ್ಕಳಿದ್ದಾರೆ. ಅದರ ಮುಂದಾಳು ಪಿ. ವಿಜಿ, 'ಸ್ತ್ರೀ ಪುರುಷರ ನಡುವೆ ವೇತನ ತಾರತಮ್ಯ ತೀವ್ರವಾಗಿದೆ. ಗಂಡಸರಿಗೆ ನಮಗಿಂತ ಎರಡರಷ್ಟು ಸಂಬಳ ಕೊಡುತ್ತಾರೆ. ಕುಟುಂಬವನ್ನು ಪೋಷಿಸುವವಳೇ ಮಹಿಳೆಯಾದರೂ ಅಧಿಕಾರವೆಲ್ಲ ಗಂಡಸಿನ ಕೈಯಲ್ಲಿ. ಹೆಣ್ಣಿಗೆ ಅಧಿಕಾರ ಇಲ್ಲದಿರುವುದೇ ಶೋಷಣೆಯ ಮೂಲವಾಗಿದೆ. ಹೆಣ್ಣುಮಕ್ಕಳಿಗೆ ಎಲ್ಲ ಸ್ತರಗಳಲ್ಲೂ ಅಧಿಕಾರ ಕೊಡಿಸಲೆಂದೇ ನಾವು ಹೋರಾಡುತ್ತಿದ್ದೇವೆ' ಎನ್ನುತ್ತಾರೆ.

ಕೇರಳದಾದ್ಯಂತ ಪೆಣ್ ಕೂಟ್ಟು ಹಲವು ಮಹಿಳೆಯರಿಗೆ ಸ್ಫೂರ್ತಿಯಾಗಿದೆ.

**ಪೆಂಬಿಲೈ ಒರುಮೈ**

ಕೇರಳದ ಮನ್ನಾರ್ ಪ್ರವಾಸಿ ಕೇಂದ್ರವಾಗಿ, ದಕ್ಷಿಣದ ನಾಲ್ಕು ರಾಜ್ಯಗಳ ಶ್ರಮಿಕರನ್ನು ಸೆಳೆಯುವ ಚಹಾ ತೋಟಗಳಿಗಾಗಿ ಪ್ರಸಿದ್ಧ. ಅಲ್ಲಿರುವ ೧೩ ಸಾವಿರ ಚಹ ಕಾರ್ಮಿಕರಲ್ಲಿ ಬಹುಪಾಲು ಹೆಣ್ಮಕ್ಕಳೇ ಇದ್ದಾರೆ. ಮನ್ನಾರಿನಲ್ಲಿರುವ ಟಾಟಾ ಟೀ ನಿಯಂತ್ರಣದ ಕಣ್ಣನ್ ದೇವನ್ ಟೀ ಕಂಪನಿ (ಕೆಡಿಟಿಸಿ)ಯ ಮಹಿಳಾ ಕಾರ್ಮಿಕರು ೨೦೧೫ ಸೆಪ್ಟೆಂಬರಿನಲ್ಲಿ ೯ ದಿನಗಳ ಕಾಲ ಕೇರಳದ ಪ್ರವಾಸಿ ತಾಣ ಮನ್ನಾರ್ ಸ್ತಬ್ಧವಾಗುವಂತೆ ಮಾಡಿದರು. ಕೆಡಿಟಿಸಿಯ ಆಡಳಿತವಾಗಲೀ, ಏಟಕ್, ಇಂಟಕ್, ಸಿಐಟಿಯು ಮೊದಲಾದ ಟ್ರೇಡ್ ಯೂನಿಯನ್ನುಗಳಾಗಲೀ ಸ್ವಲ್ಪವೂ ನಿರೀಕ್ಷಿಸದಿದ್ದ ಹಾಗೆ ಮಹಿಳಾ ಕಾರ್ಮಿಕ ಸಂಘಟನೆ 'ಪೆಂಬಿಲೈ ಒರುಮೈ'ಯನ್ನು ಕಟ್ಟಿಯೇಬಿಟ್ಟರು.

ಕಷ್ಟದ ದುಡಿಮೆ, ಕಾರ್ಮಿಕ ನಾಯಕರ ನಿರ್ಲಕ್ಷ್ಯ ಮತ್ತು ಸೂಕ್ತ ವೇತನ ನಿರಾಕರಣೆ ಈ ಬಂಡೇಳುವಿಕೆಗೆ ಕಾರಣವಾಗಿತ್ತು.

ಚಹಾ ಕಾರ್ಮಿಕರ ಕೆಲಸ ಕಷ್ಟದ್ದು, ಅಪಾಯದ್ದು. ದೂರದೂರದ ಬೆಟ್ಟಗಳ ಮೇಲಿನ ಚಹಾ ತೋಟಗಳಲ್ಲಿ ಬೆಳಿಗ್ಗೆ ೮ರಿಂದ ಸಂಜೆ ೫ರ ತನಕ ಚಳಿಯ ನಡುವೆ ಎಲೆ ಕೀಳಬೇಕು. ೭೫–೧೦೦ ಕೆಜಿ ಭಾರದ ಚೀಲಗಳನ್ನು ಹೊತ್ತು ಬೆಟ್ಟವಿಳಿದು ಬರಬೇಕು. ನಡುವೆ ೧೨ ಗಂಟೆಯಿಂದ ೧ ಗಂಟೆಯವರೆಗೆ ವಿರಾಮವಿದ್ದರೂ ಬೆಳಿಗ್ಗೆಯೇ ಒಯ್ದು, ತಣ್ಣಗೆ ಕೊರೆಯುವ ಊಟವನ್ನೇ ಉಣಬೇಕು. ಜಿಗಣೆ–ಚಿರತೆ–ಆನೆ–ಹಾವುಗಳ ಕಾಟ, ಮಳೆ–ಚಳಿಯೆನ್ನದೆ ಕೆಲಸ, ಮೈಯೆಲ್ಲ ಗೀರು ಗಾಯ. ಚಿಕನ್, ಮೀನು ಎರಡೂ ಮನ್ನಾರಿನಲ್ಲಿ ತುಟ್ಟಿ. ಬರೀ ಅನ್ನ ಬೇಳೆಸಾರನ್ನೇ ತಿಂದು ಬಹುಪಾಲು ಕಾರ್ಮಿಕರು ಅಪೌಷ್ಟಿಕತೆ, ರಕ್ತಹೀನತೆಯಿಂದ ಬಳಲುತ್ತಿದ್ದರು. ೧೪, ೧೫ ವರ್ಷವಾಗುವುದರಲ್ಲಿ ಕೆಲಸಕ್ಕೆ ಸೇರಿ, ೫೮ ವರ್ಷಕ್ಕೆ ನಿವೃತ್ತಿಯಾಗುವವರೆಗೂ ದುಡಿದು, ನಾನಾ ಕಾಯಿಲೆಗಳಿಗೆ ತುತ್ತಾಗುವವರೇ ಹೆಚ್ಚು. ಕನಿಷ್ಠ ದಿನಕೂಲಿ ೨೩೨ ರೂಪಾಯಿ ಸಿಗಲು ಪ್ರತಿದಿನ ಕನಿಷ್ಠ ೨೧ ಕೆಜಿ ಎಲೆ ಕೊಯ್ಯಬೇಕು. ನಂತರ ಪ್ರತಿ ಹೆಚ್ಚುವರಿ ಕೆಜಿಗೆ ೫೦ ಪೈಸೆಯಿಂದ ೨ ರೂಪಾಯಿ ತನಕ ಹೆಚ್ಚುವರಿ ಹಣ. ೧೦೦ ಕೆಜಿ ಕಿತ್ತರೂ ದಿನದ ಗರಿಷ್ಠ ದುಡಿಮೆ ೩೦೮ ರೂಪಾಯಿ.

ಹೀಗೆ ರಕ್ತ ಬೆವರಾಗಿಸಿ ದುಡಿದರೂ, ಕಂಪನಿ ನಷ್ಟದಲ್ಲಿದೆಯೆಂದು ಕಾರ್ಮಿಕರಿಗೆ ೩ ವರ್ಷದಿಂದ ಸಂಬಳ ಏರಿಸಿರಲಿಲ್ಲ. ನಷ್ಟದ ಕಾರಣ ಹೇಳಿ ಬೋನಸ್‌ಅನ್ನು ೧೯%ನಿಂದ ೧೦%ಗೆ ಇಳಿಸಲಾಗಿತ್ತು. ೧೭ ದಿನ ಮುಷ್ಕರ ನಡೆದು, ಆರು ಸಲ ಮಾತುಕತೆ ನಡೆದಿದ್ದರೂ ಕಾರ್ಮಿಕ ನಾಯಕರು



ಮಹಿಳೆಯರನ್ನು ಸಭೆಗೆ ಕರೆದೊಯ್ದಿರಲಿಲ್ಲ. ದಿನದ ಕನಿಷ್ಠ ಸಂಬಳ ೫೦೦ ರೂಪಾಯಿ ಕೇಳಿದ್ದರೆ, ಯೂನಿಯನ್‌ನವರು ೩೦೧ ರೂಪಾಯಿಗೆ ಒಪ್ಪಿ ಮುಷ್ಕರ ನಿಲ್ಲಿಸಿದರು. ಇದು ಕಾರ್ಮಿಕರಿಗೆ ಯೂನಿಯನ್ ನಾಯಕರು ಬಗೆದ ದ್ರೋಹ ಎನಿಸಿತು.

ಅದರಲ್ಲೂ ಮಹಿಳೆಯರು ತೀರಾ ಸಿಟ್ಟಿಗೆದ್ದಿದ್ದರು. ಬೇಡಿಕೆಯ ಅರ್ಧದಷ್ಟು ಬೋನಸ್ ಎಂದಾಗ ಕೆರಳಿಹೋದರು. ಸಿಐಟಿಯುನ ಲಿಜ್ಜಿ ಸನ್ನಿ, ಇಂಟಕ್‌ನ ಗೋಮತಿ ಅಗಸ್ಟಿನ್, ರಾಜೇಶ್ವರಿ, ಎಂ. ಇಂದ್ರಾಣಿ ಮೊದಲಾದವರು ಈ ನಿರ್ಧಾರದ ವಿರುದ್ಧ ಹೆಣ್ಮಕ್ಕಳ ಸಂಘಟನೆ ಕಟ್ಟಿದರು. ೨೦% ಆದರೂ ಬೋನಸ್ ಕೊಡಲೇಬೇಕೆಂದು ಮುಷ್ಕರ ಹೂಡಲು ನಿರ್ಧರಿಸಿದರು. 'ಟ್ರೇಡ್ ಯೂನಿಯನ್ ನಾಯಕರು ಮಾಲೀಕರೊಡನೆ ಶಾಮೀಲಾಗಿ ದ್ರೋಹ ಬಗೆಯುತ್ತಿದ್ದಾರೆ. ಕಂಪನಿ ವತಿಯಿಂದ ಅವರಿಗೆ ಉಚಿತವಾದ ಉತ್ತಮ ಮನೆ, ಮಕ್ಕಳಿಗೆ ಶಿಕ್ಷಣದ ವ್ಯವಸ್ಥೆ ಇದೆ. ಅವರ ಮಕ್ಕಳಿಗೆ ಅಲ್ಲೇ ಕೆಲಸವೂ ಸಿಗುತ್ತದೆ. ಕಾರ್ಮಿಕ ನಾಯಕರಿಗೆ ಮೂವತ್ತಕ್ಕಿಂತ ಹೆಚ್ಚು ಉತ್ತಮ ಮನೆಗಳನ್ನು ಕೊಟ್ಟಿದ್ದರೆ ಕಾರ್ಮಿಕರಿಗೆ ಒಂದೇ ಕೋಣೆಯ ಮನೆಗಳು. ಕೆಲವು ನೂರು ವರ್ಷಕ್ಕಿಂತ ಹಿಂದೆ ಕಟ್ಟಿರುವಂಥವು. ಪ್ರತ್ಯೇಕ ಶೌಚಾಲಯವೂ ಇರದ ಸಾರ್ವಜನಿಕ ಶೌಚ ವ್ಯವಸ್ಥೆ ಹೊಂದಿರುವಂಥವು. ಕಾರ್ಮಿಕರಿಗೆ ಉಚಿತವಾಗಿ ಎಲ್ಲ ಕೊಡುತ್ತೇವೆನ್ನುತ್ತಾರೆ. ಆದರೆ ಎಲ್ಲದಕ್ಕೂ ಕಾಸು ಕೀಳುತ್ತಾರೆ. ೩ ತಿಂಗಳಿಗೆ ೭೫ ಕೆಜಿ ಅಕ್ಕಿ ಕೊಟ್ಟರೂ ಅದಕ್ಕೆ ಕಂಪನಿ ೭೫೦ ರೂಪಾಯಿ ಹಿಡಿದುಕೊಳ್ಳುತ್ತದೆ. ಸಂಬಳ ನಾಕು ಕಾಸು ಏರಿಸಿ, ಕಾರ್ಮಿಕರನ್ನು ತಣ್ಣಗಾಗಿಸಿ, ಕಾರ್ಮಿಕ ನಾಯಕರು ಕಂಪನಿಯಿಂದ ಪೂರ್ತಿ ಲಾಭ ಪಡೆಯುತ್ತಾರೆ' ಎಂಬ ಕಟುವಾಸ್ತವ ಲಿಜ್ಜಿ ಮತ್ತಿತರರಿಗೆ ಅರಿವಾಯಿತು. ಸಹಕಾರ್ಮಿಕರೆದುರು, ಮಾಧ್ಯಮದೆದುರು, ಜನರೆದುರು ಇವೆಲ್ಲ ಒಳಸುಳಿಗಳನ್ನು ವಿವರವಾಗಿ ಬಿಚ್ಚಿಟ್ಟರು.

ಮನ್ನಾರ್ ಆಡಳಿತ ಕಚೇರಿಯೆದುರು ಮುಷ್ಕರ ಶುರುವಾಯಿತು. ಮೊದಲು ಕೆಲವೇ ಜನರಿದ್ದರೂ ದಿನಗಳೆದಂತೆ ಸಾವಿರಾರು ಮಹಿಳಾ ಕಾರ್ಮಿಕರು ಬಂದರು. ಬೇರೆಬೇರೆ ಕಾರ್ಮಿಕ ಸಂಘಟನೆಗಳಿಗೆ, ರಾಜಕೀಯ ಪಕ್ಷಗಳಿಗೆ ಸೇರಿದ ಎಲ್ಲ ಮಹಿಳೆಯರೂ ಒಟ್ಟಾದರು. ಕೊಚ್ಚಿ – ಧನುಷ್ಕೋಟಿ ರಾಷ್ಟ್ರೀಯ ಹೆದ್ದಾರಿ ಮುಚ್ಚಿದರು. ಮನ್ನಾರಿಗೆ ಬಂದಿಳಿದ ಸಾವಿರಾರು ಮಹಿಳೆಯರ ಕಾರಣವಾಗಿ ಪ್ರವಾಸೋದ್ಯಮ ಬಂದ್ ಆಯಿತು. ಜನಜೀವನ ಅಸ್ತವ್ಯಸ್ತಗೊಂಡಿತು. ಮೊದಲು ಯೂನಿಯನ್ನುಗಳು ಹೆದರಿಸಿದವು. 'ಬರೀ ಹೆಣ್ಣಂಗುಸ್ರೆ ಅದೇನ್ ಮಾಡ್ತೀರಿ? ನಿಮ್ಮ ಹಿಂದೆ ಗಂಡಸ್ರು ಇಲ್ದಿದ್ರೆ ಏನೂ ಮಾಡಕಾಗಲ್ಲ, ತಿಳ್ಕಳಿ' ಎಂದರು. 'ಹೋರಾಡ್ತಾರಂತೆ ಹೋರಾಟ' ಎಂದು ಲೇವಡಿ ಮಾಡಿದರು. 'ಮುಷ್ಕರ ಯಶಸ್ವಿಯಾಗಿ ಬೋನಸ್ ಸಿಕ್ಕಿಬಿಟ್ಟರೆ ಅರ್ಧ ಮೀಸೆ ಬೋಳಿಸ್ತೇವೆ' ಎಂದು ಕೆಲವರೆಂದರು. ಮನ್ನಾರಿನ ಅಂಗಡಿಯವರಿಗೆ ಮುಷ್ಕರನಿರತ ಹೆಂಗಸರಿಗೆ ಕಾಳುಕಡಿ, ಸಾಲ ಕೊಡಬೇಡಿ ಅಂದರು.

ಹಾಗೆಂದವರೆಲ್ಲ ತಮ್ಮ ಮಾತು ತಾವೇ ತಿನ್ನುವಂತಾಯಿತು. ಮುಷ್ಕರ ೯ ದಿನ ನಡೆಯಿತು. ಇಡಿಯ ಕೇರಳದ ಪ್ರಜ್ಞಾವಂತ ಸಮಾಜ ಮಹಿಳೆಯರ ಬೆಂಬಲಕ್ಕೆ ನಿಂತಿತು. ಅತ್ಯಂತ ಶಿಸ್ತಿನಲ್ಲಿ ಹೋರಾಟ ನಡೆಯಿತು. ರಾಜಕೀಯ ಪಕ್ಷಗಳು, ಹಲವು ಮುಖಂಡರು ಬೇಳೆ ಬೇಯಿಸಿಕೊಳ್ಳಲು ಬಂದರು. ಆದರೆ ಹೆಣ್ಮಕ್ಕಳು ಎಲ್ಲರನ್ನೂ ದೂರ ಇಟ್ಟರು. 'ನಮಗೆ ಕಾರ್ಮಿಕ ಸಂಘಟನೆಗಳು ಬೇಕು. ಆದರೆ ನಮ್ಮ ಮುಂದಾಳುಗಳು ಯಾರೆನ್ನುವುದನ್ನು ನಾವೇ ನಿರ್ಧರಿಸುತ್ತೇವೆ' ಎಂದು ದಿಟ್ಟವಾಗಿ ಹೇಳಿದರು.

ಹೀಗೆ ಐದು ಸಾವಿರಕ್ಕಿಂತ ಹೆಚ್ಚು ಮಹಿಳೆಯರು ನಡೆಸಿದ ಒಂದೂವರೆ ತಿಂಗಳ ಹೋರಾಟದಲ್ಲಿ ಲಿಜ್ಜಿ ಸನ್ನಿ, ಗೋಮತಿ ಅಗಸ್ಟಿನ್, ಎಂ. ಇಂದ್ರಾಣಿ, ರಾಜೇಶ್ವರಿ ಮೊದಲಾದ ನಾಯಕಿಯರು ಹೊರಹೊಮ್ಮಿದರು. ಕೊನೆಗೆ ೨೦% ಬೋನಸ್ ಮತ್ತು ಕನಿಷ್ಠ ೫೦೦ ರೂಪಾಯಿ ದಿನಗೂಲಿ ಪಡೆಯುವುದ ರೊಂದಿಗೆ ಮುಷ್ಕರ ಕೊನೆಯಾಯಿತು.

ದಶಕಗಳಿಂದ ಮನ್ನಾರಿನ ಮಂಜು ಮುಸುಕಿದ ಚಳಿಯ ಬೆಟ್ಟಗಳಲ್ಲಿ ಚಹಾ ಎಲೆ ಕಿತ್ತು ಸುಕ್ಕುಗಟ್ಟಿದ ಮೈ, ಸುಟ್ಟುಹೋದ ಚರ್ಮದ ಸೋದರಿಯರು ಸೋದರಿತ್ವದ ಆಧಾರದ ಮೇಲೆ ಪಕ್ಷ–ಸಂಘಟನೆಯ ಭೇದ ಮರೆತು ಒಗ್ಗಟ್ಟಾಗಿ



'ಪೆಂಬಿಳೈ ಒರುಮೈ' ಕಟ್ಟಿದರು. ಅದು ಕಣ್ಣನ್ ದೇವನ್ ಕಂಪನಿ ವಿರುದ್ಧ ಮಾತ್ರವಲ್ಲ, ಟ್ರೇಡ್ ಯೂನಿಯನ್‌ಗಳಲ್ಲಿ ಬೀಡು ಬಿಟ್ಟಿರುವ ಗಂಡಸುಶಾಹಿಯ ವಿರುದ್ಧವಾಗಿತ್ತು. ಕಾರ್ಮಿಕ ಸಂಘಟನೆಗಳ ಹುಸಿ ಟ್ರೇಡ್ ಯೂನಿಯನಿಸಂ ವಿರುದ್ಧ ಮಹಿಳೆಯರ ಬಂಡಾಯವಾಗಿತ್ತು.

* * *

ಹೆಣ್ಮಕ್ಕಳು ಯಾವಾಗ ತಂತಮ್ಮ ಯೂನಿಯನ್ ಹಾಗೂ ಪಕ್ಷದ ಹಂಗು ತೊರೆದು ಒಗ್ಗಟ್ಟಾದರೋ ಆಗ ಅವರವರ ಸಂಘಟನೆಗಳಲ್ಲಿ ನಡುಕ ಮೊದಲಾಯಿತು. ಮಹಿಳೆಯರೆಲ್ಲ ಸೇರಿ ಒಂದಾಗಿ ಪಕ್ಷ ಕಟ್ಟಿದರೆ, ಮಹಿಳಾ ಕಾರ್ಮಿಕ ಸಂಘ ಕಟ್ಟಿದರೆ ಅದುವರೆಗೆ ನಿಂತ ರಚನೆಗಳೆಲ್ಲ ಪುತುಪುತು ಉದುರಿ ಬೀಳುತ್ತವೆ ಎಂದು ಖಚಿತವಾಯಿತು. ಒಗ್ಗಟ್ಟಾದರೆ ಹೆಂಗಸರು ಏನು ಬೇಕಾದರೂ ಮಾಡಿಯಾರೆಂದು ಎಲ್ಲರಿಗೂ ಗೊತ್ತಾಯಿತು ಎಂದೇ ಹಾಗಾಗದಂತೆ ನೋಡಿಕೊಳ್ಳಲಾಯಿತು.

ನವೆಂಬರ್ ೨೦೧೫ರಲ್ಲಿ ಮನ್ನಾರ್ ಗ್ರಾಮಗಳ ಪಂಚಾಯ್ತಿ ಚುನಾವಣೆ ನಡೆದವು. ಅದರಲ್ಲಿ ಪೆಂಬಿಳೈ ಒರುಮೈನ ಐವರು ಸ್ಪರ್ಧಿಸಿದರು. ಗುಡ್ಡ ಬೆಟ್ಟಗಳ ತಲೆಯಲ್ಲಿರುವ ಕ್ಯಾಂಪು ಸುತ್ತಿ ಮತಯಾಚನೆ ನಡೆಯಿತು. ಅವರಲ್ಲಿ ಮೂರು ಜನ ಗೆದ್ದರು! ಗೆಲ್ಲುವವರೆಗೆ ಎಲ್ಲ ಸರಿಯಿತ್ತು. ನಂತರ ಗೆದ್ದವರನ್ನು ಅವರವರ ಮೊದಲಿನ ಪಕ್ಷ, ಸಂಘಟನೆಗಳು ಕೈಬೀಸಿ, ಕೈಯೆಳೆದು ಕರೆಯತೊಡಗಿದವು. ಗೋಮತಿ ಸಿಪಿಐಎಂಗೆ ಹೋದರೆ ಮತ್ತೊಬ್ಬರು ಕಾಂಗ್ರೆಸ್‌ಗೆ ಹೋದರು.

ಲಿಜ್ಜಿ ಹೇಳುತ್ತಾರೆ, 'ನಾನು ಯಾವಾಗಲೂ ಅಳುವವಳಲ್ಲ. ಅವತ್ತು ಬಿಕ್ಕಿಬಿಕ್ಕಿ ಅತ್ತೆ. ಅಷ್ಟು ನಿರಾಸೆ, ಬೇಸರ, ದುಃಖ, ಸೋಲು ಎಲ್ಲವೂ ಆವರಿಸಿತು. ಮಹಿಳೆಯರದೇ ಗುಂಪು, ಯೂನಿಯನ್, ಸಂಘಟನೆ ಕಟ್ಟುವ ಏನೆಲ್ಲ ಕನಸು ಕಂಡಿದ್ದೆವು. ಎಲ್ಲ ಕರಗಿಹೋಗಿತ್ತು. ನಂತರ ನನಗೆ ತಿಳಿಯಿತು, ಒಂದು ರಾಜಕೀಯ ಪಕ್ಷದ, ಅಧಿಕಾರದ ಬೆಂಬಲ ಇಲ್ಲದಿದ್ದರೆ ಕೆಲಸ ಮಾಡುವುದು ಕಷ್ಟ' ಎಂದು. ಇವೆಲ್ಲ ಬೆಳವಣಿಗೆಗಳು ಮಹಿಳಾ ನಾಯಕತ್ವದಲ್ಲಿ ಜನ ವಿಶ್ವಾಸ ಕಳೆದುಕೊಳ್ಳುವಂತೆ ಮಾಡಿತು. ವಿಧಾನಸಭಾ ಚುನಾವಣೆಯಲ್ಲಿ ಪೆಂಬಿಳೈ ಅಭ್ಯರ್ಥಿಗೆ ಒಂದೂವರೆ ಲಕ್ಷ ಮತದಾರರ ಕ್ಷೇತ್ರದಲ್ಲಿ ಬರಿಯ ೫೦೦ ಮತಗಳು ಬಂದವು.

ಗೋಮತಿ ಅಗಸ್ಟಿನ್ ಸಿಪಿಐ(ಎಂ) ಪಕ್ಷ ಸೇರಿದ್ದು ಪೆಂಬಿಳೈಯ ಹಲವರಿಗೆ ವಿಶ್ವಾಸದ್ರೋಹವೆನಿಸಿತ್ತು. ಆದರೆ ಎರಡು ವರ್ಷಗಳಲ್ಲಿ ಗೋಮತಿ ಪಕ್ಷದ ಬಗೆಗೆ ಭ್ರಮನಿರಸನ ಹೊಂದಿ ಪಕ್ಷ ತೊರೆದು ಬಂದರು. ಪಕ್ಷ ಟೀ ತೋಟದ ಮಾಲೀಕರ ಹಿತಾಸಕ್ತಿಯನ್ನು ಕಾಯುತ್ತಿದೆಯೇ ಹೊರತು ಕಾರ್ಮಿಕರನ್ನಲ್ಲ ಎಂದು ತಿಳಿದಾಗ ಭ್ರಮನಿರಸನವಾಯಿತು ಎಂದವರು ಹೇಳಿಕೊಂಡರು. ಅವರಿದ್ದ ಪಕ್ಷದ ಮಂತ್ರಿ ಎಂ. ಎಂ. ಮಣಿ ಪೆಂಬಿಳೈ ಒರುಮೈ ಬಗೆಗೆ, ಅದರ ಹೋರಾಟದ ಸ್ವರೂಪದ ಬಗೆಗೆ ಕೀಳು ಮಟ್ಟದ ಕಮೆಂಟು ಮಾಡಿದ್ದರು. ಆ ಹೋರಾಟ ನಡೆಯುತ್ತಿದ್ದಾಗ ಸಮೀಪದ ಕಾಡಿನಲ್ಲಿ ವೇಶ್ಯಾವಾಟಿಕೆ, ಸಾರಾಯಿ ಸೇರಿದಂತೆ ಎಲ್ಲ ಅಕ್ರಮ ಚಟುವಟಿಕೆಗಳೂ ನಡೆದವು ಎಂದುಬಿಟ್ಟರು. ಇದು ಪೆಂಬಿಳೈ ಮಹಿಳೆಯರನ್ನು ತೀವ್ರವಾಗಿ ಕೆರಳಿಸಿತು. ಗೋಮತಿ ಮತ್ತಿತರರು

# ತವರು



ಅವಳು ಗಂಡನ ಮನೆ ಸೇರಿದ ನಂತರ
ಮೊದಲ ಬಾಣಂತನಕೆ ತವರ ಸೇರಿದ್ದಳು,
ಹುಡುಕ ಹತ್ತಿದ್ದಾಳೆ ಅವ್ವನ ಹಳೆ ಕುಪ್ಪಸ, ಮಡಚಿಟ್ಟ
ರೇಷ್ಮೆಯಂಚಿನ ಮದುವೆ ಸೀರೆ,
ಮಗುವಿನ ಕಕ್ಕ ಒರೆಸುವ ಸಲುವಾಗಿ ಅಪ್ಪನ ಹಳೆ ಕಾಟನ್ ಪಂಚೆ,
ಎಲ್ಲಾ ಸಿಕ್ಕಿತು ಅನ್ನುವಷ್ಟರಲ್ಲೇ ನೆನಪಾಗಿದ್ದು,
ತಾಯಿ ಉಡಿಸಿದ ಮೊದಲ ಸೀರೆ,
ಅಟ್ಟದ ಮೇಲಿನ ಟ್ರಂಕ್, ನಡುಮನೆಯ ತಿಜೋರಿ,
ಹುಡುಕಿದಷ್ಟು ಅಮ್ಮನ ನೆನಪು ಹೆಚ್ಚುತ್ತಲಿತ್ತು,
ಕಣ್ಣು ಒದ್ದೆಯಾಗುತ್ತಲೇ ಇತ್ತು,
ಹಸುಗೂಸು ಹಾಲಿಗೆ ಅಂಗಲಾಚಿ ಅರಚುತ್ತಿತ್ತು,
ಓಡಿ ಬಂದು ಮೊಲೆಯೂಡುವಾಗಲು ಅಮ್ಮಾ
ಇರಬೇಕಿತ್ತು ಕನಿಷ್ಠ ಇವತ್ತಿನವರೆಗಾದರೂ ಅನ್ನಿಸಿತ್ತು,
ಆದರೆ ಬೇಡದ ಆತಂಕ,
ಅಮ್ಮನಿಲ್ಲದ ಮನೆಯಲ್ಲಿ ಅವಳದೆಲ್ಲ ಗುಜರಿಗೆ ಹಾಕಿದೆ
ಅಂದ ಅಪ್ಪನ
ಸಮರ್ಥಿಸಿಕೊಂಡರು ಅತ್ತಿಗೆ, ಅಣ್ಣ.
ಕೊಟ್ಟ ಹೆಣ್ಣು ಬಾಂಧವ್ಯಕ್ಕೆ ಹೊರಗೇನು?
ಅಮ್ಮನೊಂದಿಗಿನ ನೆನಪುಗಳು ಗುಜರಿಗೆ ಹಾಕಿದರೇನು?
ಅವಲಂಬಿಸಿ ಆಶಿಸುವ ನನಗೆ ಅಮ್ಮ ಗುಜರಿಯಲ್ಲೂ ಅಮ್ಮನೇ.
ಹಾಡುವ ಬಾಯಿಗೆ ಎಲ್ಲವೂ ಹಾಡೇ.
ಅಮ್ಮನ ಆಸೆಗೆ ಎದೆತುಂಬಿ ಹಾಲೆಚ್ಚುವುದು,
ಹಸಿಕಂದನ ಕೇಕೇಯಲಿ ಕೆನ್ನೆಯ ಗುಳಿ,
ಜೋ ಲಾಲಿ ಹಾಡುವವಳು ಎದೆಯೊಳಗಿನ
ಗುಜರಿಯಲಿ ಗಟ್ಟಿಯಾಗಿದ್ದಾಳೆ.

**ನಳಿನ ಡಿ.**
'ಜನನಿ ನಿಲಯ', ಬೋಜೇಗೌಡ ಲೇಔಟ್, ಐಟಿ.
ಇಂಜಿನಿಯರಿಂಗ್ ಕಾಲೇಜ್ ರಸ್ತೆ
ಜ್ಯೋತಿನಗರ ಪೋಸ್ಟ್, ಚಿಕ್ಕಮಗಳೂರು –೫೭೭ ೧೦೨

ತಕ್ಷಣ ರಸ್ತೆಯ ಮೇಲೆ ಧರಣಿ ಕೂತರು. ಆ ಮಂತ್ರಿ ತಪ್ಪಾಯಿತು ಎನ್ನಬೇಕು, ಅಲ್ಲಿಯವರೆಗೂ ಬಿಡುವುದಿಲ್ಲ ಎಂದು ಪಟ್ಟು ಹಿಡಿದರು. ಆದರೆ, ಆ ಸಮಯದಲ್ಲಿ ಪೆಂಬಿಲೈ ಒಡಕು ತೀವ್ರವಾಗಿ ಮುನ್ನೆಲೆಗೆ ಬಂತು. 'ಗೋಮತಿ ಪೆಂಬಿಲೈ ಬಿಟ್ಟುಹೋದಾಕೆ. ಈಗ ಹೇಗೆ ಅದರ ಭಾಗವಾಗಿ ಪ್ರತಿಭಟನೆ ಮಾಡುತ್ತಾರೆ?' ಎಂದು ಲಿಜ಼ಿ ಸನ್ನಿ ಕೇಳಿದರು. ಆದರೆ ಪೆಂಬಿಲೈ ಸಂಚಾಲಕ ಸಮಿತಿಯ ೧೩ ಜನರಲ್ಲಿ ೭ ಜನ ಗೋಮತಿಯವರನ್ನು ಬೆಂಬಲಿಸಿದರು. ಅವರು ಕರೆದ ಸಭೆಗಳಿಗೆ ೯ ಸಲ ಬರಲಿಲ್ಲವೆಂದು ಲಿಜ಼ಿಯನ್ನೇ ಅಧ್ಯಕ್ಷ ಸ್ಥಾನದಿಂದ ಉಚ್ಚಾಟಿಸಿದರು.

ಹೀಗೆ, ಫ್ರೆಂಚ್ ಕ್ರಾಂತಿಗೆ ಮುನ್ನುಡಿ ಬರೆದಿದ್ದ ವರ್ಸೇಲ್ಸ್ ಮಹಿಳೆಯರ ಮೆರವಣಿಗೆಗೆ ಹೋರಾಟದ ನಂತರ ಮಹಿಳೆಯರೇ ಕಟ್ಟಿದ ಹೋರಾಟ ಎಂದು ವಿಶ್ವಾದ್ಯಂತ ಗಮನ ಸೆಳೆದ ಮನ್ನಾರ್ ಮಹಿಳಾ ಹೋರಾಟ, ಸಂಘಟನೆ ನಂತರ ಛಿದ್ರವಾಯಿತು.

**ಹೆಣ್ಣುಚೇತನ ದೀಪವಾಗಿ ಉರಿಯಲಿ**

ನೂರು ಜುಟ್ಟು ಕೂಡಿದರೂ ಮೂರು ಜಡೆ ಕೂಡುವುದಿಲ್ಲ ಮುಂತಾಗಿ ಹೆಣ್ಣುಮಕ್ಕಳ ಒಗ್ಗೂಡುವಿಕೆ ಅಸಾಧ್ಯ ಎಂದು ಸಾರುವ ಈ ಸಮಾಜದಲ್ಲಿ ಕೆಲ ಮಹಿಳೆಯರು ಜಾಗೃತಗೊಂಡು ಸಾವಿರಾರು ಮಹಿಳೆಯರನ್ನು ಸೇರಿಸಿ ಸಂಘಟನೆ ಕಟ್ಟಿದ್ದು ಸಾಮಾನ್ಯವಲ್ಲ. ಇವತ್ತಿಗೂ ಬಹುಪಾಲು ಮಹಿಳಾ ಕಾರ್ಮಿಕರ ಯೂನಿಯನ್‌ಗಳ ನಾಯಕತ್ವ ಪುರುಷರ ಕೈಯಲ್ಲೇ ಇರುವಾಗ ಕೇರಳದ ಈ ಎರಡೂ ಉದಾಹರಣೆಗಳಲ್ಲಿ ಮಹಿಳೆಯರು ತಮ್ಮನ್ನು ತಾವೇ ಸಂಘಟಿಸಿಕೊಳ್ಳಲು ಸಾಧ್ಯ ಎಂದು ತೋರಿಸಿದರು. ಆದರೆ ಕಾಲದ ತುರ್ತಿಗೆ ಒಟ್ಟಾಗಿ ಹೋರಾಡುವ ಒಂದು ಗುಂಪು ನಂತರ ಒಟ್ಟಾಗಿಯೇ ಉಳಿಯಲು ಒಂದು ದೀರ್ಘಕಾಲೀನ ಗುರಿ, ಮುನ್ನೋಟ, ಆಶಯ ಇರಬೇಕಾಗುತ್ತದೆ. ಹಾಗಲ್ಲದಿದ್ದರೆ ಇದ್ದಕ್ಕಿದ್ದಂತೆ ಸಿಗುವ ಸ್ಟಾರ್‌ಗಿರಿಯು ವ್ಯಕ್ತಿತ್ವವನ್ನು, ಸಂಘಟನೆಯನ್ನು ಛಿದ್ರಗೊಳಿಸುತ್ತದೆ. ಉಲ್ಕೆಗಳಂತೆ ಬಂದವರು ಅಷ್ಟೇ ವೇಗವಾಗಿ ಮರೆಯಾಗಿಬಿಡುವುದನ್ನೂ ನೋಡುತ್ತಿದ್ದೇವೆ. ಅಧಿಕಾರದ ಎದುರು, ಅದು ಒಡ್ಡುವ ಆಮಿಷದೆದುರು ನಿಲ್ಲಲು ಮಾನಸಿಕ ತಯಾರಿ ತುಂಬ ಅಗತ್ಯ. ಅಧಿಕಾರದ ಬಗೆಗೆ ಅನಾಸಕ್ತಿ ಬೆಳೆಸಿಕೊಳ್ಳದಿದ್ದರೆ ಕುರ್ಚಿಯ ಹಪಾಹಪಿಯಲ್ಲಿ ಶಕ್ತಿ ವ್ಯಯವಾಗುತ್ತದೆ. ಇದು ಎಲ್ಲ ದಮನಿತರು, ಶೋಷಿತರಿಗೆ ಅಧಿಕಾರದ ಎದುರು ಇರಬೇಕಾದ ಎಚ್ಚರ. ಇಲ್ಲದಿದ್ದರೆ ಅಧಿಕಾರ ಉದಯಕಾಲದ ಮಂಜಿನಂತೆ, ಹೊತ್ತೇರಿದ್ದೇ ಕರಗಿಹೋಗುತ್ತದೆ.

ಆಗೊಮ್ಮೆ ಈಗೊಮ್ಮೆ ಈ ನೆಲದಲ್ಲಿ ಮಹಿಳೆಯರು ಸಹಜ ನಾಯಕಿಯರಾಗಿ ಹೊಮ್ಮಿದ್ದಾರೆ. ಸಂಘಟನೆ, ಚಳುವಳಿ, ಸಾಹಿತ್ಯ, ರಾಜಕೀಯ ಪಕ್ಷ – ಎಲ್ಲ ಕಡೆಗಳಲ್ಲಿಯೂ ನಾಯಕತ್ವದ ಅಪೂರ್ವ ಗುಣ ಹೊಂದಿದ ಮಹಿಳಾ ಮುಂದಾಳುಗಳು ಸೃಷ್ಟಿಯಾಗಿದ್ದಾರೆ. ಅಧಿಕಾರ ಮತ್ತು ಸ್ಥಾಪಿತ ವ್ಯವಸ್ಥೆಯ ಹಿತಾಸಕ್ತಿಗಳ ನಡುವೆ ಅವರು ತಮ್ಮತನವನ್ನು, ಹೆಣ್ಣುಗುಣವನ್ನು ಎಷ್ಟರಮಟ್ಟಿಗೆ ಉಳಿಸಿಕೊಳ್ಳಲು ಸಾಧ್ಯವಾಗಿದೆ? ತಮ್ಮಂತೆ ಮತ್ತೆಷ್ಟು ಮಹಿಳೆಯರನ್ನು ಬೆಳೆಸಲು ಸಾಧ್ಯವಾಗಿದೆ? ಸದ್ಯದ ತುರ್ತು ಈಡೇರಿದ ನಂತರ ಹೋರಾಟದ ಕಾವು ಉಳಿಸಿಕೊಳ್ಳಲು ಏಕೆ ಕಷ್ಟವಾಗಿದೆ? ಇವೆಲ್ಲ ಚರ್ಚಾರ್ಹ ವಿಚಾರಗಳಾಗಿವೆ. ಪ್ರತಿವರ್ಷ ಬಂದು ಹೋಗುವ ಮಹಿಳಾ ದಿನಾಚರಣೆಗಳ ನಡುವೆ ಈ ಕಡೆಗೆ ಗಮನ ಹರಿಸುವುದು ಆರೋಗ್ಯಕರ ಚಳುವಳಿ–ಸಮಾಜದ ದೃಷ್ಟಿಯಿಂದ ಅವಶ್ಯವಾಗಿದೆ.

ಹೌದು. ಕ್ರಾಂತಿ ಕೆಂಡದ ಕುಂಡ ಹೊತ್ತು ನಡೆಯುವುದೇನು ಸುಲಭವಲ್ಲ. ಕ್ರಾಂತಿಯು ಒಮ್ಮೆ ಜ್ವಾಲಾಮುಖಿಯಾಗಿ ಆಸ್ಫೋಟಗೊಂಡರೂ ನಂತರ ನಿರಂತರ ಉರಿಯುವಿಕೆಯಾಗಿ ದೀಪವಾಗಿ ಬದಲಾಗಬೇಕು. ಆಗಷ್ಟೇ ಪ್ರತಿ ಬೆಳಗಿನ ಬೆಳಕಿನ ಜೊತೆಗೆ ಸ್ವಾತಂತ್ರ್ಯ, ನ್ಯಾಯ, ಸಮಾನತೆಗಳು ದಮನಿತ ಜೀವಗಳನ್ನು ತಲುಪಿಯಾವು.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉ.ಕ.ಜಿಲ್ಲೆ – ೫೮೧ ೩೪೧



## ಭಗವದ್ಗೀತೆ : ಒಂದು ಅವಲೋಕನ

# ೧೮. ನಿನ್ನಿಚ್ಛೆಯಂತೆ ನಡೆ, ಆದರೆ ನಾನು ಹೇಳಿದಂತೆ ಕೇಳು

ಜಿ. ರಾಮಕೃಷ್ಣ

**ಇತಿಹಾಸದ ನಿರ್ಮಾಪಕರು ಯಾರು? ಮಾನವ ನಾಗರಿಕತೆಯ ಪ್ರತಿಯೊಂದು ಹಂತದಲ್ಲೂ ಈ ಪ್ರಶ್ನೆ ಉದ್ಭವಿಸಿದೆ. ಯಾರೋ ಒಬ್ಬ ಧೀರ, ಧೀಮಂತ ವ್ಯಕ್ತಿ ಒಂದು ಇಡೀ ಜನಸಮುದಾಯದ ಇತಿಹಾಸವನ್ನು ಬದಲಿಸಿಬಿಡುತ್ತಾನೆ, ಹೊಸದೊಂದು ಇತಿಹಾಸವನ್ನು ಕಟ್ಟಿಕೊಡುತ್ತಾನೆ, ಎಂಬ ಭಾವನಾತ್ಮಕ ಉತ್ತರವನ್ನು ಆಗಾಗ್ಗೆ ನೀಡುತ್ತಾ ಬರಲಾಗಿದೆ. ಗೀತೆಯ ಪ್ರಕಾರ ಶ್ರೀಭಗವಾನನೇ ಇತಿಹಾಸ ನಿರ್ಮಾಪಕ : ಜಗತ್ತಿನ ಸೃಷ್ಟಿ, ಪಾಲನೆ – ಪೋಷಣೆ, ಎಲ್ಲಾ ಅವನದ್ದೇ ಜವಾಬ್ದಾರಿ. ನಾಲ್ಕು ವರ್ಣಗಳ ನಿರ್ಮಾತೃವೂ ಅವನೇ ; ಅಂದರೆ, ಸಾಮಾಜಿಕ ಶ್ರೇಣೀಕರಣವನ್ನು ಮಾಡಿಟ್ಟಿರುವವನು ಅವನು. ಆ ಶ್ರೇಣೀಕರಣವನ್ನು ಪ್ರಶ್ನಿಸುವಂತಿಲ್ಲ, ಬದಲಾಯಿಸುವಂತಿಲ್ಲ. ಸತ್ವ, ರಜಸ್, ತಮೋಗುಣಗಳ ಪ್ರಮಾಣಕ್ಕನುಗುಣವಾಗಿ ವರ್ಣಗಳ ವಿಭಜನೆ ನಡೆದಿದೆ ಮತ್ತು ಆ ಪ್ರಮಾಣವು ಹುಟ್ಟಿನಿಂದಲೇ ನಿರ್ಧಾರವಾಗಿದೆ. ಅದು ಸ್ವಭಾವಜನ್ಯ, ಅದನ್ನು ಮೀರಿನಡೆಯುವುದು ಶ್ರೇಯಸ್ಕರವಲ್ಲ. ಅರ್ಥಾತ್, ಸಮಾಜವು ಸ್ಥಗಿತವಾಗಿರಬೇಕೇ ವಿನಾ ಚಲನಶೀಲವಾಗುವಂತಿಲ್ಲ. ಇದು ಗೀತೆಯ ಮೂಲಭೂತ ನಿಲುವು ಮತ್ತು ನಿರೀಕ್ಷೆ.**

"ಸ್ವಭಾವನಿಯತಂ ಕರ್ಮ" (೧೮.೪೭) ಎಂಬುದು ಗೀತೆಯ ಪರಮಾಪ್ತ ಘೋಷಣೆ. ಆಯಾ ವರ್ಣಗಳಿಗೆ ನಿಗದಿತವಾದ ಕೆಲಸಗಳನ್ನು ಮಾಡುತ್ತಿದ್ದು ಶ್ರೇಯೋ ಮಾರ್ಗ ಕಂಡುಕೊಳ್ಳಬೇಕೆಂಬುದು ಅದರ ಮೂಲಸ್ರೋತ. ಶಂಕರನು ಅದನ್ನು ವ್ಯಾಖ್ಯಾನಿಸುವಾಗ ಮಾರ್ಮಿಕವಾದ ಉಪಮೆಯನ್ನು ಕೊಟ್ಟಿದ್ದಾನೆ. "ಯಥಾ ವಿಷಜಾತಸ್ಯ ಇವ ಕೃಮೇಃ ವಿಷಂ ನ ದೋಷಕರಂ ತಥಾ ಸ್ವಭಾವನಿಯತಂ ಕರ್ಮ ಕುರ್ವನ್ನ ಆಪ್ನೋತಿ ಕಿಲ್ಬಿಷಂ." ವಿಷದಲ್ಲಿ ಹುಟ್ಟಿರುವ ಕ್ರಿಮಿಗೆ ವಿಷವು ದೋಷಕರವಲ್ಲ; ಅಂತೆಯೇ ಆಯಾ ವರ್ಣಗಳ ನಿಗದಿತ ಕರ್ತವ್ಯಗಳು ಆ ವರ್ಣಗಳಿಗೆ ಬಾಧೆಯಾಗಲಾರವು! ಇತರರ ಶುಶ್ರೂಷೆ ಮಾಡುವುದು ಶೂದ್ರನ ಸ್ವಭಾವಜ ಕರ್ಮ; ಆದ್ದರಿಂದ ಅದನ್ನು ಹೊರೆ ಎಂಬಂತೆ ಕಾಣಬಾರದೆಂಬುದು ಶೂದ್ರನಿಗೆ ಗೀತೆಯ ಬೋಧನೆ. ಶಂಕರನ ಮಾತುಗಳಲ್ಲಿ ಹೇಳುವುದಾದರೆ "ನ ಚ ಶಕ್ಯತೇ ಅಶೇಷತಃ ತ್ಯಕ್ತುಂ ಅಜ್ಞೇನ ಕರ್ಮ ಯತಃ ತಸ್ಮಾತ್ ನ ತ್ಯಜೇತ್ ಇತ್ಯರ್ಥಃ" (ಅಜ್ಞಾನಿಯು ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಲಾರ; ಆದ್ದರಿಂದ ವರ್ಣದ ನಿಗದಿತ ಕರ್ಮದಲ್ಲಿ ತೊಡಗಿಕೊಳ್ಳುವುದು ಒಳ್ಳೆಯದು). ಶೂದ್ರನೊಬ್ಬ ಭಗವದ್ಗೀತೆಯನ್ನು ಬರೆದಿದ್ದರೆ ಇದೇ ಬೋಧನೆ ನೀಡುತ್ತಿದ್ದಿರಬಹುದೇ ಎಂಬುದನ್ನು ಇಂದಿನ ಆಧುನಿಕ ವ್ಯಾಖ್ಯಾನಕಾರರು ಅಗತ್ಯವಾಗಿ ಕೇಳಿಕೊಳ್ಳಬೇಕು. ಇತರರ ಶುಶ್ರೂಷೆಯನ್ನು ಶೂದ್ರನಿಗೆ ಬೋಧಿಸಿದಂತೆ, ತಥಾಕಥಿತ ಉಚ್ಚ ವರ್ಣದವರಿಗೆ ಅಂಥದೇ ಕರ್ಮವನ್ನು ಗೀತೆಯು ವಿಧಿಸಿದ್ದರೆ ಆ ಗ್ರಂಥಕ್ಕೆ ಯಾವ ವರ್ಣದವರು ಹೆಚ್ಚು ಮಾನ್ಯತೆ ನೀಡಿರಬಹುದಿತ್ತು? "ವಿಷದಲ್ಲಿ ಹುಟ್ಟಿದ ಕ್ರಿಮಿಗೆ ವಿಷವು ಸ್ವಭಾವಜವಾದ್ದು" ಎಂದು ಶಂಕರನು ಹೇಳಿದಾಗ, ಅದು "ದುಡಿಮೆಗೆ ದೂಡಲ್ಪಟ್ಟ ಶೂದ್ರನು ತಾನು ವಿಷದಲ್ಲೇ ಮಿಂದು ಸುಖಿಸುತ್ತಿರಬೇಕು" ಎಂಬ ಸೂಚನೆ ನೀಡಿದಂತೆಯೇ ಸರಿ. ಇಂಥದನ್ನು ಅದೆಂತಹ ಅಧ್ಯಾತ್ಮ ವಿದ್ಯೆ ಅಥವಾ ಪರಾ ವಿದ್ಯೆಯೆಂದು ಸ್ವೀಕರಿಸಬೇಕು? ಗೀತಾರ್ಥ ಬೋಧನೆ ಮಾಡುವ ಆಚಾರ್ಯರು ಆ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. ಪ್ರಾಚೀನ ಗ್ರೀಸಿನಲ್ಲಿ ಪ್ಲೇಟೋ ಮತ್ತು ಅರಿಸ್ಟಾಟಲ್ ಮಾಡಿದ್ದೂ ಅಂಥದೇ ಕೆಲಸ. ಈ ಎಲ್ಲ ತತ್ತ್ವಶಾಸ್ತ್ರಜ್ಞರೂ ತಮ್ಮ ತಮ್ಮ ಕಾಲದ ಪ್ರಭು ವರ್ಗದ ವಕ್ತಾರರೇ ಆಗಿದ್ದಾರೆ.

ಸಾಮಾಜಿಕ ಅನಿಷ್ಟವಾದ ವರ್ಣ ವಿಭಜನೆಯನ್ನು ಅಷ್ಟೊಂದು ಗಟ್ಟಿಯಾಗಿ ಸಮರ್ಥಿಸಿದ ನಂತರ ಗೀತೆಯು ಸಂನ್ಯಾಸದಿಂದ ಗಳಿಸಬಹುದಾದ ಶ್ರೇಯೋಫಲದ ಪ್ರಸ್ತಾಪದತ್ತ ಜಿಗಿಯುತ್ತದೆ. ಒಂದು ಮೂರ್ತವಾದ ವಲಯ, ಇನ್ನೊಂದು ಅಮೂರ್ತವಾದ ವಲಯ. ಶೂದ್ರಾದಿಗಳನ್ನು ಅವರವರ ಸ್ವಭಾವಜ ಕರ್ಮಗಳಿಗೆ ಬದ್ಧರಾಗಿರಬೇಕೆಂದು ಆದೇಶಿಸುವುದು ಮೂರ್ತ ಪ್ರಪಂಚದ ವ್ಯವಹಾರ, ಆಳುವ ವರ್ಗದ ಪರವಾದ ವಕಾಲತ್ತು. ಅಲ್ಲಿಂದ ತಾರ್ಕಿಕ ಜಿಗಿತವೆನಿಸಿಕೊಳ್ಳಲಾರದ ಸಂನ್ಯಾಸದ ಮಹಿಮೆಯನ್ನು ಮುಂದಿನ ಪದ್ಯದಲ್ಲಿ ಕೈಗೆತ್ತಿಗೊಳ್ಳಲಾಗಿದೆ. ಅಧ್ಯಾತ್ಮದ ಹೊನಲನ್ನು ಹರಿಸಿ ಸಾಮಾಜಿಕ ಕ್ರೌರ್ಯದ ವಿಷಾನಿಲವನ್ನು ತಂಪಾಗಿಸುವುದು ಒಂದು ಉದ್ದೇಶ; ಇನ್ನೊಂದು ಉದ್ದೇಶ, ಗೀತೆಯನ್ನು ಮುಕ್ತಾಯಗೊಳಿಸುವಾಗ ಏನಾದರೊಂದು ಸಂತಸ, ಆಹ್ಲಾದ, ನೀಡುವುದು ಉತ್ತಮವೆನಿಸಿರಬೇಕು. ಎಲ್ಲ ಬಂಧನಗಳಿಂದಲೂ ಮುಕ್ತವಾದ ಮನಸ್ಸನ್ನು ಹೊಂದಿರುವವರು ಕರ್ಮವನ್ನು ಮಾಡುವುದರಿಂದಲೂ ಮುಕ್ತರಾಗಿರುತ್ತಾರೆ. ಅದನ್ನು 'ನೈಷ್ಕರ್ಮ್ಯಸಿದ್ಧಿ' ಎನ್ನಲಾಗಿದೆ. ಹೆಂಡತಿ – ಮಕ್ಕಳು ಮುಂತಾದ ಆಸಕ್ತಿಗಳೆಲ್ಲಾ ಕಮರಿಹೋಗಿರುವ ಮನಃಸ್ಥಿತಿ ಅದು. "ಸ್ವ ಕರ್ಮ"ಗಳ (ಅಂದರೆ, ವರ್ಣಗಳಿಗನುಗುಣವಾಗಿ ಕ್ರಿಯೆಯಲ್ಲಿ ನಿರತರಾದ) ನಂತರದ ಹಂತ ಇದು. ಅದು ಬ್ರಹ್ಮಜ್ಞಾನ ಪ್ರಾಪ್ತಿಯ ಉನ್ನತ ಮೆಟ್ಟಿಲು (೧೮.೪೯: ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ। ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನ ಅಧಿಗಚ್ಛತಿ॥). ಮುಂದಿನ ಕೆಲವು ಶ್ಲೋಕಗಳು ಬ್ರಹ್ಮಪದ ಪ್ರಾಪ್ತಿಯ ಕ್ರಮವನ್ನು ವಿಸ್ತರಿಸಿ ಹೇಳುತ್ತವೆ. ಬ್ರಹ್ಮಜ್ಞಾನವು ಅತ್ಯುಚ್ಚಮಟ್ಟದ ಜ್ಞಾನವೆಂದು ಶ್ರೀಭಗವಾನನು ಹೇಳುತ್ತಾನೆ (ಆದರೆ, ಶೂದ್ರರು ತಮ್ಮ ಸ್ವಭಾವಜ ಕರ್ಮವೆನ್ನಲಾದ ಪರರ ಶುಶ್ರೂಷೆಯನ್ನು ಬದಿಗೊತ್ತಿ ಬ್ರಹ್ಮಜ್ಞಾನ ಪಡೆಯಲು ಮುಂದಾಗಬಹುದೆಂದು ಗೀತೆಯು ಹೇಳುವುದಿಲ್ಲ).

ಬ್ರಹ್ಮಜ್ಞಾನವು ನಿಗೂಢವಾದ್ದು, ಅದನ್ನು ಪಡೆಯುವುದು ಸರಳವಲ್ಲ, ಇತ್ಯಾದಿ ಹೇಳಿಕೆಗಳು ನಮ್ಮಲ್ಲಿ ವ್ಯಾಪಕವಾಗಿವೆ. ಗೀತೆಯು ಅದನ್ನು ಉತ್ಕೃಷ್ಟವೆಂದು ಕರೆದಿದ್ದರೂ, ನಿಗೂಢವೆಂದು ಸಾರಿಲ್ಲ. ಅದನ್ನು ಪಡೆಯಲು ಒಂದು ಕ್ರಮ ಅಥವಾ ಪ್ರಕ್ರಿಯೆ ಇದೆ. ಸ್ಥಿತಪ್ರಜ್ಞನಾಗಿರಲು ಏನೇನು ಪರಿಕರಗಳು ಅಗತ್ಯವೆಂದು ಹೇಳಲಾಗಿತ್ತೋ (೨.೫೫ – ೭೨), ಅವೆಲ್ಲವನ್ನೂ ಬೇರೊಂದು ರೀತಿಯಲ್ಲಿ ಮತ್ತೆ ಗೀತೆಯು ಲಂಬಿಸುತ್ತದೆ. ಮೂಲಭೂತ ಸಾರವು ಮಾತ್ರ ಒಂದೇ! ಇಂದ್ರಿಯಗಳು ವಿವಿಧ ಆಸಕ್ತಿಗಳನ್ನು ತಣಿಸಿಕೊಳ್ಳಲು ಹಾತೊರೆಯುತ್ತಿರುತ್ತವೆ; ಅವನ್ನು ನಿಯಂತ್ರಿಸಬೇಕು; ರಾಗ – ದ್ವೇಷಗಳನ್ನು ತ್ಯಜಿಸಬೇಕು (೧೮.೫೧ : ಬುದ್ಧ್ಯಾ

ವಿಶುದ್ಧ್ಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ। ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ॥). ಏಕಾಂತವಾಸ, ಅಲ್ಪಸೇವನೆ, ಮಾತು – ಮನಸ್ಸುಗಳಿಗೆ ಕಡಿವಾಣ, ಮುಂತಾದ ಪೂರ್ವೋಕ್ತ ಯೋಗ ನಿಯಮಗಳನ್ನು ಮತ್ತೆ ಗೀತೆಯು ಪಟ್ಟಿ ಮಾಡಿದೆ (೧೮.೫೨–೫೩). ಅಂತಹ ಸಾಧನೆಯಿಂದ ಸಾಧಕನು "ಬ್ರಹ್ಮ ಭೂಯಾಯ ಕಲ್ಪತೇ", ಅಂದರೆ ಬ್ರಹ್ಮನ್ ಪದದ ಪ್ರಾಪ್ತಿಗೆ ಅರ್ಹನಾಗುತ್ತಾನೆ. ಆ ಸ್ಥಿತಿಯನ್ನು ಮುಟ್ಟಿದಾಗ ಬೇರಾವ ಆಸೆ – ಆಕಾಂಕ್ಷೆಗಳೂ ಇರದೆ, ಶ್ರೀಭಗವಾನನಲ್ಲಿ ಭಕ್ತಿಯನ್ನು ತುಂಬಿಕೊಂಡು ಸರ್ವ–ಸಮತ್ವ ಭಾವವನ್ನು ಅನುಭವಿಸಬಹುದು (೧೮.೫೪ : .... ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ). ಆ ಆಕಾಂಕ್ಷೆಯನ್ನು ಹೊತ್ತು ಸಾಮಾಜಿಕ ವಿಷಮತೆಗಳನ್ನು ಅಲಕ್ಷಿಸುತ್ತಾ ಅಂತಿಮವಾಗಿ ಶ್ರೀಭಗವಾನನಲ್ಲಿಯೇ ಲೀನವಾಗಿಬಿಡಬಹುದು! (೧೮.೫೫ : ... ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ). ಆ ಭಗವಾನನಾದರೋ ಅವನನ್ನು ಆಶ್ರಯಿಸಿದವರಿಗೆ "ಶಾಶ್ವತವೂ ಅವ್ಯಯವೂ ಆದ ಸ್ಥಾನವನ್ನು" ಕೊಟ್ಟುಬಿಡುತ್ತಾನೆ (೧೮.೫೬ : .... ಮತ್ಪ್ರಸಾದಾತ್ ಅವಾಪ್ನೋತಿ ಶಾಶ್ವತಂ ಪದಮವ್ಯಯಂ). ಆದರೆ ಅದಕ್ಕೆ ಒಂದು ಷರತ್ತಿದೆ: ಮಾನಸಿಕವಾಗಿ ಎಲ್ಲ ಕ್ರಿಯೆಗಳನ್ನೂ ಅವನಲ್ಲಿ ಕೇಂದ್ರೀಕರಿಸಬೇಕು, ಮನಸ್ಸು ಪೂರ್ತಿಯಾಗಿ ಅವನ ಮೇಲೆ ನೆಟ್ಟಿರಬೇಕು ( ೧೮.೫೭ : ..... ಮಚ್ಚಿತ್ತಃ ಸತತಂ ಭವ).

ಇಷ್ಟು ಕರುಣಾಮಯಿಯಾದ ಶ್ರೀಭಗವಾನನು ಸ್ವಲ್ಪ ಕಠೋರವಾದ ಮಾತುಗಳನ್ನೂ ಹರಿಸುತ್ತಾನೆ: "ಮನಸ್ಸನ್ನು ನನ್ನಲ್ಲಿ ಮಗ್ನವಾಗಿಟ್ಟರೆ ದುರ್ಗಮವಾದ್ದು ಯಾವುದೂ ಇಲ್ಲ; ಆದರೆ ಅಹಂಕಾರದಿಂದ ಏನಾದರೂ ಶ್ರೀಭಗವಾನನ ಮಾತನ್ನು ಉಪೇಕ್ಷಿಸಿದರೆ ಅರ್ಜುನನಂತಹ ಭಕ್ತನು ಸಹ ನಾಶವಾಗಿಬಿಡುತ್ತಾನೆ" (೧೮.೫೮ : ... ಅಥ ಚೇತ್ ತ್ವಂ ಅಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ॥). ಇದೇಕೋ ಯಹೂದಿಗಳ ಯೆಹೋವಾನ ಕಾಠಿಣ್ಯಕ್ಕೆ ಸಮೀಪವಾಗಿಬಿಟ್ಟಿತು. ಅವನೇ ಸೃಷ್ಟಿಸಿರುವ ವ್ಯಕ್ತಿಯ ಬಗ್ಗೆ ಕಾರುಣ್ಯ ತೋರಬೇಡವೆ?

"ನನ್ನ ಮಾತು ಮೀರಿದರೆ ನೀನು ಹಾಳಾಗುತ್ತೀಯೆ" ಎನ್ನುವುದು ಕರ್ಕಶವಾದ ಭಾವನೆ ಎನಿಸುವುದಿಲ್ಲವೆ ? "ತಂದೆಯು ಮಗನನ್ನು ಸಲಹುವಂತೆ, ಸ್ನೇಹಿತನೊಬ್ಬ ಸ್ನೇಹಿತನಿಗೆ ಅನುರಾಗ ತೋರುವಂತೆ" ನನ್ನನ್ನು ಕಾಣು ಎಂದು ಭಕ್ತನು ಮೊರೆಯಿಟ್ಟಿದ್ದು ವ್ಯರ್ಥವಾಯಿತೆ (ವಿಶ್ವರೂಪದರ್ಶನದ ಅಧ್ಯಾಯ ೧೧. ೪೪: .... ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ॥)?

ಗೀತೆಯ ಅಂತಿಮ ಭಾಗವು ವರ್ಣಧರ್ಮ ಅಥವಾ "ಸ್ವಭಾವಜ ಕರ್ಮ"ಕ್ಕೆ ಮರಳುತ್ತದೆ. "ಸ್ವ–ಧರ್ಮೇ ನಿಧನಂ ಶ್ರೇಯಃ" ಎಂಬುದು ಗೀತೆಯ ಉಸಿರು, ಯುದ್ಧದಲ್ಲಿ ಸತ್ತರೆ ಕ್ಷತ್ರಿಯರಿಗೆ ಸ್ವರ್ಗವು ಹತ್ತೇ ಅಂಗುಲ ಎಂಬುದು ಅದರ ಸುವಾರ್ತೆ. ಶ್ರೀಭಗವಾನನ ಶಿಷ್ಯನಾದ ಅರ್ಜುನನ ಮನಸ್ಸು ಒಡಂಬಡದಿದ್ದರೂ ಅವನು ತನ್ನ 'ಸ್ವಭಾವಜ ಕರ್ಮ'ವನ್ನು ಮಾಡಿಯೇ ತೀರುತ್ತಾನೆ, ಏಕೆಂದರೆ ಅದು ಅವನ ನಿರ್ಧಾರವನ್ನು ಮೀರಿನಿಲ್ಲುವ "ಭಗವಚ್ಚಿತ್ತ !" (೧೮.೬೦ : ... ಕರಿಷ್ಯಸಿ ಅವಶಃ ಅಪಿ ತತ್). ಭಗವಚ್ಚಿತ್ತ ಹಾಗಿದ್ದರೆ ಮೊದಲನೆಯ ಅಧ್ಯಾಯದಲ್ಲಿ ನಿರುತ್ಸಾಹಿತನಾಗಿ, ಶಸ್ತ್ರತ್ಯಾಗ ಮಾಡಿ, ಏಕೆ ನಿರ್ವಿಣ್ಣನಾಗಿ ಕುಳಿತುಬಿಟ್ಟಿದ್ದ ಈ ಕ್ಷತ್ರಿಯ ವೀರ? ಕುರುಕ್ಷೇತ್ರದಲ್ಲಿ ಅರ್ಜುನ ಏನಾದರೂ ಮಾಡಿಕೊಳ್ಳಲಿ, ಧರ್ಮಕ್ಷೇತ್ರವಾದ ಸಮಾಜದಲ್ಲಿ ಬೌದ್ಧರು, ಲೋಕಾಯತರು, 'ಸಹಜಿಯಾ' ಮುಂತಾದ ಪಂಥಗಳವರು ಈ ಭಗವಚ್ಚಿತ್ತವಾದ "ಸ್ವಭಾವಜ ಕರ್ಮ"ಗಳನ್ನೇಕೆ ಸಮಾಜ ವಿರೋಧಿ ನೀತಿಗಳೆಂದು ಸಾರಾಸಗಟಾಗಿ ನಿರಾಕರಿಸಿದರು, ವರ್ಣ ವಿಭಜನೆಯ ವಿರುದ್ಧ ಸೆಟೆದೆದ್ದು ನಿಂತರು? ಅವರು ಹಾಗೆ ನಿಲ್ಲಬಾರದಿತ್ತೆಂಬುದು ಗೀತೆಯ ಅಭಿಲಾಷೆ, ಅಷ್ಟೆ. ವಿರೋಧಿಗಳನ್ನು ಓಲೈಸುವ ದೃಷ್ಟಿಯೂ ಗೀತೆಗಿದೆ; ಅರ್ಜುನನಂತೆ ಅವರೂ ನಮ್ರವಾಗಿ ಕೈ ಮುಗಿದು "ಭಗವಾನ್, ನಿನ್ನಡಿಯಲ್ಲಿ ಶರಣಾಗಿದ್ದೇವೆ" ಎಂದು ಹೇಳಲೆಂದು ಗೀತೆ ತವಕಿಸುತ್ತದೆ. ಚಾರಿತ್ರಿಕವಾಗಿ ಅದರ ಉಗಮಕ್ಕೆ ಅದೇ ಕಾರಣ. ಗೀತೆಯಲ್ಲಿ ಪುನರುಕ್ತಿಗಳಿಗೇನೂ ಕೊರತೆಯಿಲ್ಲವೆಂಬುದು ಇದೇ ನಿಲುವನ್ನು ಇನ್ನೂ ಚೆನ್ನಾಗಿ ಸಮರ್ಥಿಸುತ್ತದೆ.

"ನನ್ನನ್ನು ಆಶ್ರಯಿಸದಿದ್ದರೆ ನೀನು ನಾಶವಾಗುತ್ತೀಯೆ" (೧೮.೫೮) ಎಂದು ಬೆದರಿಸಿದ ಗೀತೆಯು ಮುಕ್ತ ಮನಸ್ಸು ಮತ್ತು ಮುಕ್ತ ಚರ್ಚೆಯ ಅಪರಾವತಾರವೆಂಬಂತೆ "ನಾನು ಹೇಳಬೇಕಾದ್ದನ್ನೆಲ್ಲಾ ಹೇಳಿದ್ದೇನೆ, ಅತಿ ನಿಗೂಢವಾದ ಜ್ಞಾನದ ಪ್ರಭೆಯನ್ನು ಹರಡಿದ್ದೇನೆ, ಈಗ ನೀನುಂಟು ನಿನ್ನ ತೀರ್ಮಾನ ಉಂಟು, ಹೇಗೆ ಬೇಕೋ ಹಾಗೆ ಮಾಡು, ಆದರೆ ನಾನು ಹೇಳಿರುವುದನ್ನೆಲ್ಲಾ ಪೂರ್ಣವಾಗಿ ವಿಮರ್ಶೆ ಮಾಡಿಕೊಂಡು ತೀರ್ಮಾನ ತೆಗೆದುಕೊ" ಎಂದು ಉದಾರವಾದೀ ಧೋರಣೆಯನ್ನು ಬಾಯಿಮಾತಿನ ಉಪಚಾರಕ್ಕೆಂದು ಪ್ರಕಟಿಸುತ್ತದೆ (೧೮.೬೩: ...ವಿಮೃಶ್ಯ ಏತದಶೇಷೇಣ ಯಥೇಚ್ಛಸಿ ತಥಾ ಕುರು). "ಸ್ವ ಧರ್ಮವನ್ನು (ಅಂದರೆ ವರ್ಣಧರ್ಮವನ್ನು) ಶತಾಯ ಗತಾಯ ಪಾಲಿಸು, ಪರ–ಧರ್ಮವು ಭಯಾನಕ" ಎಂದು ನೂರು ಬಾರಿ ಒತ್ತಿ ಹೇಳಿ ಕಡೆಗೆ "ಏನೋ, ನಿನ್ನಿಚ್ಛೆ" ಎನ್ನುವುದು "ಆಯಿತು ಸ್ವಾಮಿ, ಎಲ್ಲಿ ಸಹಿ ಮಾಡಲಿ ಹೇಳಿ" ಎಂಬ ಒಂದೇ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತದೆ. ಇದು ಹೆನ್ರಿ ಫೋರ್ಡನ ಮುಕ್ತ ಆಯ್ಕೆಯ ಸ್ವಾತಂತ್ರ್ಯಕ್ಕೆ ಸಮಾನವಾದ್ದು. "ಏನ್ರೀ ನೀವು ಬರೀ ಕರಿಯ ಕಾರುಗಳನ್ನು ಮಾಡುತ್ತೀರಿ?" ಎಂದುದಕ್ಕೆ ಅವನ ಪ್ರತಿಕ್ರಿಯೆ ಹೀಗಿತ್ತಂತೆ : "ಹಾಗೇನೂ ಇಲ್ಲ, ಯಾವ ಬಣ್ಣದ್ದಾದರೂ ನನಗೆ ಅಡ್ಡಿಯಿಲ್ಲ, ಆದರೆ ಅದು ಕರಿ ಇರಬೇಕು, ಅಷ್ಟೆ !" ಜೀತದಾಳುಗಳಿಗಿರುವ ಸ್ವಾತಂತ್ರ್ಯವೂ ಅಂಥದೇ ಅಲ್ಲವೆ? ಶ್ರೀಭಗವಾನನ ಸಿನಿಕತನಕ್ಕೆ ಪಾರವೆಲ್ಲಿಯದು ! ಹೋಗಲಿ, "ಹೇಗೆ ಬೇಕೋ ಹಾಗೆ ಮಾಡು" ಎಂದವನು ಸುಮ್ಮನಾದನೆ? ಇಲ್ಲ. "ನೀನು ನನಗೆ ಆಪ್ತ, ಆದ್ದರಿಂದ ಇನ್ನೊಮ್ಮೆ ನಿನ್ನ ಹಿತದೃಷ್ಟಿಯಿಂದ ಹೇಳುತ್ತೇನೆ, ಕೇಳು" ಎಂದು ಇನ್ನಷ್ಟು ಭೈರಿಗೆ ಹಿಡಿಯುತ್ತಾನೆ (೧೮.೬೪ : ... ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ). ಆ ಮರುಮಾತು ಸಹ ಹಿಂದಿನ ಮಾತೇ! "ನನ್ನ ಭಕ್ತನಾಗು, ನನಗೆ ನಮಸ್ಕರಿಸು; ಆಗ ನೀನು ನನ್ನಲ್ಲಿಗೆ ಬರುವೆ, ಏಕೆಂದರೆ ನೀನು ನನಗೆ ಪ್ರಿಯನಲ್ಲವೇ?" (೧೮.೬೫ : ... ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ). ಅಭಯಹಸ್ತ ನೀಡುತ್ತಾ ಶ್ರೀಭಗವಾನನು ಲೋಕಕ್ಕೆ ಎತ್ತಿಹೇಳುತ್ತಿದ್ದಾನೆ : "ಯಾವ ಆಚರಣೆಗಳೂ ಬೇಡ, ಸುಮ್ಮನೆ ನನಗೆ ಶರಣಾಗು ; ಯಾವ ಯೋಚನೆಯೂ ಬೇಡ, ನಾನು ನಿನಗೆ ಗತಿ ಕಾಣಿಸುತ್ತೇನೆ" ಎಂದು (೧೮.೬೬ : ಸರ್ವಧರ್ಮಾನ್ ಪರಿತ್ಯಜ್ಯ ಮಾಮೇವ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥). "ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ" ಎಂಬ ಭಕ್ತರು ಶ್ರೀಭಗವಾನನಿಗೆ ಬೇಕು. "ನೀನೇ ಇಲ್ಲ, ಇನ್ನು ನಿನಗೆ ಶರಣಾಗುವುದೆಂದರೇನು ?" ಎಂದು ಬುದ್ಧ ಮತ್ತು ಲೋಕಾಯತರು ಮೂಗು ಮುರಿದರು. ಈಗತಾನೆ ಉದಾಹರಿಸಿದ 'ಸರ್ವಧರ್ಮಾನ್...' ಶ್ಲೋಕದ ನಂತರ ಶಂಕರನು ಸಾಕಷ್ಟು ದೀರ್ಘವಾದ ಭಾಷ್ಯವನ್ನು ಬರೆದು ಒಂದು ಪ್ರಶ್ನೆಗೆ ಉತ್ತರವನ್ನರಸಿದ್ದಾನೆ: ಪರಮ ನಿಃಶ್ರೇಯಸದ ಪ್ರಾಪ್ತಿಗೆ ಸಾಧನವು ಯಾವುದು ? ಜ್ಞಾನವೋ, ಕರ್ಮವೋ ಅಥವಾ ಅವೆರಡೂ ಜಂಟಿಯಾಗೋ ? ಗೀತೆಯಲ್ಲಿ ಒಮ್ಮೆ ಅದು, ಒಮ್ಮೆ ಇದು, ಎಂಬಂತೆ ಜ್ಞಾನ ಮತ್ತು ಕರ್ಮಗಳ ವಿವಕ್ಷೆ ನಡೆದಿದೆ. ಗೀತಾಚಾರ್ಯ ಶ್ರೀಭಗವಾನನ ನಿಜವಾದ ನಿಲುವನ್ನು ಖಚಿತವಾಗಿ ಇದೇ ಎಂದು ತೀರ್ಮಾನಿಸಿ ಹೇಳಲು ಪಾಮರರಾದ ನಾವು ಸಮರ್ಥರೇ ಎಂದು ಶಂಕರನು ಕೈ ಚೆಲ್ಲಿರುವುದು ಸ್ವಾರಸ್ಯಕರವಾಗಿದೆ.

ಕುರುಕ್ಷೇತ್ರವು ಗೀತೆಗೆ ಪ್ರಧಾನವಲ್ಲ, ಒಂದು ಸಾಮಾಜಿಕ – ದಾರ್ಶನಿಕ – ಮತಧರ್ಮೀಯ ವಿಶ್ಲೇಷಣೆಯು ಅದಕ್ಕೆ ಪ್ರಧಾನ ವಿಷಯ. ಗೀತೆಯು ಉಲ್ಲೇಖಿಸುವ ಧರ್ಮಕ್ಷೇತ್ರವೆಂದರೆ ಅದೇ ಇರಬೇಕು. ನಮ್ಮ ಅನೇಕ ಗ್ರಂಥಗಳಲ್ಲಿ ಇರುವಂತೆ ಗೀತೆಯಲ್ಲೂ ಅದರ ಸಂದೇಶ ಪಡೆಯಲು ಪಾತ್ರರು ಯಾರು, ಅಪಾತ್ರರು ಯಾರು ಎಂಬ ವಿವೇಚನೆ ನಡೆದಿದೆ. ಜನರನ್ನು ತಲುಪಬೇಕು ಎಂದಾದರೆ ಎಲ್ಲರೂ ಪಾತ್ರರೇ ಆಗಬೇಕು. ಕೆಲವರಿಗೆ ಅದು ಲಭ್ಯವಾಗಬಾರದೆಂದು ಹೇಳುವುದು ಲೋಭಿ ಗುಣ ಎನಿಸಿಕೊಳ್ಳುತ್ತದೆ. ಸದ್ಗುಣಿಗಳು ಮಾತ್ರ ಸತ್ಪಾತ್ರರೆಂದಾದರೆ ಗೀತೆಯ ಸಂದೇಶ ಅವರಿಗೆ ಅನಗತ್ಯ, ಏಕೆಂದರೆ ಅವರಾಗಲೇ

**ಅಭಿನಂದನೆ...**

ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕನ್ನಡದ ಖ್ಯಾತ ಕವಿ ಹಾಗೂ ನಾಟಕಕಾರರಾದ ಡಾ॥ ಚಂದ್ರಶೇಖರ ಕಂಬಾರರು ಆಯ್ಕೆಯಾಗಿದ್ದಾರೆ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಸದ್ಗುಣಿಗಳಾಗಿಬಿಟ್ಟಿದ್ದಾರೆ. ಯಾರು ಬೇಕಾದರೂ ಓದಿ ತಿಳಿದುಕೊಳ್ಳಲಿ, ಎಷ್ಟು ಗ್ರಾಹ್ಯವೋ ಅಷ್ಟನ್ನು ಆಚರಣೆಗೆ ತರಲಿ, ಎಂದು ಹೇಳಿದ್ದರೆ ಗೀತೆಯ ಘನತೆ ಹೆಚ್ಚಾಗಿರುತ್ತಿತ್ತು. ಶ್ರೇಷ್ಠ – ಕನಿಷ್ಠ ಎಂಬ ವಿಂಗಡಣೆಯು ನಮ್ಮ ಅನೇಕ ಮತಧರ್ಮಗಳ ಸಿದ್ಧಾಂತ ನಿರೂಪಣೆಗಳಲ್ಲಿ ಎದ್ದುಕಾಣುತ್ತದೆ. ಜನಮನವನ್ನು ಪ್ರಭಾವಿಸುವ ಉದ್ದೇಶ ಹೊಂದಿರುವ ಗ್ರಂಥಗಳು ತಮಗೆ ತಾವೇ ಬೇಲಿ ರಚಿಸಿಕೊಂಡರೆ ಹೇಗೆ? ಶ್ರೀಭಗವಾನನನ್ನು ಅಸೂಯೆಯಿಂದ ಕಾಣುವವರಿಗೆ ಗೀತೆಯನ್ನು ಬೋಧಿಸಬಾರದಂತೆ; ಅಂತೆಯೇ, ತಪಸ್ಸು – ಭಕ್ತಿ – ಸೇವೆಗಳಲ್ಲಿ ನಿರತರಾಗದಿರುವವರಿಗೆ ಅದು ವರ್ಜ್ಯವಂತೆ. ಸರ್ವರಿಗೂ ವೇದ್ಯವಾಗದಂತಿರುವುದು, ಉಪಯುಕ್ತವಾಗದಂತಿರುವುದು ಗೀತೆಯಲ್ಲೇನಿದೆ? ಆಸಕ್ತಿಯುಳ್ಳವರಿಗೆಲ್ಲಾ ಇದು ತೆರೆದ ಪುಸ್ತಕವೆಂದು ಘೋಷಿಸಿಕೊಳ್ಳುವ ಬದಲು ವಿವಿಧ ಚಹರೆಗಳ ಜನರನ್ನು ದೂರವಿಡುವ ಯೋಜನೆ ಅಪಥ್ಯವಾದ್ದು. ಗೀತೆಯ ಆದೇಶವನ್ನು ಪಾಲಿಸುವುದಾದರೆ ಅರ್ಹರನ್ನು ಗುರುತಿಸಲು ಮಾಪನದಂಡ ಯಾವುದು? "ಇಂದ್ರಿಯ ನಿಗ್ರಹವು ಒಳ್ಳೆಯದು" ಎಂದು ತಿಳಿಸಲು ಸಂಕೋಚವೆಂಥದು? ಶ್ರೀಭಗವಾನನಿಗೆ ಏನು ಅನುಮಾನಗಳು ಕಾಡುತ್ತವೋ ಗೊತ್ತಿಲ್ಲ. ತನ್ನನ್ನು ತಾನು ಅಷ್ಟೊಂದು ಶ್ಲಾಘಿಸಿಕೊಂಡು, ಕಡೆಯಲ್ಲಿ "ಇದು ನಿಗೂಢ" ಎಂದು ಕೆಲವರನ್ನು ದೂರವಿಡುವ ಹುನ್ನಾರವು ಸರ್ವಥಾ ಆದರಣೀಯವಲ್ಲ. ಈಗಾಗಲೇ ಭಕ್ತರಾಗಿರುವವರಿಗೆ ಉಪದೇಶ ಬೇಕಿಲ್ಲ; ಭಕ್ತರಲ್ಲದವರನ್ನು ತನ್ನತ್ತ ಸೆಳೆದುಕೊಳ್ಳಲೆಂದೇ ಅಲ್ಲವೇ ಹದಿನೆಂಟು ಅಧ್ಯಾಯಗಳಲ್ಲಿ ವಿಷಯ ಮಂಡನೆ ಮಾಡಿದ್ದು! ಹಾಗಿದ್ದರೆ 'ಅಪಾತ್ರ'ರೆಂದೇಕೆ ಕೆಲವರನ್ನು ದೂರವಿಡಬೇಕು? ಅವನ ಭಕ್ತರಾಗಿದ್ದು, ಇತರ ಭಕ್ತರಿಗೆ ಅವನ ಮಹಿಮೆಯನ್ನು ತಿಳಿಸಿಕೊಟ್ಟರೆ ಅಂತಹ ಭಕ್ತರು ಅವನನ್ನು ಸೇರಿಕೊಳ್ಳುತ್ತಾರಂತೆ (೧೮.೬೮ : ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷು ಅಭಿಧಾಸ್ಯತಿ । ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೈವ ಏಷ್ಯತಿ ಅಸಂಶಯಃ॥). ಎರಡನೆಯದಾಗಿ, ಅವನ ಉಪದೇಶವು 'ಪರಮ ಗುಹ್ಯ'ವಾಗಿರಬಹುದು, ಆದರೆ ಅದು ಹಾಗೆಯೇ ಉಳಿಯಬೇಕೆ? ಸದ್ಯ, ಗೀತಾಚಾರ್ಯನು "ಶೂದ್ರ ವರ್ಣದವರಿಗೆ ಗೀತೆಯ ಸಂದೇಶ ಸಾರಕೂಡದು" ಎಂದು ವಿಧಿಸಿಲ್ಲ! ಶ್ರೀಭಗವಾನನನ್ನು ಇತರರಿಗೆ ಪರಿಚಯಿಸುವ ಕಾಯಕ ಮಾಡುವವರು ಅವನಿಗೆ ಪ್ರಿಯವಂತೆ (೧೮.೬೯). ಇದೆಂತಹ ಆತ್ಮರತಿ! "ಅಯ್ಯಾ ಗೀತಾಚಾರ್ಯ, ನಿನ್ನ ರಹಸ್ಯಜ್ಞಾನವನ್ನು ನೀನೇ ಇಟ್ಟುಕೋ" ಎಂದುಬಿಟ್ಟರೆ ಗೀತಾಚಾರ್ಯನು ಅಂಥವರನ್ನು ಹೇಗೆ ಪ್ರಭಾವಿಸುತ್ತಾನೆ? ಹಾಗೆನ್ನದೆ, ನಾವು ಸಂಯಮದಿಂದ ಕೃಷ್ಣಾರ್ಜುನ ಸಂವಾದವನ್ನು ಓದುವುದು ಅವನಿಗೆ ತೃಪ್ತಿ ತರುತ್ತದಂತೆ (೧೮.೭೦). ಹಾಗಿದ್ದರೆ ಅಪಾತ್ರರು ಯಾರು? ಅಷ್ಟು ಸಾಲದೆಂಬಂತೆ, ಓದುಗರಿಗೆ ಪ್ರಲೋಭನೆಯನ್ನೂ ಒಡ್ಡಲಾಗಿದೆ: ಶ್ರದ್ಧೆಯುಳ್ಳವರು, ಅಸೂಯಾಪರರಲ್ಲದವರು, ಸುಮ್ಮನೆ ಗೀತಾವಾಕ್ಯದ ಶ್ರವಣ ಮಾಡಿದರೂ ಸಾಕು, ಅಂಥವರು ಶುಭಲೋಕ ಪ್ರಾಪ್ತಿಗೆ ಅರ್ಹರಾಗುತ್ತಾರೆ (೧೮.೭೧). ಫಲದ ನಿರೀಕ್ಷೆ ಇಲ್ಲದೆ ಕಾರ್ಯ ಪ್ರವೃತ್ತನಾಗು ಎಂದು ಬೋಧಿಸಿದ ಗೀತೆ ಇದೀಗ ಸಾರ್ಥಕವಾಯಿತು, ಏಕೆಂದರೆ ಗೀತಾ ಶ್ರವಣ ಸಹ ಏನೋ ಮಹತ್ವದ ಸಂಪತ್ತನ್ನು ನೀಡುತ್ತದೆ. ಗೀತೆ ಹೇಳಿದ್ದನ್ನು ಮಾಡಬೇಕಿಲ್ಲ, ಹೇಳಿದ್ದನ್ನು ಕೇಳಿಬಿಟ್ಟರೆ ಸಾಕು! ಅದಕ್ಕೇ ಇರಬೇಕು ಗೀತಾಶ್ರವಣ ಮಾಡುವ ಮಂದಿ "ಸತ್ಸಂಗ"ಗಳಲ್ಲಿ ಕೂತು ಬರುತ್ತಾರೆ. ಸ್ಥಿತಪ್ರಜ್ಞರಾಗಬೇಕಿಲ್ಲ, ಸ್ಥಿತಪ್ರಜ್ಞನೆಂದರೆ ಎಂಥವನು ಎಂದು ತಿಳಿದರೆ ಸಾಕು!! ಅಂತೂ ಶ್ರೀಭಗವಾನನು ತನ್ನ ಪ್ರಶಿಷ್ಯನನ್ನು ಕೇಳುತ್ತಾನೆ: "ನಾನು ಹೇಳಿದ್ದನ್ನೆಲ್ಲಾ ಏಕಾಗ್ರತೆಯಿಂದ ಕೇಳಿಸಿಕೊಂಡೆಯಾ? ನಿನ್ನ ಅಜ್ಞಾನವು ತೊಲಗಿತು ತಾನೆ? (೧೮.೭೨ : ಕಚ್ಚಿದೇತತ್ ಶ್ರುತಂ ಪಾರ್ಥ ತ್ವಯಾ ಏಕಾಗ್ರೇಣ ಚೇತಸಾ। ಕಚ್ಚಿದಜ್ಞಾನ ಸಂಮೋಹಃ ಪ್ರನಷ್ಟಸ್ತೇ ಧನಂಜಯ). ಇಂದಿನ ಗೀತೆಯ ಓದುಗರು ಮತ್ತು ಕೇಳುಗರು ಅರ್ಜುನನಂತೆಯೇ ಉತ್ತರ ನೀಡಬಹುದು: "ಓಹೋ, ಶ್ರೀಭಗವಾನ್, ಎಲ್ಲಾ ತಿಳಿಯಿತು; ಸಂದೇಹಗಳೆಲ್ಲಾ ನಿವಾರಣೆಗೊಂಡವು. ನೀನು ಹೇಳಿದಂತೆ ಮಾಡಲು ಸಿದ್ಧ" (೧೮.೭೩ : ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾತ್ ಮಯಾ ಅಚ್ಯುತ । ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ॥). ಅಂದರೆ, "ಯುದ್ಧದಲ್ಲಿ ಯಾರನ್ನು ನೀನಾಗಲೇ ಸಂಹರಿಸಿದ್ದೀಯೋ ಅವರನ್ನು ಸಂಹರಿಸಲು ನಾನೀಗ ಮುಂದಾಗುತ್ತೇನೆ. ನೀನು ತಿಳಿಸಿಕೊಟ್ಟ 'ಸ್ವಭಾವಜ ಧರ್ಮ'ದ ಪರಿಪಾಲನೆಯನ್ನು ಚಾಚೂತಪ್ಪದೆ ಮಾಡುತ್ತೇನೆ. ಆ ಬೌದ್ಧ ಮತ್ತು ಲೋಕಾಯತರ ಮಾತುಗಳನ್ನು ಕಿವಿಗೆ ತುಂಬಿಕೊಳ್ಳುವುದಿಲ್ಲ, ಮನಸ್ಸಿನೊಳಗಂತೂ ಖಂಡಿತ ಬಿಟ್ಟುಕೊಳ್ಳುವುದಿಲ್ಲ" ಎಂಬ ಆಶ್ವಾಸನೆಯನ್ನು ಮಹಾಮಹಿಮ ಶ್ರೀಭಗವಾನನಿಗೆ ಕೊಟ್ಟು ನಿರಾಳವಾಗಬೇಕು! ಕೃಷ್ಣನ ವಾಣಿಯು ವ್ಯಾಸನ ಕೃಪೆಯಿಂದ ಸಂಜಯನ ಕಿವಿಯನ್ನು ಮುಟ್ಟಿತ್ತು. ಸಾಕ್ಷಾತ್ ಯೋಗೇಶ್ವರನೇ ಅರುಹಿದ ಜ್ಞಾನವನ್ನು ಪಡೆದು ಸಂಜಯನು ಧನ್ಯನಾದ; ಕಣ್ಣು ಕಾಣದ ಧೃತರಾಷ್ಟ್ರನು ಸಂಜಯನಿಂದಾಗಿ ಅಷ್ಟನ್ನೂ ಕೇಳಿ ತಿಳಿದುಕೊಂಡು ಕೃತಾರ್ಥನಾದ. ಗೀತೆಯ ಕರ್ತೃವು ನಿಟ್ಟುಸಿರಿಡಬಹುದು, ಶತಮಾನಗಳ ಕಾಲ ಎಲ್ಲರೂ ಅವರವರ ವರ್ಣಧರ್ಮವನ್ನು ಪಾಲಿಸುವುದರಲ್ಲಿ ಗೆರೆ ದಾಟುವುದಿಲ್ಲ, ವರ್ಣಸಂಕರವನ್ನು ತಡೆದಿದ್ದೇನೆ, ಎಂತಹ ಚಮತ್ಕಾರ, ಎಂದು.

ಸಾಮಾಜಿಕ ನೆಲೆಯಲ್ಲಿ ಶ್ರೇಷ್ಠ – ಕನಿಷ್ಠ ಎಂಬ ತಾರತಮ್ಯವನ್ನು ಗೀತೆಯು ಪ್ರಶ್ನಿಸಲಿಲ್ಲ, ಬದಲಾಗಿ ಅದನ್ನು ಪುಷ್ಟೀಕರಿಸಿತು, ಅದು ಪರಮಾತ್ಮನ ಸೃಷ್ಟಿಯಾದ್ದರಿಂದ ಅದನ್ನು ಅಂಗೀಕರಿಸಬೇಕು ಎಂದು ಆಗ್ರಹಿಸಿತು. ಚರಿತ್ರೆಯ ಗತಿಯನ್ನು ಪ್ರತಿರೋಧಿಸುವುದರಲ್ಲಿ ಗೀತೆಯು ಸಂಪೂರ್ಣವಾಗಿ ಯಶಸ್ವಿಯಾಗಲಿಲ್ಲ, ಅ–ಯಶಸ್ವಿಯೂ ಆಗಲಿಲ್ಲ. ಆಚಾರ್ಯರೆಲ್ಲಾ ಗೀತೆಯ ಸೌಧಕ್ಕೆ ಕಂಭಗಳಾಗಿ ಕಂಗೊಳಿಸಿದ್ದಾರೆ. ಸಾಮಾಜಿಕ ಅಸಮಾನತೆಯನ್ನು ಒಪ್ಪದ ಬುದ್ಧ ಮತ್ತು ಲೋಕಾಯತರು ಗೀತೆಯ ಕೆಂಗಣ್ಣುಗಳಿಂದ ಭೀತರಾಗಲಿಲ್ಲ. ಬದಲಾಗಿ, ನಂತರದ ನಾಮದೇವ, ಬಸವ, ಕಬೀರ ಮುಂತಾದವರ ಮುಖಾಂತರ ತಮ್ಮ ಇಂಗಿತವನ್ನು ಪ್ರಕಟಪಡಿಸುತ್ತಲೇ ಬಂದಿದ್ದಾರೆ. ಮಾನವ ಯಾನ ಮುಂದುವರಿದಿದೆ. ಶ್ರೇಷ್ಠ – ಕನಿಷ್ಠ ಎಂಬ ಭೇದವನ್ನು ಉಳಿಸಿಕೊಂಡೇ ಮೋಕ್ಷ ಪಡೆಯುತ್ತೇವೋ ಅಥವಾ ಅದನ್ನು ತೊಡೆದುಹಾಕುವುದೇ ಮೋಕ್ಷವೋ ಎಂಬುದರ ಮಂಥನ ಸಾಗಲಿ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ ಬೆಂಗಳೂರು – ೫೬೦ ೦೮೫

*ಹದಿನೆಂಟು ಅಧ್ಯಾಯಗಳ ಗೀತೆಯ ವಿಮರ್ಶಾತ್ಮಕ ಲೇಖನಗಳ ಸರಣಿಯು ಇಲ್ಲಿಗೆ ಮುಕ್ತಾಯವಾಗಿದೆ. ಲೇಖನಗಳನ್ನು ಕುರಿತಂತೆ ಓದುಗರ ಪ್ರಶ್ನೆಗಳೇನಾದರೂ ಇದ್ದರೆ ಪತ್ರಿಕೆಯ ಸಂಪಾದಕರಿಗೆ ಬರೆದು ತಿಳಿಸಬಹುದು. ಲೇಖಕರು ಅವಕ್ಕೆ ಪ್ರತಿಕ್ರಿಯಿಸುತ್ತಾರೆ. ಪ್ರಶ್ನೆಗಳು ಮಾರ್ಚ್ ೧೨ರೊಳಗಾಗಿ ತಲುಪಿದರೆ ಅನುಕೂಲ.*

*– ಸಂ.*

## ದುಡಿಯುವ ಜನ



ನಾವು ದುಡಿಯುವ ಜನ
ಪ್ರೀತಿಸಲು ಪ್ರೇಮಿಸಲು
ತುಂಬಾ ಸುಸ್ತಾಗಿದ್ದೇವೆ
ಅದಕ್ಕಾಗಿ ನಾವು
ಸರಕಾರವನ್ನು ಉರುಳಿಸಬೇಕು



ನಾವು ದುಡಿಯುವ ಜನ
ಸರಕಾರವನ್ನು ಉರುಳಿಸಲು
ತುಂಬಾ ಸುಸ್ತಾಗಿದ್ದೇವೆ
ಅದಕ್ಕಾಗಿ ನಾವು
ಪ್ರೀತಿಸಬೇಕು ಪ್ರೇಮಿಸಬೇಕು

**ಬಿ ಎ. ಸಂವರ್ತ (ಸಾಹಿಲ್)**
ಸತ್ಯಶ್ರೀ, ಎಂಐಜಿ, ೪ನೇ ಕ್ರಾಸ್, ೬ನೇ ಮುಖ್ಯರಸ್ತೆ
ಮಣಿಪಾಲ್ – ೫೭೬ ೧೦೪

# ಕ್ರೋನಿ ಕ್ಯಾಪಿಟಲಿಸಂ ಲೂಟಿಕೋರರ ಹಗರಣಗಳ ಮಾಲೆಯ ವಜ್ರ

ಮ. ಶ್ರೀ. ಮುರಳಿ ಕೃಷ್ಣ

"ಯಾರ್ದೊ ದುಡ್ಡು, ಯಲ್ಲಮ್ಮನ ಜಾತ್ರೆ", "ಉಂಡೂ ಹೋದ, ಕೊಂಡೂ ಹೋದ" ಮುಂತಾದ ದೇಸಿ ಗಾದೆಗಳು, ನಮ್ಮ ದೇಶದಲ್ಲಿ ಜರುಗಿದ/ಜರುಗುತ್ತಿರುವ ದೊಡ್ಡ ದೊಡ್ಡ ಹಗರಣಗಳತ್ತ ಗಮನವನ್ನು ಹರಿಸಿದಾಗ ನೆನಪಿಗೆ ಬರುತ್ತವೆ. ಕೆಲವು ದಿನಗಳ ಹಿಂದೆ ಬೆಳಕಿಗೆ ಬಂದ ಸಾರ್ವಜನಿಕ ವಲಯದ ಪಂಜಾಬ್ ನ್ಯಾಷನಲ್ ಬ್ಯಾಂಕಿನ ಹಗರಣದ ಬಗೆಗೆ ಬರಹವೊಂದನ್ನು ಬರೆಯಲು ತಯಾರಿ ನಡೆಸಿದ್ದಾಗಲೇ ರೊಟೊಮ್ಯಾಕ್ ಪೆನ್ ತಯಾರಿಕಾ ಕಂಪನಿಯ ನಿರ್ದೇಶಕ ಕೊಠಾರಿ ವಿರುದ್ಧ ರೂ. ೩,೬೯೫ ಕೋಟಿ ವಂಚನೆಯ ದೂರು ದಾಖಲಾಗಿ ಇರುವುದು ಮಾಧ್ಯಮಗಳಲ್ಲಿ ವರದಿ ಆಗಿದೆ. ಪ್ರಸ್ತುತ ಬರಹ ಮುದ್ರಣಕ್ಕೆ ಹೋಗುವಾಗ, ತರುವಾಯ ಓದುಗರ ಕೈ ಸೇರುವಾಗ ಇನ್ನೆಷ್ಟು ಹಗರಣಗಳು ಬಯಲಾಗುವುದೋ ಬಲ್ಲವರಾರು?

ಪಂಜಾಬ್ ನ್ಯಾಷನಲ್ ಬ್ಯಾಂಕ್‌ಗೆ (ಪಿಎನ್‌ಬಿ) ವಜ್ರಾಭರಣ ಉದ್ಯಮಿ ನೀರವ್ ಮೋದಿ ರೂ. ೧೧,೪೦೦ ಕೋಟಿ ವಂಚನೆ ಎಸಗಿರುವ ವಿಷಯ ಸಾರ್ವಜನಿಕ ವಲಯದಲ್ಲಿ ವ್ಯಾಪಕ ಚರ್ಚೆಗೆ ಗುರಿಯಾಗಿದೆ. ಅನೇಕ ವ್ಯಾಖ್ಯಾನಗಳು ಹರಿದಾಡುತ್ತಿವೆ. ಇದು ವ್ಯವಸ್ಥೆಯ ವಿಫಲತೆ ಎಂದು ಅರ್ಥೈಸುವ ವಿಶೇಷಜ್ಞರು ಇಂತಹ ಹಗರಣಗಳ ಹಿಂದಿರುವ ನೈಜ ಕಾರಣಗಳನ್ನು ವಿಶ್ಲೇಷಿಸುತ್ತಿದ್ದಾರೆಯೇ? ಆಳುವ ಸರ್ಕಾರಗಳು ಇಂತಹ ದಗಾಕೋರರ ವಿರುದ್ಧ ಕಠಿಣ ಕ್ರಮಗಳನ್ನು ಜಾರಿ ಮಾಡಲು ಏಕೆ ಸಾಧ್ಯವಾಗುತ್ತಿಲ್ಲ? ಇಂತಹ ಪ್ರಭಾವಿ, ಸಿರಿವಂತ ವಂಚಕರಿಗೂ ಕೆಲವು ರಾಜಕೀಯ ಪಕ್ಷಗಳಿಗೂ ಇರುವ ಸಂಬಂಧಗಳು ಯಾವ ರೀತಿಯವು? ಎಂಬಿತ್ಯಾದಿ ಪ್ರಶ್ನೆಗಳು ಏಳುವುದು ಸಹಜ.

೧೯೯೦ರ ದಶಕದ ಹಿಂದಿನ ಕಾಲವನ್ನು ಕೆಲವು ಅರ್ಥಶಾಸ್ತ್ರಜ್ಞರು, ರಾಜಕೀಯ ವಿಶ್ಲೇಷಕರು 'ನೆಹರು ಪ್ರಣೀತ ಸಮಾಜವಾದಿ ನೀತಿಗಳ ಇನ್ಸ್‌ಪೆಕ್ಟರ್ ರಾಜ್' ಎಂದು ಲೇವಡಿ ಮಾಡುವುದುಂಟು. ವಿದೇಶಿ ಬಂಡವಾಳದ ಒಳಹರಿವು ಸೇರಿದಂತೆ ಅನೇಕ ವ್ಯಾಪಾರಿ, ವಾಣಿಜ್ಯ ವಿಷಯಗಳ ಬಗ್ಗೆ ವಿವಿಧ ಅಡೆತಡೆಗಳು ಇದ್ದುದರಿಂದ ನಮ್ಮ ದೇಶ ಆರ್ಥಿಕವಾಗಿ ಹಿಂದುಳಿಯಿತು ಎಂಬುದು ಅವರು ಮಂಡಿಸುವ ವಾದ. ನಿಜ, ಕೆಲವು ಕಟ್ಟುಪಾಡುಗಳಿಂದ ಲುಕ್ಸಾನು ಆಗಿರಬಹುದು. ಇವುಗಳಿಂದ ಭ್ರಷ್ಟಾಚಾರಕ್ಕೆ ಕುಮ್ಮಕ್ಕೂ ಸಿಕ್ಕಿರಬಹುದು. ಆದರೆ ಈ ವಿಷಯವನ್ನು ಚರ್ಚಿಸುವಾಗ, ಕೆಲವು ಗಹನ ಅಂಶಗಳನ್ನು ಪರಿಗಣಿಸಬೇಕು. ೧೯೯೦ರ ದಶಕದ ತರುವಾಯ ನಮ್ಮ ದೇಶದಲ್ಲಿ ಜರುಗಿರುವ ಹಗರಣಗಳ ಸಂಖ್ಯೆ ಎಷ್ಟು? ಅವುಗಳಿಂದಾದ ಆರ್ಥಿಕ ನಷ್ಟ ಎಷ್ಟು? ಎಷ್ಟು ಕೋಟಿಗಳು ಗುಳುಂ ಆದವು? ಹೀಗಾಗುವುದಕ್ಕೂ ನವ ಉದಾರ ನೀತಿಗಳ ಪಾಲನೆಗೂ ಸಂಬಂಧಗಳಿವೆಯೇ? ಎಂಬಿತ್ಯಾದಿ ಪ್ರಶ್ನೆಗಳಿಗೆ ಮುಕ್ತ ಮಾರುಕಟ್ಟೆಯ ನೀತಿಗಳಿಗೆ ಉಘೆ ಉಘೆ ಎನ್ನುವ ಅರ್ಥಶಾಸ್ತ್ರಜ್ಞರು ಏನು ಉತ್ತರವನ್ನು ನೀಡುತ್ತಾರೆ.

ಇರಲಿ ನಮ್ಮ ದೇಶದ ಎರಡನೇ ಅತಿದೊಡ್ಡ ಬ್ಯಾಂಕಾಗಿದೆ ಪಿಎನ್‌ಬಿ. ಅದರ ಮುಂಬೈಯ ಬ್ರಾಡಿ ಹೌಸ್ ಶಾಖೆಯೊಂದರಲ್ಲೇ ಇಷ್ಟು ಬೃಹತ್ ಮೊತ್ತದ ವಂಚನೆ ಜರುಗಿದೆ. ಸುಮಾರು ಏಳು



ವರ್ಷಗಳಿಂದ ಈ ದೋಖಾ ಕಾರ್ಯಾಚರಣೆಗಳು ಜರುಗಿವೆ ಎಂದು ಕೇಳಿಬರುತ್ತಿದೆ. ಈ ಬ್ಯಾಂಕಿನಿಂದ ನೀರವ್ ಮೋದಿ ಸಂಬಂಧವಿದ್ದ ಕಂಪನಿಗಳಿಗೆ ೧೫೦ ಖಾತರಿ ಪತ್ರಗಳನ್ನು ನೀಡಲಾಗಿದೆ. ತಮ್ಮ ವ್ಯಾಪಾರ ವಹಿವಾಟುಗಳಲ್ಲಿ, ಸರಕು ಮತ್ತು ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುವ ನಿಟ್ಟಿನಲ್ಲಿ ಇಂತಹ ಪತ್ರಗಳನ್ನು ನೀಡಲಾಗುತ್ತದೆ. ಆಮದು ಮಾಡಿಕೊಳ್ಳುವ ಕಂಪನಿಯ ಹಣವನ್ನು ಸಂದಾಯ ಮಾಡಲು ವಿಫಲವಾದರೆ, ಬ್ಯಾಂಕು ಅದನ್ನು ಪಾವತಿಸಬೇಕಾಗುತ್ತದೆ. ಇಂತಹ ಪತ್ರಗಳನ್ನು ಪಡೆಯುವ ಕಂಪನಿಯು ಖಾತರಿ ಪತ್ರದಲ್ಲಿ ತೋರಿಸುವ ಮೊತ್ತಕ್ಕಿಂತ ಹೆಚ್ಚು ಮೌಲ್ಯದ ಆಸ್ತಿ ಅಥವಾ ಇತರ ಖಾತರಿಯನ್ನು ಬ್ಯಾಂಕ್‌ಗೆ ಸಲ್ಲಿಸಬೇಕು. ಇಂತಹ ಖಾತರಿ ಪತ್ರಗಳನ್ನು (Letter Of Undertaking - LOU) ಅಂತರ ಬ್ಯಾಂಕ್ ದೂರಸಂಪರ್ಕ ವ್ಯವಸ್ಥೆಯಾಗಿರುವ 'ಸ್ವಿಫ್ಟ್' (SWIFT) ಮೂಲಕ ರವಾನಿಸಲಾಗುತ್ತದೆ.

ಜನವರಿ ೧೬ರಂದು ನೀರವ್ ಮೋದಿಯ ಮಾತು ಕಂಪನಿಗಳಿಗೆ ಇಂತಹ ಖಾತರಿ ಪತ್ರಗಳನ್ನು ನೀಡಲಾಗಿತ್ತು ಎಂಬ ಅಂಶ ಬೆಳಕಿಗೆ ಬಂದಿತು ಎಂದು ಸಿಬಿಐನ ಎಫ್‌ಐಆರ್ ತಿಳಿಸುತ್ತದೆ. ಈ ಕಂಪನಿಗಳು ಆಮದು ಮಾಡಿಕೊಂಡಿದ್ದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಬ್ಯಾಂಕ್‌ಗೆ ಸಲ್ಲಿಸಿ, ವಿದೇಶಿ ಕಂಪನಿಗಳಿಗೆ ನೀಡುವುದಕ್ಕೆ ಖಾತರಿ ಪತ್ರ ಕೊಡಬೇಕೆಂದು ಕೇಳಿಕೊಂಡಿದ್ದವು ಎಂದು ಬ್ಯಾಂಕ್ ಅಧಿಕಾರಿಗಳು ತಮ್ಮ ದೂರಿನಲ್ಲಿ ದಾಖಲಿಸಿದ್ದಾರೆ. ಬ್ಯಾಂಕ್ ಖಾತರಿ ಪತ್ರ ನೀಡಬೇಕಿದ್ದರೇ, ಕಂಪನಿಗಳು ಸೂಕ್ತ ಖಾತರಿಯನ್ನು ನೀಡಬೇಕು ಎಂದು ತಿಳಿಸಿತ್ತು. ಕಂಪನಿಗಳು ಹಿಂದಿನ ಸಂದರ್ಭದಲ್ಲಿ ಯಾವುದೇ ಖಾತರಿಯನ್ನು ನೀಡದೆ ಈ ಸವಲತ್ತನ್ನು ಪಡೆಯಲಾಗಿತ್ತು ಎಂಬ ಮಾಹಿತಿಯನ್ನು ನೀಡಿದವು. ಆದರೆ ಈ ವಿಷಯಕ್ಕೆ ಸಂಬಂಧಿಸಿದಂತೆ ಬ್ಯಾಂಕ್ ಬಳಿ ಯಾವುದೇ ದಾಖಲೆಗಳು ಇರಲಿಲ್ಲ!

ಗೋಕುಲ್‌ನಾಥ್ ಶೆಟ್ಟಿ ಎಂಬ ನಿವೃತ್ತ ಅಧಿಕಾರಿ ಹಾಗೂ ಆತನ ಸಹೋದ್ಯೋಗಿ ಎಂ. ಎಚ್. ಖರಾತ್ ನಿಯಮಗಳನ್ನು ಗಾಳಿಗೆ ತೂರಿ ಖಾತರಿ ಪತ್ರಗಳನ್ನು ಕಂಪನಿಗಳಿಗೆ ರವಾನಿಸಿದ್ದರು. ಈ ಅಕ್ರಮವನ್ನು ಮುಚ್ಚಿಡಲು ಅವರು ಬ್ಯಾಂಕ್‌ನ ಕೋರ್ ಬ್ಯಾಂಕಿಂಗ್ ಕಂಪ್ಯೂಟರ್ ವ್ಯವಸ್ಥೆಯಲ್ಲಿ ಇದಕ್ಕೆ ಸಂಬಂಧಿಸಿದ ವಹಿವಾಟುಗಳನ್ನು ನಮೂದಿಸಿಯೇ ಇರಲಿಲ್ಲ. ಆದುದರಿಂದ ಈ ಹಗರಣ ಗೌಪ್ಯವಾಗಿಯೇ ಇತ್ತು ಎಂಬುದಾಗಿ ತಿಳಿದುಬಂದಿದೆ.

ಆದರೆ ಪ್ರತಿ ಬ್ಯಾಂಕಿನಲ್ಲಿ ಆಂತರಿಕ, ಬಾಹ್ಯ ಮತ್ತು ಆರ್.ಬಿ.ಐ. ವತಿಯಿಂದ ಲೆಕ್ಕ ಪರಿಶೋಧನೆಗಳು ಜರುಗುತ್ತವೆ. ಹೀಗಿರಬೇಕಾದರೇ ಈ ಹಗರಣ ಬೆಳಕಿಗೆ ಬರದೆ ಇದ್ದುದರ ಹಿಂದೆ ದೊಡ್ಡ ಮಟ್ಟದ ಕೈವಾಡ ಇರಬಹುದಾದ ಸಾಧ್ಯತೆಗಳಿವೆ.

ಹೀಗೆ ವಂಚನೆ ಎಸಗಿರುವ ನೀರವ್ ಮೋದಿ ಸಾಮಾನ್ಯ ಕುಳವಲ್ಲ. ದೆಹಲಿ, ಮುಂಬೈ, ನ್ಯೂಯಾರ್ಕ್, ಲಂಡನ್, ಹಾಂಕಾಂಗ್, ಮಕಾವೊದಲ್ಲಿ ಈತನ ಕಂಪನಿಗಳು ವಹಿವಾಟುಗಳನ್ನು ನಡೆಸುತ್ತಿವೆ. ಈತ ೨೦೧೫ರಲ್ಲಿ ನ್ಯೂಯಾರ್ಕ್‌ನ ಮ್ಯಾಡಿಸನ್ ಅವೆನ್ಯೂದಲ್ಲಿ ಫೈರ್‌ಸ್ಟಾರ್ ಡೈಮಂಡ್ ಮಳಿಗೆಯನ್ನು ತೆರೆದ. ಇದರ ಉದ್ಘಾಟನೆಯಲ್ಲಿ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಭಾಗವಹಿಸಿದ್ದ. ಹಾಲಿವುಡ್ ಮತ್ತು ಬಾಲಿವುಡ್‌ನ ಕೆಲವು ಖ್ಯಾತ ನಟಿಯರು ಈತನ ಕಂಪನಿಗಳ ಗ್ರಾಹಕರು. ಫೋರ್ಬ್ಸ್ ಪ್ರತಿ ವರ್ಷ ಪ್ರಪಂಚದ ಶ್ರೀಮಂತರ ಪಟ್ಟಿಯನ್ನು ಪ್ರಕಟಿಸುತ್ತದೆ. ೨೦೧೭ರ ಪಟ್ಟಿಯಲ್ಲಿ ಈತನದ್ದು ೮೫ನೇ ಸ್ಥಾನ. ಈ ಸ್ಥಾನವನ್ನು ಪಡೆದ ಭಾರತೀಯ ಶ್ರೀಮಂತರ ಪೈಕಿ ಕಿರಿಯ ಎಂಬುದು ಈತನ ಹೆಗ್ಗಳಿಕೆ. ವಿಶ್ವದಲ್ಲಿನ ಶ್ರೀಮಂತರ ಪೈಕಿ ಈತನದ್ದು ೧೨೩೪ನೇ ಸ್ಥಾನ!

ಅಕ್ರಮ, ವಂಚನೆ ಎಸಗಿ ತನಿಖೆಗೆ ಹೆದರಿ ಪರಾರಿಯಾದವರಲ್ಲಿ ನೀರವ್ ಮೋದಿ ಮೊದಲಿಗನೇನಲ್ಲ. ಹಿಂದೆ ಮದ್ಯ ದೊರೆ ವಿಜಯ ಮಲ್ಯ, ಕ್ರಿಕೆಟ್ ವ್ಯಾಪಾರಿ (!) ಲಲಿತ್ ಮೋದಿ, ಕಾರ್ಪೊರೇಟ್ ಸಲಹೆಗಾರ ದೀಪಕ್ ತಲ್ವಾರ್, ಶಸ್ತ್ರಾಸ್ತ್ರ ದಲ್ಲಾಳಿ ಸಂಜಯ್ ಭಂಡಾರಿ ಸದ್ದಿಲ್ಲದೆ ಕಂಬಿ ಕಿತ್ತಿದ್ದರು. ಮಾಧ್ಯಮಗಳಲ್ಲಿ ವರದಿಯಾದಂತೆ ಮಲ್ಯನಂತೂ ೧೩ ಭರ್ಜರಿ ಸೂಟ್‌ಕೇಸ್‌ಗಳೊಡನೆ ನಿರ್ಗಮಿಸಿದ್ದ. "ಕೋಟೆ ಕೊಳ್ಳೆ ಹೊಡೆದ ಮೇಲೆ ದಿಡ್ಡಿ ಬಾಗಿಲನ್ನು ಹಾಕಿದರು" ಎಂಬ ನಾಣ್ಣುಡಿಯಂತೆ ಅಧಿಕಾರಾರೂಢಸ್ತರು ಇಂತಹ ಸಿರಿವಂತ, ದೇಶದ್ರೋಹಿ ವಂಚಕರ ವಿರುದ್ಧ ಕಠಿಣ ಕ್ರಮಗಳನ್ನು ಜರುಗಿಸಿ, ಅವರನ್ನು ವಾಪಸ್ಸು ಕರೆತರುವುದರಲ್ಲಿ ಸೂಕ್ತ ವ್ಯವಸ್ಥೆ ಮಾಡುವುದಾಗಿ ವೀರಾವೇಶದ ಮಾತುಗಳನ್ನು ಆಡುತ್ತಾರೆ. ಹೆಚ್ಚಿನ ಸಂದರ್ಭಗಳಲ್ಲಿ ಅವು ನಿಜವಾಗದೆ ನೀರಿನ ಮೇಲಿನ ಬರಹಗಳಾಗುತ್ತವೆ!

ಪಿಎನ್‌ಬಿಯ ಈ ಬೃಹತ್ ಮೊತ್ತದ ಹಗರಣಕ್ಕೆ ಸಂಬಂಧಿಸಿದಂತೆ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘದ (AIBEA) ಪ್ರಧಾನ ಕಾರ್ಯದರ್ಶಿ ಸಂಗಾತಿ ಸಿ. ಎಚ್. ವೆಂಕಟಾಚಲಂ "ಈ ಹಗರಣಕ್ಕೆ ಸಂಬಂಧಿಸಿದಂತೆ ಬ್ಯಾಂಕಿನ ಯಾವ ಹಂತದ ಅಧಿಕಾರಿ ವರ್ಗ ಶಾಮೀಲಾಗಿದೆ ಎಂಬುದು ತಿಳಿದುಬಂದಿಲ್ಲ. ಆದರೆ ಬ್ಯಾಂಕಿನ ಮ್ಯಾನೇಜ್‌ಮೆಂಟ್ ೨೦ ಉದ್ಯೋಗಿಗಳನ್ನು ಅಮಾನತ್ತುಗೊಳಿಸಿದೆ ಮತ್ತು ಒಬ್ಬ ಪ್ರಧಾನ ವ್ಯವಸ್ಥಾಪಕನನ್ನು ವರ್ಗ ಮಾಡಿದೆ. ತನಿಖೆ ಮುಗಿಯುವವರೆಗೂ ಬ್ಯಾಂಕಿನ ಚೇರ್‌ಮನ್ ಮತ್ತು ಮ್ಯಾನೇಜಿಂಗ್ ಡೈರೆಕ್ಟರ್, ಎಕ್ಸಿಕ್ಯುಟಿವ್ ಡೈರೆಕ್ಟರ್ ಮತ್ತು ಜನರಲ್ ಮ್ಯಾನೇಜರ್‌ಗಳನ್ನು ಅಧಿಕಾರದ ವ್ಯಾಪ್ತಿಯಿಂದ ಹೊರಗಿಡಬೇಕು. ಹಗರಣದಲ್ಲಿ ಕೈವಾಡವಿರದ ಉನ್ನತ ಹಂತದ ಅಧಿಕಾರಿಗಳನ್ನು ತರುವಾಯ ಪುನರ್ನೇಮಿಸಬಹುದು" ಎಂದು ಆಗ್ರಹಿಸಿದ್ದಾರೆ.

ನಮ್ಮ ದೇಶದ ಬ್ಯಾಂಕ್ ಕ್ಷೇತ್ರದಲ್ಲಿ ಇಂತಹ ವಂಚನೆಯ ಹಗರಣಗಳು ಜರುಗುತ್ತಿರುವ ಸಂದರ್ಭದಲ್ಲೇ ಇನ್ನೊಂದು ಬೃಹತ್ ಪಿಡುಗು ಈ ಕ್ಷೇತ್ರವನ್ನು ಬಾಧಿಸುತ್ತಿದೆ. ಅದೇ ವಸೂಲಾಗದ ಸಾಲಗಳು. ಬ್ಯಾಂಕ್ ಪರಿಭಾಷೆಯಲ್ಲಿ ಈ ಸಾಲಗಳನ್ನು 'ಅನುತ್ಪಾದಕ ಆಸ್ತಿ' (ನಾನ್ ಪರ್ಫಾರ್ಮಿಂಗ್ ಅಸೆಟ್ಸ್)ಗಳು ಎಂದು ಕರೆಯಲಾಗುತ್ತದೆ. ಇದರ ಒಟ್ಟು ಮೊತ್ತ ರೂ. ೧೦ ಲಕ್ಷ ಕೋಟಿಗಿಂತಲೂ ಮಿಗಿಲು. ಈ ನಿಟ್ಟಿನಲ್ಲಿ ಉದ್ದೇಶಪೂರ್ವಕವಾಗಿ ಸುಸ್ತಿದಾರರಾಗಿರುವವರ ವಿರುದ್ಧ ಕಠಿಣ ಕ್ರಮಗಳನ್ನು ಜರುಗಿಸಬೇಕೆಂದು (AIBEA) ಅನೇಕ ರಾಷ್ಟ್ರವ್ಯಾಪಿ ಹೋರಾಟಗಳನ್ನು ಹೂಡುತ್ತ ಬಂದಿದೆ. ಆದರೆ ಆಳುವ ಸರ್ಕಾರಗಳಿಗೆ ಅದು ಯುಪಿಎ ಇರಲಿ ಅಥವಾ ಎನ್‌ಡಿಎ ಇರಲಿ, ಈ ವಿಷಯದಲ್ಲಿ ಕರಾರುವಾಕ್ಕಾದ ತೀವ್ರ ಕ್ರಮಗಳನ್ನು ಜರುಗಿಸುವ ಇಚ್ಛಾಶಕ್ತಿ ಇಲ್ಲ! ಬಿಲಗಳು ದೊಡ್ಡವಾಗುತ್ತಿವೆ! ಹೆಗ್ಗಣಗಳು ಕೊಬ್ಬುತ್ತಿವೆ....

ಪಿಎನ್‌ಬಿನ ಈ ಮಹಾವಂಚನೆಯ ಹಗರಣವನ್ನು ನೆಪ ಮಾಡಿಕೊಂಡು ಅಖಿಲ ಭಾರತ ವಾಣಿಜ್ಯೋದ್ಯಮಿಗಳ ಸಂಸ್ಥೆ ಅಸೋಸಿಯೇಷನ್ ಮತ್ತು ಕೇಂದ್ರ ಸರ್ಕಾರದ ಮುಖ್ಯ ಆರ್ಥಿಕ ಸಲಹೆಗಾರ ಶ್ರೀ ಅರವಿಂದ್ ಸುಬ್ರಮಣಿಯನ್ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಖಾಸಗೀಕರಿಸಬೇಕೆಂಬ ನಿಲುವಿಗೆ ಒತ್ತಾಸೆಯನ್ನು ನೀಡಿದೆ/ನೀಡಿದ್ದಾರೆ. ಆದರೆ ಖಾಸಗಿ ಕ್ಷೇತ್ರದ ಕೆಲವು ಕಪ್ತಾನುಗಳೇ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಲೂಟಿ ಮಾಡುತ್ತಿದ್ದಾರೆ. ಇಂತಹವರಿಗೆ ಜೊತೆ ರಾಜಕಾರಣಿಗಳ ಶ್ರೀರಕ್ಷೆ ಇರುತ್ತದೆ. ಬ್ಯಾಂಕುಗಳ ಕೆಲವು ಭ್ರಷ್ಟ ಉನ್ನತ ಅಧಿಕಾರಿಗಳು ಇಂತಹ ಕಾಳಕಾರ್ಯಗಳಲ್ಲಿ ತೊಡಗಿರುತ್ತಾರೆ. "ಗೀವ್ ದಿ ಡಾಗ್ ಎ ನೇಮ್ ಆ್ಯಂಡ್ ಹ್ಯಾಂಗ್ ಇಟ್" ಎಂಬ ಆಂಗ್ಲ ಗಾದೆಯನ್ನು ನೆನಪಿಸುತ್ತದೆ. ಸಾರ್ವಜನಿಕ ಬ್ಯಾಂಕುಗಳನ್ನು ಖಾಸಗೀಕರಿಸಬೇಕೆಂಬ ನಿಲುವು/ಕೂಗು ಖಾಸಗಿ ಬ್ಯಾಂಕುಗಳ ಅವ್ಯವಹಾರಗಳು ಮತ್ತು ಅವುಗಳ ಮುಚ್ಚುವಿಕೆ ಕೂಡ ಬ್ಯಾಂಕ್ ರಾಷ್ಟ್ರೀಕರಣದ ಹಿಂದಿನ ಒಂದು ಪ್ರಮುಖ ಉದ್ದೇಶವಾಗಿತ್ತು ಎಂಬ ಅಂಶವನ್ನು ಮರೆಯಬಾರದು.

ಬ್ಯಾಂಕ್ ಕ್ಷೇತ್ರದಲ್ಲಿ ಪಸರಿಸುತ್ತಿರುವ ಇಂತಹ ಅರ್ಬುದಗಳನ್ನು ನಿವಾರಿಸುವುದರಲ್ಲಿ ಬ್ಯಾಂಕ್ ಉದ್ಯೋಗಿಗಳು ಅಧಿಕಾರಿಗಳ ಹೋರಾಟಗಳ ಜೊತೆ ಸಾರ್ವಜನಿಕರು ತಮ್ಮ ದೇಶದ ಹಿತದಲ್ಲಿ ಕೈ ಜೋಡಿಸಬೇಕು. ಇಂಥ ಅವ್ಯವಹಾರಗಳನ್ನು ಆರ್ಥಿಕ ಭಯೋತ್ಪಾದನೆಗಳೆಂದೇ ಪರಿಗಣಿಸಿ, ಇದರ ಹಿಂದಿರುವ ಎಲ್ಲ ದುಷ್ಟಶಕ್ತಿಗಳನ್ನು ದಮನಗೊಳಿಸುವತ್ತ ದೇಶದ ಜನತೆ ಗಂಭೀರವಾಗಿ ಚಿಂತಿಸಬೇಕು.

**ಮ. ಶ್ರೀ. ಮುರಳಿ ಕೃಷ್ಣ**
೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ಬೆಂಗಳೂರು – ೫೬೦ ೦೬೧

# ವನವಿಹಾರಿ ಬ. ನ. ಸುಂದರರಾಯರು

**ಡಾ॥ ಎಚ್. ಎಸ್. ಗೋಪಾಲ ರಾವ್**

ಈಗ ಕಾಂಕ್ರೀಟ್ ಕಾಡಿನಂತಾಗಿರುವ ಐಟಿ ಮತ್ತು ಬಿಟಿ ವಲಯದಲ್ಲಿ ಸಿಲಿಕಾನ್ ಸಿಟಿ ಎಂದು ಹೆಸರಾಗಿರುವ ಬೆಂಗಳೂರು ಮಹಾನಗರ, ಹಿಂದೆ ಕೇವಲ ಒಂದು ನಗರವಾಗಿದ್ದಾಗ, ಇದರ ಸಸ್ಯಸಂಪತ್ತು ಇಲ್ಲಿನ ಎಲ್ಲ ನಿವಾಸಿಗಳಿಗೂ ಬಹಳ ಪ್ರಿಯವಾಗಿದ್ದ ವಿಚಾರ ಕಳೆದ ಶತಮಾನದ ಐದು ಮತ್ತು ಆರನೆಯ ದಶಕಗಳ ಬೆಂಗಳೂರನ್ನು ಕಂಡವರಿಗಿದೆ. ಇದು ಪಿಂಚಣಿದಾರರ ಸ್ವರ್ಗ ಎಂಬ ಹೆಸರನ್ನೂ ಪಡೆದಿತ್ತು. ಈಗ ಅದು ವಿಧವೆಯೊಬ್ಬಳು ತನ್ನ ತುಂಬುತುರುಬನ್ನು ನೆನಪು ಮಾಡಿಕೊಂಡಂತಾಗುತ್ತದೆ. ವೃಕ್ಷಸಂಹಾರದಲ್ಲಿ ನಿರತರಾಗಿರುವ ವೃಕ್ಷಾಸುರರಿಗೆ ಪ್ರಕೃತಿಯ ಕೃಪೆಯ ಬದಲಿಗೆ ತಂತ್ರಜ್ಞಾನದ ಮೋಹಿನೀಭಸ್ಮಾಸುರನ ಕೃಪೆ ಬೇಕಾಗಿದೆ. ಇದು ವ್ಯವಹಾರ ಕೇಳಿದ ವರ ಮತ್ತು ಅದನ್ನು ನೀಡಲು ಅವಕಾಶವಿರುವ ಎಲ್ಲರೂ ಯಾವುದೇ ಎಗ್ಗಿಲ್ಲದೆ ವರ ನೀಡಲು ಸಿದ್ಧರಾಗಿದ್ದಾರೆ. ಈ ಬೆಂಗಳೂರನ್ನು ಸ್ಥಾಪಿಸಿದ ಯಲಹಂಕ ನಾಡಪ್ರಭು ಕೆಂಪೇಗೌಡರಿಗೆ ಇದು ಕೃಷಿಕರ ಮತ್ತು ಗ್ರಾಮೀಣ ಕುಶಲಕರ್ಮಿಗಳ ನಗರವಾಗಬೇಕು ಮತ್ತು ಇಲ್ಲಿ ಯಾವುದೇ ಸ್ವರೂಪದ ಮಾರುಕಟ್ಟೆಗೂ ಯಾವುದೇ ರೀತಿಯ ಕೊರತೆ ಆಗಬಾರದು ಎಂಬ ದೂರದೃಷ್ಟಿ ಇತ್ತು. ಅದಕ್ಕೆಂದೇ ಅಂತಹ ಒಂದು ಜನವಸತಿಯ ಊರನ್ನು ನಿರ್ಮಿಸಿದರು. ಬಹುಶಃ ಅದಕ್ಕಾಗಿ ಅವರು ಕಾಡನ್ನು ಕಡಿದ ಸುಳಿವುಗಳಿಲ್ಲ. ಈಗ ಅದೇ ಊರಿನ ವಿಸ್ತರಣೆಗಾಗಿ ನಾವೇ ನೆಟ್ಟು, ಪೋಷಿಸಿ, ಬೆಳೆಸಿದ ಮರಗಳಿರಲಿ ಹೂವಿನ ಗಿಡ ಬಳ್ಳಿಗಳನ್ನೂ ಬುಡಸಮೇತ ಕಿತ್ತು ನೆಲವನ್ನು ಹಸನು ಮಾಡುವ ಕಾರ್ಯದಲ್ಲಿ ನಾಗರಿಕರು ಎನಿಸಿ ಕೊಂಡವರೆಲ್ಲರೂ ನಿರತರಾಗಿದ್ದೇವೆ. ಈ ವಿಷಯದಲ್ಲಿ ಈಗಾಗಲೇ ಪ್ರಕೃತಿಗೆ ಸಿಟ್ಟು ಬಂದು, ಅದರ ಫಲಿತಗಳನ್ನು ಅನುಭವಿಸುತ್ತಿದ್ದೇವೆ. ಇನ್ನುಳಿದಿರುವುದು ಈ ಸಂಹಾರಕ್ಕೆ ಪೂರ್ಣಾಹುತಿ ನೀಡುವ ಮಹತ್ಕಾರ್ಯ ಮಾತ್ರ ಎಂದು ವ್ಯಂಗ್ಯವಾಡದೆ ಸಾಧ್ಯವಿಲ್ಲ. ಇಂತಹ ಬೆಂಗಳೂರಿನ ಇತಿಹಾಸವನ್ನು ಕನ್ನಡಿಗರಿಗೆ, ಆ ಹೊತ್ತಿಗೆ ಸಮಗ್ರ ಎನ್ನಬಹುದಾದ ರೀತಿಯಲ್ಲಿ ಮುಟ್ಟಿಸಿದವರು ಬ. ನ. ಸುಂದರರಾಯರು. ಇವರನ್ನು ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನಾ ಕೇಂದ್ರದಲ್ಲಿ ಹಲವಾರು ಬಾರಿ ಕಂಡಿದ್ದೇನೆ ಮತ್ತು ಇವರೊಡನೆ ಮಾತನಾಡಿದ್ದೇನೆ. ಬೆಂಗಳೂರಿಗೆ ಸಂಬಂಧಿಸಿದಂತೆ ಅವರು ಸಂಗ್ರಹಿಸುತ್ತಿದ್ದ ಮಾಹಿತಿಗಳು, ಅದಕ್ಕಾಗಿ ಅವರು ಪಡುತ್ತಿದ್ದ ಶ್ರಮ, ಮಾಹಿತಿ ನೀಡುವವರನ್ನು, ದಾಖಲೆಗಳನ್ನು ಇಟ್ಟುಕೊಂಡವರನ್ನು ಸಂಪರ್ಕಿಸಲು ಪಡುತ್ತಿದ್ದ ಶ್ರಮ ಮತ್ತು ಸಾಹಸ ಇತ್ಯಾದಿಗಳನ್ನು ನಾವು ಕೆಲವು ಗೆಳೆಯರು ಕೇಳಿ ಸೋಜಿಗಪಡುತ್ತಿದ್ದೆವು. ಆ ಹೊತ್ತಿಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಗಳು ಆರಂಭವಾಗಿದ್ದವು. ನಮಗೆ ಶಾಸನಶಾಸ್ತ್ರ, ವಿಶೇಷವಾಗಿ ಲಿಪಿಶಾಸ್ತ್ರವನ್ನು ಕಲಿಸಿದವರು ಶ್ರೀ ಎ. ಎಂ. ಅಣ್ಣಿಗೇರಿ ಎಂಬ ಹಿರಿಯರು. ಅವರು ಧಾರವಾಡದ, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ಶಾಸನತಜ್ಞ ಹುದ್ದೆಯಿಂದ ನಿವೃತ್ತರಾಗಿದ್ದರು. ಅವರನ್ನು ತಿ. ತಾ. ಶರ್ಮ ಅವರಂತಹ ಹಿರಿಯರ ಸಲಹೆಯಂತೆ, ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನಾ ವಿಭಾಗಕ್ಕೆ ಬರಮಾಡಿ ಕೊಂಡಿದ್ದರು. ಅವರ ಕೆಲಸಗಳಲ್ಲಿ ಶಾಸನಶಾಸ್ತ್ರ ಬೋಧನೆಯೂ ಸೇರಿತ್ತು. ಅವರ ಬಗ್ಗೆ ತಿಳಿದಿದ್ದ ಶ್ರೀ ಬ. ನ. ಸುಂದರರಾಯರು ಅವರನ್ನು ಕಾಣಲು ಪರಿಷತ್ತಿಗೆ ಬರುತ್ತಿದ್ದರು. ಆಗ ನಾನು ಶಾಸನಶಾಸ್ತ್ರ ತರಗತಿಯ (ಮೊದಲ ತಂಡ) ವಿದ್ಯಾರ್ಥಿ ಯಾಗಿದ್ದ ಕಾರಣ ಸುಂದರರಾಯರನ್ನು ಅನೇಕ ಬಾರಿ ಕಂಡಿದ್ದೆ ಮತ್ತು ಕುತೂಹಲದಿಂದ ಅವರನ್ನು ಗಮನಿಸುತ್ತಿದ್ದೆ. ಸುಂದರರಾಯರ ಅನುಪಸ್ಥಿತಿಯಲ್ಲಿ ಅಣ್ಣಿಗೇರಿ ಮತ್ತು ಶೇಷಶಾಸ್ತ್ರಿ ಅವರೂ ಸೇರಿದಂತೆ, ಬೆಂಗಳೂರಿನ ಬಗ್ಗೆ ಅವರಿಗಿರುವ ಆಸಕ್ತಿಯನ್ನು ಕುರಿತಾಗಿ ಮಾತನಾಡಿಕೊಳ್ಳುತ್ತಿದ್ದೆವು. ಆ ನಂತರದ ದಿನಗಳಲ್ಲಿ ವೃತ್ತಿಯ ಕಾರಣದಿಂದ, ಒಂದೆರಡು ವರ್ಷಗಳ ಕಾಲ ನಾನು ಕೆ.ಜಿ.ಎಫ್.ಗೆ ಹೋದೆ. ಆಗ ಮಾತ್ರ ಸುಂದರರಾಯರ ಸಂಪರ್ಕ ಸ್ವಲ್ಪಮಟ್ಟಿಗೆ ತಪ್ಪಿತ್ತು. ಪುನಃ ನಾನು ಬೆಂಗಳೂರಿಗೆ ಬರುವ ಹೊತ್ತಿಗೆ ಅಣ್ಣಿಗೇರಿಯವರು ಧಾರವಾಡಕ್ಕೆ ಹಿಂದಿರುಗಿದ್ದರು. ಪರಿಷತ್ತಿನ ಸಂಶೋಧನಾ ವಿಭಾಗದಲ್ಲಿ ದೇವರಕೊಂಡಾ ರೆಡ್ಡಿ, ಶೇಷಶಾಸ್ತ್ರಿ ಮತ್ತಿನ್ನೂ ಹಲವು ಶಾಸನಾಸಕ್ತ ಗೆಳೆಯರು ಸಂಜೆಯ ವೇಳೆ ಚರ್ಚೆಗಳಲ್ಲಿ ನಿರತರಾಗಿರುತ್ತಿದ್ದೆವು. ಆಗಲೂ ಸುಂದರರಾಯರನ್ನು ಆಗಾಗ್ಗೆ ಕಾಣುತ್ತಿದ್ದೆ. ಅಣ್ಣಿಗೇರಿ ಅವರು ಬೆಂಗಳೂರಿನಲ್ಲಿ ಇದ್ದಾಗಲೇ ಯಾವುದೋ ಕಾರಣದಿಂದ ಅವರೊಟ್ಟಿಗೆ ಬನಶಂಕರಿ ಬಡಾವಣೆಯಲ್ಲಿದ್ದ (ಜಯನಗರ) ಸುಂದರರಾಯರ ಮನೆಗೆ ಹೋಗಿದ್ದ ಮಸಕುಮಸಕಾದ ನೆನಪಿದೆ.

ಹೀಗೆ ಆಗಾಗ್ಗೆ ಕಾಣುತ್ತಿದ್ದ ಮತ್ತು ಕುತೂಹಲ ಕೆರಳಿಸುತ್ತಿದ್ದ ಸುಂದರರಾಯರು ಒಮ್ಮೆ ಬೆಂಗಳೂರಿನ ಇತಿಹಾಸ ಎಂಬ ಬೃಹತ್ ಕೃತಿಯ ಮೂಲಕ ನನ್ನ ಕುತೂಹಲವನ್ನು ಮತ್ತಷ್ಟು ಹೆಚ್ಚಿಸಿದರು. ನಮಗೆ ಬೆಂದಕಾಳೂರಿನ ಕಥೆ ಕೇಳಿ ಅಭ್ಯಾಸವಾಗಿತ್ತು. ಮೈಸೂರು ರಾಜ್ಯದ ಪುರಾತತ್ತ್ವ ಇಲಾಖೆಯ ೧೯೧೫ನೆಯ ಸಾಲಿನ ವಾರ್ಷಿಕ ವರದಿಯಲ್ಲಿ ಪ್ರಕಟವಾಗಿದ್ದ ಬೆಂಗಳೂರಿನ ಉಲ್ಲೇಖವಿರುವ, ಕ್ರಿ. ಶ. ೯ನೆಯ ಶತಮಾನದ ಬೇಗೂರಿನ ಒಂದು ಶಾಸನದತ್ತ ಆಸಕ್ತರ ಗಮನ



ಸೆಳೆದವರು ಸುಂದರರಾಯರು. ಸುಂದರರಾಯರ ಬೆಂಗಳೂರು ದರ್ಶನ ಪ್ರಕಟವಾಗುವುದಕ್ಕೆ ಮೊದಲು, ಬೆಂಗಳೂರನ್ನು ಕುರಿತು ಎಸ್. ಕೆ. ನರಸಿಂಹಯ್ಯ ಅವರ The Founder of Bangalore ಮತ್ತು ಎಂ. ಫಜ್ಲುಲ್ ಹಸನ್ ಅವರ Bangalore through the Centuries ಎಂಬ ಇಂಗ್ಲಿಷ್ ಕೃತಿಗಳು ಪ್ರಕಟವಾಗಿದ್ದವು. ಫಜ್ಲುಲ್ ಹಸನ್ ಅವರು ತಮ್ಮ ಕೃತಿಯಲ್ಲಿ ೧೯೧೫ರ ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟವಾಗಿದ್ದ ಬೆಂಗಳೂರಿನ ಉಲ್ಲೇಖವಿರುವ ಬೇಗೂರಿನ ಕ್ರಿ. ಶ. ಸುಮಾರು ೯ನೆಯ ಶತಮಾನದ ಶಾಸನದ ವಿಷಯವನ್ನು ಪ್ರಸ್ತಾಪಿಸಿದ್ದರು. ಆದರೆ ಆ ಎರಡೂ ಪುಸ್ತಕಗಳು ಇಂಗ್ಲಿಷ್ ಭಾಷೆಯಲ್ಲಿ ಇದ್ದುದರಿಂದ ವಿದ್ವಾಂಸರ ಗಮನಕ್ಕೆ ಬಂದಿದ್ದುವಾದರೂ, ಕನ್ನಡ ಓದುಗರ ಗಮನಕ್ಕೆ ಹೆಚ್ಚಾಗಿ ಬಂದಿರಲಿಲ್ಲ. ಈ ಕೊರತೆಯನ್ನು ಸುಂದರರಾಯರು ನಿವಾರಿಸಿದರು. ಈಗ ಬೆಂಗಳೂರಿನ ಉದಯಭಾನು ಕಲಾಸಂಘವು ತನ್ನ ಸುವರ್ಣ ಮಹೋತ್ಸವದ ನೆನಪಿಗಾಗಿ ಮೂರು ಭಾಗಗಳಲ್ಲಿ ಪ್ರಕಟಿಸಿರುವ (ಸಂ : ಪ್ರೊ॥ ಎಂ. ಎಚ್. ಕೃಷ್ಣಯ್ಯ ಮತ್ತು ಡಾ॥ ವಿಜಯಾ) ಬೆಂಗಳೂರು ದರ್ಶನ ಬೃಹತ್ ಸಂಪುಟವು ಬೆಂಗಳೂರಿನ ವಿಸ್ತೃತ ದರ್ಶನವನ್ನು ಮಾಡಿಸುವುದಾದರೂ, ಅದು ಸುಂದರರಾಯರ ಕೃತಿಯನ್ನು ಮೂಲೆಗುಂಪು ಮಾಡಿಲ್ಲ. ಮೂರು ಭಾಗಗಳಲ್ಲಿ ಐವತ್ತು ಅಧ್ಯಾಯಗಳ ಪರಿಜಿನಲ್ಲಿ ದಿವಾನ್ ಎನ್. ಮಾಧವರಾಯರ ಆಡಳಿತದ ಅವಧಿಯವರೆಗೆ ಮತ್ತು ಮುಂದುವರಿದಂತೆ ಪ್ರತ್ಯೇಕ ಅಧ್ಯಾಯವೊಂದರಲ್ಲಿ ಬೆಂಗಳೂರಿನ ಕೆಲವು ಐತಿಹಾಸಿಕ ಕ್ಷೇತ್ರಗಳ ವಿವರಣೆಯೊಂದಿಗೆ, ಬೆಂಗಳೂರಿನ ಇತಿಹಾಸ ಕೃತಿಯನ್ನು ಏಕಾಂಗಿಯಾಗಿ ಪ್ರಕಟಿಸಿರುವ ಕೆಲಸ ಅನನ್ಯ ಎನಿಸುತ್ತದೆ.

ಮೊದಲನೆಯ ಭಾಗದಲ್ಲಿ ಬೆಂಗಳೂರು ಹೆಸರನ್ನು ಕುರಿತ ಮಾಹಿತಿಯೊಂದಿಗೆ ಆರಂಭಿಸಿ ಹೈದರಾಲಿಯ ಅಭ್ಯುದಯದವರೆಗೆ, ಎರಡನೆಯ ಭಾಗದಲ್ಲಿ ಟೀಪುಸುಲ್ತಾನನಿಂದ ಆರಂಭಿಸಿ ಚೀಫ್ ಕಮಿಷನರುಗಳ ಆಡಳಿತದವರೆಗೆ ಮತ್ತು ಮೂರನೆಯ ಭಾಗದಲ್ಲಿ ದಿವಾನ್ ರಂಗಾಚಾರ್ಲು ಅವರ ಆಡಳಿತದ ಕಾಲದಿಂದ ಆರಂಭಿಸಿ ನ್ಯಾಪತಿ ಮಾಧವರಾಯರ ಆಡಳಿತಾವಧಿಯನ್ನು ದಾಟಿ, ಬೆಂಗಳೂರಿನ ಕೆಲವು ಮಹತ್ವದ ಐತಿಹಾಸಿಕ ಕೊಡುಗೆಗಳನ್ನು ದಾಖಲಿಸಿ, ಕೃತಿಗೆ ಸಮಗ್ರತೆಯನ್ನು ತಂದುಕೊಡುವ ನಿಟ್ಟಿನಲ್ಲಿ ಸುಂದರರಾಯರು ಶ್ರಮಿಸಿದ್ದಾರೆ. ಈ ಸಾಹಸ ಕಾರ್ಯದಲ್ಲಿ ಲಭ್ಯವಿದ್ದ ಎಲ್ಲ ಐತಿಹಾಸಿಕ ಆಕರಗಳನ್ನೂ ಸಾರ್ಥಕವಾಗಿ ಬಳಸಿಕೊಂಡು, ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ ಅರ್ಥಪೂರ್ಣವಾಗಿ ಬರಹರೂಪದಲ್ಲಿ ಸಂಗ್ರಹಿಸಿರುವುದಲ್ಲದೆ ಸ್ವಂತವಾಗಿ ಪ್ರಕಟಣ ಕಾರ್ಯವನ್ನೂ ಮಾಡಿರುವ ಸಾಹಸಿ ಬ. ನ. ಸುಂದರರಾಯರು ಜೀವಿಸಿದ್ದಿದ್ದರೆ ಮಾರ್ಚ್ ೨೬ರಂದು ಅವರ ನೂರೊಂದನೆಯ ಹುಟ್ಟುಹಬ್ಬವನ್ನು ಆಚರಿಸುವ ಅವಕಾಶವಿರುತ್ತಿತ್ತು.

೨೬.೩.೧೯೧೮ರಂದು ಬೆಂಗಳೂರಿಗೆ ಸಮೀಪದ (ಈಗ ಹೊಂದಿಕೊಂಡಿದೆ) ದಕ್ಷಿಣ ಪಿನಾಕಿನಿ ನದಿಯ ಉಪನದಿಯೊಂದರ ದಂಡೆಯ ಮೇಲಿರುವ ವರ್ತೂರಿನಲ್ಲಿ ಸುಂದರರಾಯರ ಜನನವಾಯಿತು. ಇವರ ಪೂರ್ವಿಕರು ವಿಜಯನಗರದ ಕಡೆಯಿಂದ ಈ ಭಾಗಕ್ಕೆ ಬಂದು ನೆಲೆಸಿದವರು. ಆ ಹೊತ್ತಿಗೆ ಆ ಪ್ರದೇಶ ಯಲಹಂಕದ ಕೆಂಪೇಗೌಡರ ಆಳ್ವಿಕೆಗೆ ಸೇರಿತ್ತು. ಸುಂದರರಾಯರ ವಂಶಸ್ಥರಾದ ತಮ್ಮರಸಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದರು. ಅದೇ ಕಾರಣದಿಂದ ಅವರಿಗೆ ಇನಾಮಿತಿ ಜಮೀನು ದೊರೆತಿತ್ತು. ಕೋಟೆಯ ಒಳಗೇ ಈ ಕುಟುಂಬದ ಮನೆಯೂ ಇತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಅಧಿಕಾರ ಕಳೆದುಕೊಂಡ ನಂತರ, ಆರಂಭವಾದ ಬ್ರಿಟಿಷ್ ಸರ್ಕಾರ ಮೈಸೂರು ಸಂಸ್ಥಾನದ ಗ್ರಾಮೀಣ ಪ್ರದೇಶದಲ್ಲೂ ಶಾಲೆಗಳನ್ನು ಆರಂಭಿಸಿತು. ಆಗ ವರ್ತೂರಿಗೂ ಒಂದು ಶಾಲೆಯ ಪ್ರವೇಶವಾಯಿತು. ಸುಂದರರಾಯರ ತಾತ ರಾಮಣ್ಣನವರು ಸಂಸ್ಕೃತ, ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪಂಡಿತರಾಗಿದ್ದರು. ಇವರಂತೆಯೇ ಮೂರೂ ಭಾಷೆಗಳಲ್ಲಿ ಪರಿಣತಿ ಪಡೆದಿದ್ದ ರಾಮಣ್ಣ ಎಂಬುವವರು ಆಗ ಅಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ಸರ್ಕಾರೀ ವಲಯದಲ್ಲಿ ಪ್ರಭಾವಿಯಾಗಿದ್ದ ಸುಂದರರಾಯರ ಪ್ರಯತ್ನದಿಂದ ಅವರ ಹಿರಿಯ ಮಗ, ಅಂದರೆ ಸುಂದರರಾಯರ ದೊಡ್ಡಪ್ಪನೂ ಶಿಕ್ಷಕನಾಗಿ ನೇಮಕಗೊಂಡಿದ್ದರು. ಕುಟುಂಬದ ಮೂರನೆಯ ಮಗ ನರಸಿಂಹಮೂರ್ತಿ ಕೃಷಿ ಶಿಕ್ಷಣ ಪಡೆದು, ಸರ್ಕಾರದ ಕೃಷಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅವರೇ ಸುಂದರರಾಯರ ತಂದೆ. ತಂದೆಗೆ ವರ್ಗಾವಣೆ ಆದ ಸ್ಥಳಗಳಲ್ಲಿ ಸುಂದರರಾಯರ ಶಿಕ್ಷಣ ಮುಂದುವರಿಯಿತು. ಸುಂದರರಾಯರಿಗೆ ಅಕ್ಷರಾಭ್ಯಾಸವಾದದ್ದು ಚಿಂತಾಮಣಿಯಲ್ಲಿ; ಅವರು ಲೋವರ್ ಸೆಕಂಡರಿ ಪರೀಕ್ಷೆಗಾಗಿ ಓದಿದ್ದು ಮಾಗಡಿಯಲ್ಲಿ. ತಮ್ಮ ಏಳನೆಯ ವರ್ಷದಲ್ಲಿ ತಾಯಿಯನ್ನೂ, ಒಂಭತ್ತನೆಯ ವರ್ಷದಲ್ಲಿ ಅಜ್ಜಿಯನ್ನೂ ಕಳೆದುಕೊಂಡ ಸುಂದರರಾಯರನ್ನು ಪೋಷಿಸಿದವರು ಅವರ ಹಿರಿಯ ಸೋದರತ್ತೆ. ಅವರದು ದೊಡ್ಡ ಅವಿಭಕ್ತ ಕುಟುಂಬವಾಗಿದ್ದ ಕಾರಣದಿಂದ ಸುಂದರರಾಯರಿಗೆ ಚಿಕ್ಕಂದಿನಿಂದಲೇ ಸಹಬಾಳ್ವೆಯ ಜೀವನ ಸಿದ್ಧಿಸಿತ್ತು. ೧೯೩೦ರ ಸುಮಾರಿನಲ್ಲಿ ಮಾಗಡಿಯಲ್ಲಿದ್ದಾಗ ಗಮನಿಸುತ್ತಿದ್ದ ಸ್ವಾತಂತ್ರ್ಯ ಹೋರಾಟದ ಕ್ಷಣಗಳು ಸುಂದರರಾಯರ ಮೇಲೆ ಹೆಚ್ಚಿನ ಪ್ರಭಾವ ಬೀರಿದ್ದವು. ಈ ಎಲ್ಲ ವಿಷಯಗಳನ್ನು ಸುಂದರರಾಯರೇ ತಮಗೆ ೧೯೮೫ರ ಆಗಸ್ಟ್ ತಿಂಗಳು ಹುಟ್ಟೂರಾದ ವರ್ತೂರಿನ ಗಣ್ಯರು ಸೇರಿ ಮಾಡಿದ ಸನ್ಮಾನದ ಸಂದರ್ಭದಲ್ಲಿ ಪ್ರಕಟಿಸಿದ ನನ್ನ ಬಾಲ್ಯ ಮತ್ತು ಜೀವನ ಎಂಬ ಲೇಖನದಲ್ಲಿ ಸ್ಮರಿಸಿಕೊಂಡಿದ್ದಾರೆ.

ಬಾಲ್ಯದ ಬದುಕು ಸುಂದರರಾಯರ ಮೇಲೆ ವಿಶೇಷ ಪ್ರಭಾವ ಬೀರಿತ್ತು. ಅವರನ್ನು ಸ್ವಾತಂತ್ರ್ಯದ ಜೊತೆಗೆ ಇತಿಹಾಸ ಮತ್ತು ಸಾಹಿತ್ಯಗಳೂ ಆಕರ್ಷಿಸಿದ್ದವು. ಈ ಕಾರಣದಿಂದ ಸತತವಾಗಿ ಆ ವಿಷಯಗಳಲ್ಲಿ ಆಸಕ್ತಿಯನ್ನು ಉಳಿಸಿಕೊಂಡು, ಈ ಎಲ್ಲ ಕ್ಷೇತ್ರಗಳಲ್ಲೂ ತಮ್ಮ ಗುರುತನ್ನು ಉಳಿಸಿದ್ದಾರೆ.

ಬಾಲ್ಯದಿಂದಲೂ ಓದು ಮತ್ತು ಬರಹವನ್ನು ವ್ರತದಂತೆ ಸ್ವೀಕರಿಸಿದ್ದ ಸುಂದರರಾಯರು ವೃತ್ತಿಜೀವನದಿಂದ ಬಿಡುವು ದೊರೆತಾಗ ಸಾಧ್ಯವಾದಷ್ಟನ್ನು ಬರೆದಿದ್ದಾರೆ. ಬೆಂಗಳೂರಿನ ಇತಿಹಾಸ ಅವರ ಮೇರು ಕೃತಿಯಾಗಿದೆ. ಇದಲ್ಲದೆ ಕೆಲವು ಪ್ರವಾಸಕಥನಗಳು, ೧೯೭೧ರಲ್ಲಿ ಬಾಂಗ್ಲಾ ದೇಶ ಸ್ವಾತಂತ್ರ್ಯವನ್ನು ಪಡೆದ ಸಂದರ್ಭದಲ್ಲಿ, ಹೋರಾಟದಲ್ಲಿ ಭಾಗವಹಿಸಿದ್ದ ಮಿಲಿಟರಿ ಅಧಿಕಾರಿಗಳನ್ನು ಸಂದರ್ಶಿಸಿ, ಬರೆದಿದ್ದ ಬಾಂಗ್ಲೋದಯ ಎಂಬ ಕೃತಿ ಮೈಸೂರು ಭಾರತದ ಗಣರಾಜ್ಯದೊಡನೆ ವಿಲೀನಗೊಳ್ಳಬೇಕೆಂಬ ಬೇಡಿಕೆಯೊಡನೆ ನಡೆದ ಚಲೋ ಮೈಸೂರು ಚಳವಳಿಯ ಕಥನವಾದ ಕಾದಂಬರಿ, ಕೆಲವು ಸಣ್ಣ ಕಥೆಗಳು, ವ್ಯಕ್ತಿಚಿತ್ರಗಳು, ರೇಡಿಯೋ ರೂಪಕಗಳು ಸುಂದರರಾಯರ ಲೇಖನಿಯಿಂದ ಮೂಡಿಬಂದಿವೆ. ಈಗ ಇವುಗಳೆಲ್ಲವೂ ಲಭ್ಯವಿಲ್ಲ. ಸುಂದರರಾಯರೇ ಮೊದಲ ಬಾರಿಗೆ ೧೯೮೫ರಲ್ಲಿ ಪ್ರಕಟಿಸಿದ ಬೆಂಗಳೂರು ಇತಿಹಾಸ ಪುನರ್ಮುದ್ರಣ ಕಂಡದ್ದು ೨೦೧೧ರಲ್ಲಿ. ಈ ಕೃತಿಗೆ ಬೇಡಿಕೆ ಇಲ್ಲವೆಂದಿಲ್ಲ. ಏಕೆಂದರೆ ಈ ಕೃತಿ ೨೦೧೩ರಲ್ಲಿ ಮೂರನೆಯ ಮುದ್ರಣವನ್ನೂ ಕಂಡಿದೆ.

ಬೆಂಗಳೂರಿನ ಇತಿಹಾಸ ಮೊದಲ ಬಾರಿಗೆ ಪ್ರಕಟವಾದಾಗ ಅದಕ್ಕೆ ಮುನ್ನುಡಿ ಬರೆದ ಡಾ॥ ಸೂರ್ಯನಾಥ ಕಾಮತ್, ಬೆಂಗಳೂರಿನ ಸ್ಥಳನಾಮದ ಕುರಿತು, ಸ್ವೀಕರಿಸಿರುವ ನಿಲುವುಗಳು, ರಾಜ್ಯ ಸರ್ಕಾರದ ಪತ್ರಾಗಾರ ಇಲಾಖೆಯ ದಾಖಲೆಗಳನ್ನು ಬಳಸಿಕೊಂಡಿರುವುದನ್ನು ನೆನಪು ಮಾಡಿಕೊಂಡಿದ್ದಾರೆ. ಒಳ್ಳೆಯ ವಾಗ್ಮಿಯೂ ಆಗಿದ್ದ ಬ. ನ. ಸುಂದರರಾಯರು ಸೆಕ್ರೆಟೇರಿಯಟ್ ಕ್ಲಬ್‌ನಲ್ಲಿ ಬೆಂಗಳೂರಿನ ಇತಿಹಾಸ ಕುರಿತು ಮಾಡಿದ ಸುಮಾರು ೪೦ ಉಪನ್ಯಾಸಗಳೇ ಮುಂದೆ ಪುಸ್ತಕ ರೂಪದಲ್ಲಿ ಮತ್ತಷ್ಟು ವಿವರಗಳೊಡನೆ ಪ್ರಕಟಗೊಂಡಿವೆ.

ಕರ್ನಾಟಕ ಸರ್ಕಾರದ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಲೆಕ್ಕ ತನಿಖಾಧಿಕಾರಿಯಾಗಿದ್ದ ಸುಂದರರಾಯರು ನಿವೃತ್ತರಾದ ನಂತರ ಬೆಂಗಳೂರಿನ ಇತಿಹಾಸ ಕೃತಿ ರಚನೆ ಮಾಡಿದ್ದಾರೆ. ಈಗಲೂ, ಹೊಸ ಆಕರಗಳು ಲಭ್ಯವಾಗುತ್ತಿದ್ದರೂ ಬೇರೆಬೇರೆ ಆಯಾಮಗಳಲ್ಲಿ ಬೆಂಗಳೂರಿಗೆ ಸಂಬಂಧಿಸಿದ ಹಾಗೆ ಅಧ್ಯಯನಗಳು ಆಗುತ್ತಿದ್ದರೂ ಅವೆಲ್ಲವೂ ಸುಂದರರಾಯರ ಕೃತಿಗೆ ಒಂದಲ್ಲ ಒಂದು ರೀತಿ ಕೃತಜ್ಞವಾಗಿವೆ. ಸುಂದರರಾಯರ ಬೆಂಗಳೂರಿನ ಇತಿಹಾಸ ಕೃತಿಯ ಪ್ರಮುಖ ವೈಶಿಷ್ಟ್ಯವೆಂದರೆ, ಅದು ಏಕ ವ್ಯಕ್ತಿಯ ಸಾಹಸ. ವೃತ್ತಿ ಮತ್ತು ಪ್ರವೃತ್ತಿಗಳು ಬೇರೆಯಾದರೂ ಆಸಕ್ತಿಯ ಕಾರಣದಿಂದ ಪ್ರವೃತ್ತಿಗೆ ಗೌರವ ತಂದುಕೊಟ್ಟ ಸುಂದರರಾಯರನ್ನು ಬೆಂಗಳೂರಿನ ಇತಿಹಾಸ ತಿಳಿಯಬೇಕೆನ್ನುವವರು ನೆನೆಯಲೇ ಬೇಕು. ಅವರ ಸಮಗ್ರ ಕೃತಿಗಳನ್ನು ಯಾರಾದರೂ ಪ್ರಕಾಶಕರು ಪ್ರಕಟಮಾಡಿದರೆ, ಅದು ಸುಂದರರಾಯರಿಗೆ ಸಲ್ಲಿಸುವ ಗೌರವವಾಗುತ್ತದೆ. ಅವರನ್ನು ನಾವು ಕಂಡಿದ್ದೆವು ಮತ್ತು ಬಲ್ಲೆವು ಎಂದು ಹೇಳಿಕೊಳ್ಳುವುದೂ ಸಹ ಒಂದು ಗರ್ವದ ಮಾತು.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ.ವೈ.ಡಿ. ೨ನೇ ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು
ಗ್ರಾಮಾಂತರ ಜಿಲ್ಲೆ – ೫೬೨ ೧೨೩



# ಲಿಂಗ ಅಸಮಾನತೆ : ಮಹಿಳೆಯರ ಮುಂದಿನ ಪ್ರಶ್ನೆಗಳು

ಲತಾ ಕೆ. ಇ. ಕಂಚೇನಹಳ್ಳಿ

**ಭಾ**ರತದಲ್ಲಿ ವೈವಿಧ್ಯಮಯ ಜಾತಿ, ವರ್ಗ, ವರ್ಣವ್ಯವಸ್ಥೆಯನ್ನು ಕಾಣುತ್ತೇವೆ. ಇಲ್ಲಿ ಒಂದೊಂದು ಸ್ತರದಲ್ಲಿ ಒಂದೊಂದು ರೀತಿಯ ಭಿನ್ನವಾದ ಸಂಸ್ಕೃತಿಯನ್ನು ಕಾಣುತ್ತೇವೆ. ಆದರೆ ಹೆಣ್ಣಿಗೆ ಎಲ್ಲ ಜಾತಿ, ವರ್ಣ, ವರ್ಗಗಳಲ್ಲಿ ಒಂದೇ ತೆರನಾದ ಅಸಮಾನತೆ ಇರುವುದು ಗತಕಾಲದಿಂದಲೂ ತಿಳಿದಿರುವ ಸಂಗತಿಯೇ ಆಗಿದೆ. ಮಹಿಳೆಯು ಹುಟ್ಟಿದಾಗಿನಿಂದ ಹಿಡಿದು ಕೊನೆಯವರೆಗೂ ಲಿಂಗ ಅಸಮಾನತೆಗೆ ತುತ್ತಾಗದೆ ಉಳಿದವಳಲ್ಲ. ಸಂವಿಧಾನವು ಎಲ್ಲರಿಗೂ ಸಮಾನ ಹಕ್ಕು ಇರಬೇಕೆಂದು ಹೇಳುತ್ತದೆ. ಇದಕ್ಕಾಗಿ ಬಾಬಾಸಾಹೇಬರು ಮಹಿಳೆಯರಿಗಾಗಿಯೇ ಪ್ರತ್ಯೇಕ ಹಿಂದೂ ಕೋಡ್‌ಬಿಲ್ ರೂಪಿಸಿ, ಅದನ್ನು ಅನುಷ್ಠಾನಗೊಳಿಸಲು ಅವಿರತ ಶ್ರಮಿಸಿದರು.

"ಭಾರತದ ಸಂವಿಧಾನದೆದುರು ಸರ್ವರೂ ಸಮಾನರು. ಲಿಂಗದ ಆಧಾರದಲ್ಲಾಗಲಿ ಜಾತಿ ಧರ್ಮಗಳ ಆಧಾರದಲ್ಲಾಗಲಿ ಪಕ್ಷಪಾತ ಮಾಡುವುದನ್ನು ಸಂವಿಧಾನ ನಿಷೇಧಿಸಿದೆ. ಭಾರತದ ಸಂವಿಧಾನ ಪ್ರತಿಯೊಬ್ಬರ ಧಾರ್ಮಿಕ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನ ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ. ಸಂವಿಧಾನದಲ್ಲಿ ಸಮಾನತೆ ಇದ್ದರೂ, ವ್ಯಕ್ತಿ ನಿಯಮಗಳನ್ನು ಧಾರ್ಮಿಕ ನಿಯಮಗಳಿಗನುಸಾರವಾಗಿ ರಚಿಸುವುದರಿಂದ ಮಹಿಳೆಯರು ತಮ್ಮ ಸಾಂವಿಧಾನಿಕ ಹಕ್ಕುಗಳಿಂದ ವಂಚಿತರಾಗುತ್ತಾರೆ. ನ್ಯಾಯಾಧೀಶರೋರ್ವರು ಹಿಂದೂ ವಿಚ್ಛೇದಿತ ಮಹಿಳೆಗೆ ಜೀವನಾಂಶ ನೀಡಬೇಕೆಂದು ತೀರ್ಪು ನೀಡಿದರೆ, ಮುಸ್ಲಿಂ ಮಹಿಳೆಗೆ ಮೂರು ತಿಂಗಳ ಅವಧಿಗೆ ಮಾತ್ರ ಜೀವನಾಂಶ ನೀಡಬೇಕೆಂದು ತೀರ್ಪು ನೀಡಲಾಗುತ್ತದೆ. ಭಾರತ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದ್ದರೂ ಇಂತಹ ವೈರುಧ್ಯಗಳಿಂದಾಗಿ ಈ ಮನ್ನಣೆ ಮಸುಕಾಗಿದೆ. ಸ್ತ್ರೀ-ಪುರುಷರಲ್ಲಿ ಮಾತ್ರವಲ್ಲ, ಈ ದೇಶದ ಸ್ತ್ರೀಯರಲ್ಲೇ ಸಮಾನತೆ ಇಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಮಹಿಳೆಯರೆಲ್ಲರೂ ಜಾತಿ, ಧರ್ಮಗಳ ಬಲೆಯಿಂದ ಹೊರಬಂದು ಒಟ್ಟಾದಾಗ ಸಹೋದರಿ ಭಾವದಿಂದ ಪರಸ್ಪರ ಕೈ ಹಿಡಿದು ಮುನ್ನಡೆದು ಎಲ್ಲ ಅಸಮಾನತೆಗಳ ವಿರುದ್ಧ ಒಕ್ಕೊರಲಿನಲ್ಲಿ ಧ್ವನಿ ಎತ್ತಿದಾಗ ಈ ಪರಿಸ್ಥಿತಿ ಬದಲಾದರೂ



ಆಗಬಹುದು" ಎನ್ನುವುದು ಶ್ರೀಮತಿ ಸಾರಾ ಅಬೂಬಕ್ಕರ್ ಅವರ ಅಭಿಪ್ರಾಯ. ಭಾರತದ ಸಂವಿಧಾನದಲ್ಲಿ ಮಹಿಳೆಗಿರುವ ಸ್ವಾತಂತ್ರ್ಯವನ್ನು ಹೇಳುತ್ತಲೇ ನ್ಯಾಯಾಲಯದ ತೀರ್ಪನ್ನು ಅಥವಾ ಮಹಿಳೆಯರಿಗೆ ಇರುವ ಅಸಮತೋಲನ ನ್ಯಾಯ ವ್ಯವಸ್ಥೆಯ ವಿರುದ್ಧ ಲೇಖಕಿ ಪ್ರಶ್ನೆಯನ್ನು ಎತ್ತುತ್ತಾರೆ.

ಪಿತೃಪ್ರಧಾನ ಸಮಾಜದಲ್ಲಿ ಪುರುಷನು ಮಹಿಳೆಯು ತನ್ನ ಅಧೀನದಲ್ಲಿಯೆ ಇರಬೇಕೆಂದು ಬಯಸುತ್ತಾನೆ. ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಯಾಗಿ ವರ್ಗಾವಣೆಯಾದಾಗಿನಿಂದ ಮಹಿಳೆ ಕೇವಲ ಹೆರುವ ಯಂತ್ರವಾಗಿ ಹಾಗೂ ಅವನ ಗುಲಾಮಳನ್ನಾಗಿ ನಡೆಸಿಕೊಂಡು ಬರಲಾಗಿದೆಯೇ ವಿನಹ ಆಕೆ ಮನುಷ್ಯಳು, ಅವಳಿಗೂ ಅವಳದೆ ವ್ಯಕ್ತಿತ್ವ ಇದೆ ಎಂಬುದನ್ನು ಎಂದಿಗೂ ಒಪ್ಪಿಕೊಳ್ಳಲಾರದು ಈ ಪುರುಷ ಪ್ರಧಾನ ವ್ಯವಸ್ಥೆ.



## ಪರ್ಯಾಯ

ಹಕ್ಕಿಗಳೆಲ್ಲ
ಹಾರಿ ಹೋದುವು
ಬಾನು – 'ಕಾಲಿ'
ನಿಶೆಯಲ್ಲಿ
ಚಿಕ್ಕೆಗಳೆಲ್ಲ
ಹಕ್ಕಿಯಾದವು – ತೇಲಿ

**ವ. ಉಮೇಶ ಕಾರಂತ**
ಮಂಗಳೂರು

ಸಮಾಜದಲ್ಲಿ ಕುಟುಂಬವು ಒಂದು ಸಣ್ಣ ಘಟಕ. ಲಿಂಗ ಅಸಮಾನತೆ ಎಂಬುದು ಮೊದಲು ಕುಟುಂಬ ದೊಳಗೆಯೇ ಆರಂಭವಾಗುತ್ತದೆ. "ಒಂದು ಕುಟುಂಬ ದೊಳಗೆ ಮಹಿಳೆ ಗರ್ಭಧರಿಸಿದಾಗಿನಿಂದಲೇ ಲಿಂಗ ಅಸಮಾನತೆ ಆರಂಭ ಗೊಳ್ಳುತ್ತದೆ. ಭ್ರೂಣದಲ್ಲಿನ ಮಗು ಹೆಣ್ಣಾಗಿದ್ದರೆ ಅದನ್ನು ಭ್ರೂಣಾವಸ್ಥೆಯಲ್ಲಿಯೇ ಕೊಲ್ಲುವುದು. ಹೀಗೆ ಬೆಳೆಸುವಾಗ ಅದರೊಂದಿಗೆ ಆ ಮಗುವಿನ ತಾಯಿಗೂ ಸಹ ಕುಟುಂಬದೊಳಗೆ ಶೋಷಣೆ ಆರಂಭವಾಗುತ್ತದೆ" ಎಂದು ನಾಗಮಣಿ ಎಸ್. ರಾವ್ ಅವರು ಹೇಳುತ್ತಾರೆ. ಹೆಣ್ಣುಮಗು ಜನಿಸುವುದಕ್ಕೆ ಪುರುಷನದೂ ಪಾಲಿದೆ ಎಂಬುದನ್ನು ತಳ್ಳಿಹಾಕಿ, ಕೇವಲ ಮಹಿಳೆಗೆ ಮಾತ್ರ ಶಿಕ್ಷೆ ವಿಧಿಸಲಾಗುತ್ತದೆ. ಆದರೆ ಹೆಣ್ಣುಮಗುವಿಲ್ಲದೆ ಪ್ರಕೃತಿ ಸಮತೋಲವಿಲ್ಲ ಎಂಬುದನ್ನು ಅರಿಯದೆ ಮಾನವ ಇಂಥ ನೀಚ ಕೃತ್ಯಗಳಿಗೆ ಮುಂದಾಗುತ್ತಿದ್ದಾನೆ. ಇಲ್ಲಿ ಕೇವಲ ಪುರುಷನದು ಮಾತ್ರ ತಪ್ಪಿರುವುದಿಲ್ಲ. ಆದರೆ ಈ ನೀಚ ಕೃತ್ಯದ ಹಿಂದೆ ಪುರುಷಪ್ರಧಾನ ವ್ಯವಸ್ಥೆಯ ಮೌಲ್ಯಪರ ಧೋರಣೆ ಇರುವ ಮಹಿಳೆಯ ಪಾತ್ರವು ಕೂಡ ಪ್ರಮುಖವಾಗಿ ಕಂಡುಬರುತ್ತದೆ.

ಮಹಿಳೆ ಎಂದರೆ ಹೀಗೇ ಇರಬೇಕು ಎಂಬ ಸಿದ್ಧಮಾದರಿ ಅಥವಾ ಚೌಕಟ್ಟನ್ನು ಈ ಪಿತೃಪ್ರಧಾನ ಸಮಾಜ ಮೊದಲಿನಿಂದಲೂ ಹೇರುವುದರ ಜೊತೆಗೆ ಮುಂದುವರಿಸಿಕೊಂಡು ಬಂದಿದೆ. ಹೆಣ್ಣು ಎಂದರೆ ಸೌಮ್ಯ ಸ್ವಭಾವದವಳು, ಸೌಂದರ್ಯವತಿ, ಸಹನಾಮಯಿ, ತ್ಯಾಗಮಯಿ, ಯಾವುದನ್ನೂ, ಯಾರನ್ನೂ ಪ್ರಶ್ನೆ ಮಾಡಲಾರದವಳು. ಯಾವಾಗಲೂ ಬೇರೆಯವರನ್ನು (ಅಪ್ಪ, ಗಂಡ, ಮಗ) ಅವಲಂಬಿಸಿರುವವಳು ಎಂಬ ಚೌಕಟ್ಟನ್ನು ರೂಪಿಸಲಾಗಿದೆ. ಸ್ತ್ರೀ ಈ ಮೇಲಿನ ಯಾವುದಾದರೂ ಒಂದಂಶವನ್ನು ಮೀರಿದರೂ ಅವಳಿಗೆ ಗಂಡುಬೀರಿ, ಗಯ್ಯಾಳಿ, ವಿನಯವಿಲ್ಲದವಳು ಎಂಬ ಬಿರುದನ್ನು ನೀಡಲಾಗುತ್ತದೆ. ಜೊತೆಗೆ ಆ ಸ್ತ್ರೀಯನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ.

ಒಂದು ಕುಟುಂಬದಲ್ಲಿ ಹೆಣ್ಣು ಮತ್ತು ಗಂಡು ಎರಡು ಮಕ್ಕಳಿದ್ದರೂ ಸಮಾನವಾಗಿ ನೋಡದೆ ಅವರನ್ನು ಮೇಲು-ಕೀಳು ಎಂದು ನೋಡಲಾಗುತ್ತಿದೆ. ಹೆಣ್ಣಾದವಳು ಹೊರಗೆ ಹೋಗದೆ ಮನೆಯ ನಾಲ್ಕು ಗೋಡೆಯ ಮಧ್ಯದಲ್ಲಿಯೇ ಇರಬೇಕು ಎನ್ನುವಂತಹದ್ದು, ಆಟ ಆಡುವಾಗ ಅಡುಗೆ ಮನೆಯ ಆಟಿಕೆಗಳ ಸಾಮಗ್ರಿಗಳನ್ನು ಹೆಣ್ಣುಮಕ್ಕಳಿಗೆ ಕೊಟ್ಟರೆ, ಗಂಡುಮಕ್ಕಳಿಗೆ ಅವನು ಮುಂದೆ ವೀರನಾಗಿ ಬೆಳೆಯುವ ಅವಕಾಶಗಳ ಕಲ್ಪಿಸಿಕೊಡಲಾಗುತ್ತದೆ. ಈ ಎಲ್ಲಾ ತಾರತಮ್ಯಗಳು ಮೊದಲು ಜನ್ಮತಾಳುವುದು ನಮ್ಮ ಕೌಟುಂಬಿಕ ಪರಿಸರ ದಲ್ಲಿಯೇ. ಮುಂದೆ ಬೆಳೆಯುವ ಮಕ್ಕಳಲ್ಲಿ ಶ್ರೇಷ್ಠ-ಕನಿಷ್ಠ ಭ್ರಮೆಯನ್ನು ತುಂಬಿಸಲಾಗುತ್ತದೆ.

ಹೆಣ್ಣುಮಗು ಓದಿದರೂ ಸಮಾಜ ಆಕೆಯನ್ನು ನೋಡುವ ದೃಷ್ಟಿಕೋನವೇ ಬೇರೆ. ಅವಳು ಯಾವಾಗಲೂ ಕುಟುಂಬದೊಳಗೆ ಉಳಿದುಕೊಳ್ಳುವ ಮತ್ತು ಕೇವಲ ಅಡುಗೆ ಮನೆಗೆ ಸೀಮಿತವಾದವಳು ಎಂಬ ಸಿದ್ಧಮಾದರಿಯನ್ನು ಇಂದಿಗೂ ಮುಂದುವರಿಸಿ ಕೊಂಡು ಬರಲಾಗಿದೆ. "ಮಗ ಮತ್ತು ಮಗಳು ಇಬ್ಬರೂ ಓದಿನಲ್ಲಿ ತೊಡಗಿದ್ದಾಗ, ಮಗಳನ್ನು ಎಬ್ಬಿಸಿ ಕೆಲಸಕ್ಕೆ ಹಚ್ಚುವುದು. ಮಗನಿಗೆ ಓದನ್ನು ಮುಂದುವರಿಸಲು ಹೇಳುವುದು. ಪದೇ ಪದೇ ಹೆಣ್ಣುಮಕ್ಕಳಿಗೆ ನೀನು ಓದಿ ತಾನೆ ಏನು ಮಾಡಬೇಕಿದೆ ಅವನಾದರೂ ವಂಶೋದ್ಧಾರಕ, ಮುಂದೆ ಜೀವನಕ್ಕೆ ದಾರಿ ತೋರುವವನು ಎಂಬ ಮಾತುಗಳನ್ನು ಹೇಳುವುದು. ಕುಟುಂಬದಲ್ಲಿ ಲಿಂಗವ್ಯವಸ್ಥೆಯನ್ನು ಆಧರಿಸಿ ಪಾತ್ರ ಹಂಚಿಕೆಗೆ ಒಂದು ಸಣ್ಣ ನಿದರ್ಶನವಷ್ಟೆ" ಎಂಬ ಆರ್. ಇಂದಿರಾ ಅವರ ಅಭಿಪ್ರಾಯ ವಾಸ್ತವ. ಇಂತಹ ಅನೇಕ ನಿದರ್ಶನಗಳು ನಮಗೆ ಕುಟುಂಬದಲ್ಲಿ ಸಿಗುತ್ತವೆ. ಲಿಂಗ ಸಮಾನತೆಯನ್ನು ಕುಟುಂಬ ವ್ಯವಸ್ಥೆಯೊಳಗೆ ತಿಳಿಸಿಕೊಡಲಾಗಿಲ್ಲ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಶೈಕ್ಷಣಿಕ ಕ್ರಾಂತಿಯ ಪ್ರತಿಫಲವಾಗಿ ಕೆಲವಾರು ಕುಟುಂಬಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಯನ್ನು ಕಾಣಬಹುದು.

ಮಹಿಳೆ ದುಡಿಯುವಂತಹ ಸಂದರ್ಭದಲ್ಲಿ ಪುರುಷನಿಗೆ ಸಮಾನವಾಗಿ ದುಡಿದರೂ ಸಹ ಅವಳ ದುಡಿಮೆಗೆ ಸಮಾನ ವೇತನ ಸಿಗುವುದಿಲ್ಲ. ಪುರುಷನಷ್ಟೇ ಸಮಬಲವಿರುವ ದುಡಿಮೆಯನ್ನು ಮಾಡಿದರೂ ಸಹ ಆಕೆಗೆ ಸಿಗುವ ವೇತನ ಕಡಿಮೆಯೇ ಆಗಿರುತ್ತದೆ. "ಮನೆಯ ಹೊರಗೆ ದುಡಿಯುವ ಮಹಿಳೆ ಎರಡು ವಿಧದ ಭಾರವನ್ನು ಹೊರುತ್ತಾಳೆ. ಉದ್ಯೋಗದಲ್ಲಿ ಅವಳ ಸ್ಥಾನ ಎಷ್ಟೇ ಮೇಲ್ಮಟ್ಟದಾಗಿರಲಿ ಮನೆಗೆ ಬಂದೊಡನೆ ಅವಳಿಗೆ ಎದುರಾಗಿರುವುದು ಮನೆಗೆಲಸದ, ಮಕ್ಕಳ ಜವಾಬ್ದಾರಿಗಳ ಸರಮಾಲೆ. ಈ ಪರಿಸ್ಥಿತಿಯನ್ನು ತಪ್ಪಿಸಿ ಕೊಂಡಿರುವ ಹೆಣ್ಣುಮಕ್ಕಳ ಸಂಖ್ಯೆ ಇಂದಿಗೂ ಗೌಣ ಎಂದರೆ ತಪ್ಪಾಗಲಾರದು"







(ಆರ್. ಇಂದಿರಾ). ಹೀಗೆ ಸಮಾಜ ಮತ್ತು ಸಮುದಾಯಗಳಲ್ಲಿ ಹೆಣ್ಣು ಏಕಕಾಲದಲ್ಲಿ ಎರಡೂ ಜವಾಬ್ದಾರಿಗಳನ್ನು ನಿಭಾಯಿಸುತ್ತಾಳಾದರೂ ಅವಳಿಗೆ ಸಿಗುವಂತಹ ಗೌರವ ಶೂನ್ಯವೆ ಆಗಿರುತ್ತದೆ. ಇಲ್ಲಿನ ಈ ಧೋರಣೆಗಳಿಗೆ ಪ್ರಮುಖವಾದ ಕಾರಣವೆಂದರೆ, ಅನಾದಿ ಕಾಲದಿಂದಲೂ ಮಹಿಳೆ ಎಂದರೆ ದುರ್ಬಲಳು, ಅಸಮರ್ಥಳು ಎಂಬುದಾಗಿ ನಡೆಸಿಕೊಂಡು ಬಂದಿರುವ ಪುರುಷ ಪ್ರಧಾನ ವ್ಯವಸ್ಥೆಯ ಹುನ್ನಾರ. ಇದರ ಪರಿಣಾಮವನ್ನು ನಮ್ಮ ಸಮಕಾಲೀನ ಮಹಿಳೆಯರು ಇಂದಿಗೂ ಅನುಭವಿಸುತ್ತಿದ್ದಾರೆ.

ನಮ್ಮ ಸಾಮಾಜೀಕರಣ ವ್ಯವಸ್ಥೆಯಲ್ಲಿ ಮಹಿಳೆ, ಸಮಾಜ ಮತ್ತು ಸಂಸ್ಕೃತಿ ಈ ಮೂರು ಪರಿಕಲ್ಪನೆಗಳು ಒಂದಕ್ಕೊಂದು ನಿಕಟವಾದ ಸಂಬಂಧವನ್ನು ಹೊಂದಿವೆ. ಆದರೆ ಗಂಡು ಮತ್ತು ಹೆಣ್ಣನ್ನು ಗುರುತಿಸುವಿಕೆಗೆ ಕೆಲವು ಪ್ರತ್ಯೇಕ ಮಾನದಂಡಗಳಿವೆ. ಇಲ್ಲಿ ಸಂಸ್ಕೃತಿ ಎಂದರೆ ಪುರುಷ ಎಂದೇ ಭಾವಿಸಲಾಗಿದೆ. ಅಂದರೆ ಸಂಸ್ಕೃತಿಯ ನಿರ್ಮಾತೃ ಪುರುಷನೇ ಆಗಿರುವನು. ಪುರುಷ ಧೈರ್ಯಶಾಲಿ, ಸ್ವಾವಲಂಬಿ, ರಕ್ಷಕ ಮೊದಲಾದ ಗುಣಗಳನ್ನು ಹೊಂದಿದವನೆಂದು ಈ ಪುರುಷತ್ವ ಗುಣಗಳನ್ನು ಹೊಂದಿದವನಿಗೆ ಗಂಡು ಎಂದು ಕರೆಯಲಾಗುತ್ತದೆ. ಹಾಗೆಯೇ ಭಾವುಕತೆ, ಕೋಮಲತೆ, ವಿಧೇಯತೆ, ತಾಯ್ತನ, ಸಂಗೋಪನೆ, ಕ್ಷಮೆ, ಕಷ್ಟಸಹಿಷ್ಣುತೆ ಇವುಗಳನ್ನು ಸ್ತ್ರೀಗೆ ಆರೋಪಿಸಲಾಗುತ್ತದೆ. ಸ್ತ್ರೀ ಎನ್ನುವುದಕ್ಕೆ ಪ್ರತ್ಯೇಕ ಅನನ್ಯತೆಯನ್ನು ಗುರುತಿಸಲಾಗಿದೆ.

ಈ ಲಿಂಗತಾರತಮ್ಯವು ಅನಾದಿ ಕಾಲದಿಂದಲೂ ಅಸ್ತಿತ್ವದಲ್ಲಿದ್ದರೂ ಇದನ್ನು ನಮ್ಮ ಮಹಿಳೆಯರು ವಿರೋಧಿಸದೆ ಮುಂದುವರಿಸಿಕೊಂಡು ಬಂದಿಲ್ಲ. ಕಾಲದಿಂದ ಕಾಲಕ್ಕೆ ಬದಲಾದ ಸನ್ನಿವೇಶದಲ್ಲಿ ಹಲವಾರು ಮಹಿಳೆಯರು ಪುರೋಹಿತಶಾಹಿಯ ಸ್ತ್ರೀ ವಿರೋಧಿ ನಿಲುವುಗಳಿಗೆ ಪ್ರತ್ಯುತ್ತರ ನೀಡುತ್ತ ಬಂದಿರುವ ಹಲವಾರು ನಿದರ್ಶನಗಳು ನಮ್ಮ ಮುಂದಿವೆ. ೧೨ನೇ ಶತಮಾನದಲ್ಲಿಯೇ ಈ ಪುರುಷ ವಿರೋಧಿ ಧೋರಣೆಗಳನ್ನು ಮೆಟ್ಟಿ ನಿಂತು ತಮ್ಮ ಅನನ್ಯತೆಯನ್ನು ಪ್ರತಿಪಾದಿಸಿದ ಹಲವಾರು ವಚನಕಾರ್ತಿಯರು ನಮಗೆ ಕಂಡುಬರುತ್ತಾರೆ.

*ಮೊಲೆ ಮೂಡಿ ಬಂದಡೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದಡೆ ಗಂಡೆಂಬರು*
*ಈ ಉಭಯದ ಜ್ಞಾನ ಹೆಣ್ಣೋ, ಗಂಡೋ*
*ನಾಸ್ತಿನಾಥ*

– ಗೊಗ್ಗವ್ವೆ ಪುರುಷ ಮೌಲ್ಯಗಳಿಗೆ ಪ್ರತಿಯಾಗಿ ಸ್ತ್ರೀ ಮೌಲ್ಯಗಳನ್ನು ಪ್ರತಿಪಾದಿಸಿದ ಈ ವಚನದಲ್ಲಿ ಗಂಡು ಮತ್ತು ಹೆಣ್ಣಿನ ಅನನ್ಯತೆಯ ಸ್ವಚಹರೆಯನ್ನು ಕುರಿತು ಹೇಳಿದ್ದಾರೆ. ಅದಲ್ಲದೆಯೆ ಮುಂದುವರಿದು ಜ್ಞಾನದ ಬಗೆಗೆ ಸಮಾಜಕ್ಕೆ ಪ್ರಶ್ನೆ ಮಾಡುವಂತಹದ್ದು, ಮಹಿಳೆಯ ಜ್ಞಾನ ಮತ್ತು ಅರಿವನ್ನು ಚರಿತ್ರೆಯ ಕಾಲದಿಂದಲೂ ಪರಿಗಣಿಸದೆ ಇದ್ದದ್ದು ಮತ್ತು ಅವಳ ಜ್ಞಾನವನ್ನು ಗೌಣಗೊಳಿಸುತ್ತಾ ಗಂಡು ಮತ್ತು ಹೆಣ್ಣಿನ ನಡುವೆ ಒಂದು ಅಂತರವನ್ನು,



ಅಸಮಾನತೆಯನ್ನು ಕಾಯ್ದುಕೊಳ್ಳುತ್ತಾ ಬಂದಿರುವುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.

ಆಧುನಿಕ ಪೂರ್ವ ಕಾಲಘಟ್ಟದಲ್ಲಿ ಸಂಚಿ ಹೊನ್ನಮ್ಮ ತನ್ನ ಸಮಕಾಲೀನ ಸಮಾಜದಲ್ಲಿ ಹೆಣ್ಣನ್ನು ತಾತ್ಸಾರದಿಂದ ನೋಡುವವರಿಗೆ ತನ್ನ ಬರವಣಿಗೆಯ ಮೂಲಕ ಪ್ರಶ್ನೆ ಮಾಡುವುದರ ಜೊತೆಗೆ ಹೆಣ್ಣಿನ ಸ್ಥಾನವನ್ನು ತಿಳಿಸುತ್ತಾಳೆ.

*ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ*
*ಪೆಣ್ಣಲ್ಲವೆ ಪೊರೆದವಳು*
*ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು*
*ಕಣ್ಣುಕಾಣದ ಗಾವಿಲರು*

– ಈ ವಚನದ ಮೂಲಕ ಸಂಚಿ ಹೊನ್ನಮ್ಮ ಸಮಾಜಕ್ಕೆ ಹೆಣ್ಣಿನ ಮಹತ್ವವೇನೆಂದು ದಿಟ್ಟವಾಗಿ ಹೇಳುತ್ತಾಳೆ. ಹೆಣ್ಣು ಪಾಲನೆ ಪೋಷಣೆಯಿಂದ ಹಿಡಿದು ಸಮಾಜದ ವಕ್ರತೆಯನ್ನು ತಿದ್ದುವಂಥವಳು. ನಿಂದಿಸುವ, ಶೋಷಿಸುವ ಈ ಪುರುಷನನ್ನು ಹೆಣ್ಣು ಅಲ್ಲವೇ ಹೊತ್ತು, ಹೆತ್ತು ಬೆಳೆಸಿದವಳು ಎಂಬುದನ್ನು ಮತ್ತಷ್ಟು ದೃಢಪಡಿಸುತ್ತಾಳೆ. ಯಾವುದಕ್ಕೂ ಅರ್ಹಳಲ್ಲ ಅಂದರೆ ಗಂಡಿನ ಸಮಾನವಾಗಿ ನಿಲ್ಲುವಷ್ಟು ಸಮಬಲಳಲ್ಲ, ಸಾಮರ್ಥ್ಯವುಳ್ಳವಳೂ ಅಲ್ಲ, ಎಂದಿಗೂ ಕುಟುಂಬದ ಬೇಗೆಯೊಳಗೆ ಬೇಯಲು ಮಾತ್ರ ಅರ್ಹಳು ಎನ್ನುವ ಹಾಗೂ ಮೌಢ್ಯತೆಯನ್ನು ಮತ್ತು ಹೆಣ್ಣಿನ ಬಗೆಗೆ ಅಸಡ್ಡೆಯನ್ನು ಹೊಂದಿರುವಂತಹ ಈ ಪುರುಷ ಪ್ರಧಾನ ಸಮಾಜಕ್ಕೆ ಹೆಣ್ಣಿನ ಮಹತ್ವವನ್ನು ಹಲವಾರು ಮಹಿಳೆಯರು ತಿಳಿಸಿದ್ದಾರೆ. ಹೆಣ್ಣು ಕೇವಲ ಅಧೀನಳಾಗಿಯೇ ಇರಬೇಕೆಂಬುದನ್ನು ಹೇಳುವ ಈ ಪಿತೃಪ್ರಧಾನ ಸಮಾಜಕ್ಕೆ ಸವಾಲೊಡ್ಡುವ ಮತ್ತು ಸ್ಥಾಪಿತ ವ್ಯವಸ್ಥೆಯೊಳಗಿರುವ ನಿರ್ಬಂಧಗಳನ್ನು ಒಡೆಯುವ ಕೆಲಸಗಳನ್ನು ಮಾಡಿದ್ದಾರೆ.

ಅನಾದಿ ಕಾಲದಿಂದ ಸ್ತ್ರೀ ಶೋಷಣೆಗೆ ಒಳಗಾಗುತ್ತಾ ಬಂದಿದ್ದರೂ ಸಹ ಅದಕ್ಕೆ ತನ್ನ ಪ್ರತಿರೋಧ ಒಡ್ಡುತ್ತಲೇ ಬಂದಿರುವುದನ್ನು ಕಾಣುತ್ತೇವೆ. ಹೊಸತನ್ನ ಆಗುಮಾಡಿಕೊಳ್ಳುವುದರ ಮೂಲಕ ಅದರೊಂದಿಗೆ ಅವಳ ಸಮಸ್ಯೆ ಅಂತ್ಯ ವಾಗುವುದು ಎಂಬ ನಿರೀಕ್ಷೆ ಹುಸಿಯಾಗುತ್ತಲೇ ಹೋಗಿದೆ. ಕಾಲಕ್ಕೆ ತಕ್ಕಂತೆ ಹೊಸ ಹೊಸ ಆತಂಕಗಳಿಗೆ ಮಹಿಳೆಯನ್ನು ತಳ್ಳಲಾಯಿತು. ವ್ಯವಸ್ಥೆಯೊಳಗೆ ಯಾವುದಕ್ಕೂ ಶರಣಾಗದೆ ತನ್ನ ಅಸ್ತಿತ್ವ ಮತ್ತು ಅಸ್ಮಿತೆಯನ್ನು ಉಳಿಸಿಕೊಳ್ಳಲು ಇಂದಿಗೂ ಹೆಣಗುತ್ತಿದ್ದಾಳೆ. ಆಧುನಿಕತೆ ಮತ್ತು ಜಾಗತೀಕರಣ ಕಾಲಮಾನದ ಸಂದರ್ಭದಲ್ಲಿ, ಮಹಿಳೆಯು ಪುರುಷನ ಸಮಬಲಳಾಗಿದ್ದಾಳೆ. ಆದರೂ ಹೆಣ್ಣೆಂಬ ಕಾರಣಕ್ಕೆ ಅವಳು ಮಾಡುವಂತಹ ಯಾವ ಕೆಲಸ ಕಾರ್ಯಗಳನ್ನು ಪರಿಪೂರ್ಣ ಎಂದು ಒಪ್ಪಿಕೊಳ್ಳುವ ಮನಃಸ್ಥಿತಿ ಇಂದಿಗೂ ಕಾಣಲು ಸಾಧ್ಯವಿಲ್ಲ.

**ಲತಾ. ಕೆ. ಇ. ಕಂಚೀನಹಳ್ಳಿ**
ಪಿಎಚ್.ಡಿ., ಸಂಶೋಧನಾ ವಿದ್ಯಾರ್ಥಿನಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

## ಹೊಸ ಓದು

### ಅಧ್ಯಾಪಕರು – ವ್ಯಕ್ತಿತ್ವದ ಶಿಲ್ಪಿ




ವಿ. ಕೆ. ತಾಳಿತ್ತಾಯ
**ಪುಟ : ೮೦**
**ಬೆಲೆ : ರೂ. ೭೦**
**ನವಕರ್ನಾಟಕ ಪ್ರಕಾಶನ**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ವಿದ್ಯಾರ್ಥಿ – ಅಧ್ಯಾಪಕ – ಪೋಷಕ ಮೂವರೂ ಪೂರಕವಾಗಿದ್ದರೆ ಮಾತ್ರ ಶಿಕ್ಷಣಕ್ಕೆ ಒಂದು ಅರ್ಥ ಬರುತ್ತದೆ. ಇಂದಿನ ಶಿಕ್ಷಣ ಮಟ್ಟ ಕುಸಿಯುತ್ತಿದೆಯೆಂದು ಬೊಬ್ಬಿಡುವ ನಾವು ಇಂತಹ ಸರಳ ವಿಷಯವೊಂದನ್ನು ಅರ್ಥಮಾಡಿಕೊಳ್ಳುತ್ತಿಲ್ಲ. ಶಿಕ್ಷಕರು ತಾವು ಕಲಿಸುವವರಷ್ಟೇ ಅಲ್ಲ, ವೃತ್ತಿ ಜೀವನದಲ್ಲಿ ತಾವೂ ಕಲಿಯುವುದು ಸಾಕಷ್ಟಿದೆ ಎಂದು ತಿಳಿದುಕೊಂಡಾಗ ಮಾತ್ರ ಆತ ಯಶಸ್ವಿ ಉಪಾಧ್ಯಾಯನಾಗಬಲ್ಲ. ಅಷ್ಟಲ್ಲದೆ "ತಾನು ಶಿಕ್ಷಕ ತರಬೇತಿ ಪಡೆದಾಗಿದೆ, ತನಗೆ ಕಲಿಸುವುದಲ್ಲದೆ ಕಲಿಯಲು ಇನ್ನೇನೂ ಇಲ್ಲ" ಎಂಬ ಭಾವನೆ ಮೂಡಿತೋ ಅಲ್ಲಿಗೆ ಶಿಕ್ಷಣ ವ್ಯವಸ್ಥೆಯಲ್ಲಿ ಅಪಸ್ವರವೊಂದು ಬಂದಂತೆಯೇ. ಇನ್ನು ಪೋಷಕರು "ತಾವು ಮಗುವಿನ ಶಾಲಾ ಶುಲ್ಕ ಕಟ್ಟುತ್ತಿದ್ದೇವೆ. ಕಲಿಸುವುದು 'ಅವರ' ಕೆಲಸ" ಎಂದು ಭಾವಿಸಿದಾಗ ಶಿಕ್ಷಣ ವ್ಯಾಪಾರೀಕರಣವಾದಂತೆಯೇ. ಈ ಎರಡು ಅತಿಗಳ ನಡುವೆ ಮುಗ್ಧ ವಿದ್ಯಾರ್ಥಿ ಅನೇಕ ಕವಲುದಾರಿಗಳನ್ನು ಕ್ರಮಿಸಬಲ್ಲ ಹಾಗೂ ಓದಿನಿಂದ ವಿಮುಖನಾಗಬಲ್ಲ. ಮುಂದೆ ಶಿಷ್ಯಂಗೆ ನಮಿಸಿ ಪಾಠ ಹೇಳಬೇಕಾದ ಹಂತ ತಲುಪಲೂಬಹುದು. ವೃತ್ತಿಪರ ಅಧ್ಯಾಪಕನಲ್ಲದ ಆದರೆ ಸಾಕಷ್ಟು ಅಧ್ಯಾಪಕರುಗಳ ತರಬೇತಿ ಕಾರ್ಯಕ್ರಮ, ಶಿಬಿರಗಳಲ್ಲಿ ಪಾಲ್ಗೊಂಡು ಸಕ್ರಿಯವಾಗಿ ತೊಡಗಿಸಿಕೊಂಡ ಶ್ರೀ ವಿ. ಕೆ. ತಾಳಿತ್ತಾಯರು ತಮ್ಮ ೪೦ ವರ್ಷಗಳ ಅನುಭವವನ್ನು ಓದುಗರೊಂದಿಗೆ ಪುಸ್ತಕ ರೂಪದಲ್ಲಿ ಹಂಚಿಕೊಂಡಿದ್ದಾರೆ. ಅಧ್ಯಾಪಕರಿಗೂ ಪೋಷಕರಿಗೂ ಬಹಳ ಉಪಯುಕ್ತ ಪುಸ್ತಕ. ಶಿಕ್ಷಣ ವ್ಯಾಪಾರೀ ಸರಕಲ್ಲ ಎಂಬುದು ಇಲ್ಲಿನ ಧ್ವನಿ.*

### ಬೊಳುವಾರು ಮಹಮದ್ ಕುಂಞಿ

*ಪ್ರೊ॥ ಟಿ. ಪಿ. ಅಶೋಕ*



**ಪುಟ : ೧೦೮** **ಬೆಲೆ : ರೂ. ೮೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ತಮ್ಮ ಗದ್ಯ ಸಾಹಿತ್ಯ ಕೃತಿಗಳಿಗಾಗಿ ಒಮ್ಮೆ ಹಾಗೂ ಮಕ್ಕಳ ಸಾಹಿತ್ಯಕ್ಕಾಗಿ ಮತ್ತೊಮ್ಮೆ – ಹೀಗೆ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಎರಡು ಬಾರಿ ಪ್ರಶಸ್ತಿ ಪುರಸ್ಕೃತರಾದ ಮೊದಲಿಗರೆಂದೂ ದೇಶದಲ್ಲೇ ಏಕೈಕ ವ್ಯಕ್ತಿಯೆಂದೂ ಬೊಳುವಾರು ಮಹಮದ್ ಕುಂಞಿ ಸಾಹಿತ್ಯವಲಯದಲ್ಲಿ ಮಾನ್ಯರಾಗಿದ್ದಾರೆ. ಅಂತೆಯೇ ಅನೇಕ ಪ್ರಥಮಗಳನ್ನು ಸಾಧಿಸಿದ ಹಿರಿಮೆಯೂ ಇವರಿಗಿದೆ. ಈ ಪುಸ್ತಕವು ಬೊಳುವಾರು ಅವರ ಜೀವನ ಪಥದೊಂದಿಗೆ ಅವರ ಸಾಹಿತ್ಯಕೃತಿಗಳನ್ನು ಪರಿಚಯಿಸುವ "ನವಕರ್ನಾಟಕ ಸಾಹಿತ್ಯ ಸಂಪದ" ಮಾಲೆಯ ಅರವತ್ತನೇ ಕೃತಿ. ವಿಚಾರವಂತಿಕೆಯನ್ನು ಮೈದುಂಬಿಕೊಂಡು ಕಥೆಗಾರರಾಗಿ ಬೊಳುವಾರು ಸೃಷ್ಟಿಸುವ ಸಾಮಾಜಿಕ ಪರಿಸರ, ಅದರ ಆಗುಹೋಗುಗಳು ನಮಗೆಲ್ಲಾ ಪರಿಚಿತವೇ. ಆದರೂ ನಾವು ಕಾಣಲಾಗದ ವಿಶಿಷ್ಟ ಆಯಾಮವೊಂದನ್ನು ಬಂಡಾಯದ ನೆಲೆಯಲ್ಲಿ ಕಂಡು ನಮಗೂ ಕಾಣುವಂತೆ ಮಾಡುತ್ತಾರೆ. ಅಂಕ, ದೇವರುಗಳ ರಾಜ್ಯದಲ್ಲಿ, ಒಂದು ತುಂಡುಗೋಡೆ, ಜೆಹಾದ್ ಇವು ಅಂಥ ಕೆಲವು ಬೊಳುವಾರರ ಕೃತಿಗಳು. ಸಮಾಜದ ಅಂಕುಡೊಂಕು – ಮೂಢನಂಬಿಕೆಗಳತ್ತ ಅವರು ಎಸೆಯುವ ತೀಕ್ಷ್ಣ ಬಾಣಗಳಂತಹ ಆದರೆ ವಿನೋದ ತುಂಬಿದ ಮಾತಿನ ವೈಖರಿ ಕಥೆಗಳನ್ನು ಮನಸ್ಸಿನಾಳದಲ್ಲಿ ಅಚ್ಚೊತ್ತಿಬಿಡುತ್ತದೆ. ಎಲ್ಲ ಧರ್ಮಗಳಲ್ಲಿನ ಕಂದಾಚಾರಗಳನ್ನೂ, ಹಲವು ಮೂಢ ಆಚಾರಗಳನ್ನೂ ತಮ್ಮ ಭಾಷಣ ಬರಹಗಳಲ್ಲಿ ಖಂಡಿಸುತ್ತಿದ್ದ ಬೊಳುವಾರು ತಮ್ಮ ಸಮುದಾಯದ ವಿರೋಧವನ್ನೂ ಅಂದಿನ ಕಾಲಕ್ಕೆ ಎದುರಿಸಿದ್ದರು. ಬೊಳುವಾರರ ಬದುಕನ್ನೂ – ಬರಹಗಳನ್ನೂ ಸಮರ್ಥವಾದ ವಿಶ್ಲೇಷಣೆ ನಡೆಸಿ ಪ್ರೊ॥ ಟಿ. ಪಿ. ಅಶೋಕ ಒಂದು ಒಳ್ಳೆಯ ಓದನ್ನು ಒದಗಿಸಿದ್ದಾರೆ.*

### ಸಾಲಕ್ಕೊಂದು ಸವಾಲ್ (ಹಾಸ್ಯ ಸಂಕಲನ)

*ಅರುಂಧತಿ ಜೋಶಿ*




**ಪುಟ : ೧೦೪** **ಬೆಲೆ : ರೂ. ೬೦**
**ತೇಜು ಪಬ್ಲಿಕೇಷನ್ಸ್,** ನಂ. ೨೩೩, ೭ನೇ 'ಎ' ಅಡ್ಡರಸ್ತೆ, ಶಾಸ್ತ್ರಿನಗರ, ಬೆಂಗಳೂರು – ೫೬೦ ೦೨೮

*"ಇಂದಿನ ಕಾಲದ ಹಾಸ್ಯ ಕೇಳಿದರೆ ಅಳು ಬರುತ್ತದೆ" ಎಂಬ ಮಾತೊಂದು ಪ್ರಚಲಿತದಲ್ಲಿದೆ. ಅಂದರೆ ಅತ್ಯುತ್ತಮ ಹಾಸ್ಯ ಹೊಟ್ಟೆಹುಣ್ಣಾಗಿಸುವಂತೆ ನಗಿಸುತ್ತದೆ. ಉತ್ತಮ ಹಾಸ್ಯ ಮುಗುಳು ನಗೆ – ಹೆಚ್ಚೆಂದರೆ ಬಾಯಗಲಿಸಿ ನಗು ಬರುವಂತೆ ಮಾಡುತ್ತದೆ. ಕನಿಷ್ಠ ಹಾಸ್ಯ ಮಾತ್ರ ಅಳು ಬರುವಂತೆ ಮಾಡುತ್ತದೆನ್ನುವುದು ಅದರ ಅರ್ಥ. ಹಾಸ್ಯ ಕಣ್ಮರೆಯಾಗಿ ಜನರ ನಗು ಮಾಯವಾಗಿರುವ ಹೊತ್ತಿನಲ್ಲಿ ಅಪರೂಪಕ್ಕೆ ಒಂದು ಹಾಸ್ಯ ಸಂಕಲನ ನಿಮ್ಮ ಕೈಗಿಟ್ಟಿದ್ದಾರೆ ಶ್ರೀಮತಿ ಅರುಂಧತಿ ಜೋಶಿ. ಲೇಖಕಿ ಹೇಳುವಂತೆ, ವಯಸ್ಸಾದ ನಂತರವೇ ಲೇಖನಗಳನ್ನು ಬರೆಯಲು ಪ್ರಾರಂಭಿಸಿದ್ದರಿಂದಾಗಿ ಅವರ ಅನುಭವದ ಶ್ರೀಮಂತಿಕೆಯಿಂದ ಲೇಖನಗಳಿಗೆ ವಯಸ್ಸಾದಂತೆ ಕಾಣುತ್ತಿಲ್ಲ. ಇನ್ನೂ ಪಕ್ವವಾಗಿಯೇ ಅವು ರೂಪುಗೊಂಡಿವೆ. ಇಂದು ಹಾಸ್ಯ ಆಸ್ವಾದಿಸಬೇಕಾದರೆ ದೂರದರ್ಶನ ಕಾರ್ಯಕ್ರಮಗಳಲ್ಲಿ ಕೆಲವೊಮ್ಮೆ ಅವಕಾಶ ಸಿಗುತ್ತದೆ. ಅದು ಕೇಳುವುದಕ್ಕೆ ಮಾತ್ರ. ಅಲ್ಲಿನ ಹಾಸ್ಯ ಸ್ಪಷ್ಟವಾಗಿ ಕೇಳುವುದಿಲ್ಲ ಮಾತ್ರವಲ್ಲ, ಯಾತಕ್ಕೆ ನಗುತ್ತಿದ್ದಾರೆಂದೂ ತಿಳಿಯದೆ ನಾವು ಪೆಚ್ಚಾಗುತ್ತೇವೆ. ಇಂಥ ಪುಸ್ತಕಗಳಾದರೆ ಓದಿ ಮನನ ಮಾಡಿಕೊಳ್ಳಬಹುದು. ಮತ್ತೆ ಮತ್ತೆ ಓದಿ ಅಂತರ್ಗತವಾಗಿರುವ ಹಾಸ್ಯವನ್ನು ಎಳೆದು ನೋಡಬಹುದು, ಓದಬಹುದು. ಇಂಥ ಪುಸ್ತಕವನ್ನು ಎದುರು ನೋಡುತ್ತಿದ್ದ ಓದುಗರಿಗೆ ಒಂದು ಒಳ್ಳೆಯ ಹಾಸ್ಯ ಸಂಕಲನ ಸಿದ್ಧವಾಗಿದೆ.*

### ನೇಸರ (ಸಣ್ಣ ಕತೆಗಳು)

*ಭಾರತೀ ಕಾಸರಗೋಡು*




**ಪುಟ : ೧೧೮** **ಬೆಲೆ : ರೂ. ೯೦**
**ಇಂದಿರಾ ಪ್ರಕಾಶನ,** ನಂ. ೯೭೨ 'ಸಿ', ೪ನೇ 'ಇ' ವಿಭಾಗ, ೧೧ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು – ೫೬೦ ೦೧೦

*ಇಲ್ಲಿನ ಕಥೆಗಳು ಕೌಟುಂಬಿಕ ನೆಲೆಯಲ್ಲಿ ಪರಿಚಯಿಸಲ್ಪಟ್ಟಿವೆ. ಇಂದಿನ ವೇಗದ ಬದುಕಿನಲ್ಲಿ ಕಳೆದುಹೋಗುತ್ತಿರುವ ಮತ್ತು ಶುಷ್ಕವಾಗಿ ಪರಿಣಮಿಸಿರುವ ಮಾನವ ಸಂಬಂಧಗಳಿಗೆ ಆರ್ದ್ರತೆಯನ್ನು ಹನಿಸುವ ತನ್ಮೂಲಕ ಸದಾ ಜೀವಂತವಾಗಿರಿಸುವ ಪ್ರಯತ್ನ ಇಲ್ಲಿದೆ. ದಿನವೂ ನಾವು ನಮ್ಮ ಪರಿಸರದಲ್ಲೇ ಎದುರಿಸಬೇಕಾದ ಸನ್ನಿವೇಶಗಳನ್ನೊಳಗೊಂಡ ಕಥಾಹಂದರವಿದು. ಕೆಲವೊಂದು ಸಲ ಬಾಳಿನಲ್ಲಿ ನಾವಂದುಕೊಂಡಂತೆ ನಡೆಯದಿದ್ದಾಗ ಶೂನ್ಯವೊಂದು ಆವರಿಸಿಬಿಡುತ್ತದೆ. ಮನಸ್ಸು ಖಿನ್ನವಾಗಬಹುದು. ಮಗದೊಮ್ಮೆ ಎಲ್ಲಿಲ್ಲದ ಸಂತೋಷ– ನೆಮ್ಮದಿ ನಮ್ಮನ್ನು ಹುಡುಕಿಕೊಂಡು ಬರಬಹುದು. ಎರಡಕ್ಕೂ ಬದುಕಲ್ಲಿ ಸಮಾನಾವಕಾಶ. ಬೇಡವೆಂದರೂ ವಕ್ಕರಿಸುವ ಕೆಡುಕನ್ನು ನಾವು ಸ್ವೀಕರಿಸಲು ಬಹಳಷ್ಟು ಕೊಸರಾಡುತ್ತೇವೆ. ಇಲ್ಲಿನ ಕಥೆಗಳಲ್ಲಿನ ವಿಶೇಷವೆಂದರೆ ಪುಟ್ಟ ಮಕ್ಕಳಿರುವ ಮನೆ ಸದಾ ಹರ್ಷದಾಯಕವೆಂಬ ಸಂದೇಶ. ಎಂಥದೇ ನೋವು – ನರಳಿಕೆಗಳಿದ್ದರೂ ಪುಟ್ಟ ಮಕ್ಕಳು ತಮ್ಮ ಮುಗ್ಧ ನಡವಳಿಕೆಗಳಿಂದ ನಮ್ಮನ್ನು ಗೆಲ್ಲಬಲ್ಲರು, ಸಂತೈಸಬಲ್ಲರು ಎಂಬುದು ಖಚಿತ ನಂಬಿಕೆ. ಅದಕ್ಕೇ ಇರಬೇಕು ನಮ್ಮ ಹಿರಿಯರು ಕೂಡ 'ಮಕ್ಕಳಿರಲವ್ವ ಮನೆತುಂಬ', 'ಮಕ್ಕಳೇ ಮನೆಗೆ ಮಾಣಿಕ್ಯ' ಎಂಬಂಥ ನುಡಿಮುತ್ತುಗಳನ್ನು ಪೋಣಿಸಿ ನಮ್ಮ ಕಣ್ಣು ತೆರೆಸಿದ್ದು. ಲೇಖಕಿ ಹತ್ತಾರು ಕಡೆಯ ಅನುಭವಗಳನ್ನು ಕಥೆಗಳಲ್ಲಿ ಕಡೆದಿಟ್ಟಿದ್ದಾರೆ.*

*– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨*

ರಾಷ್ಟ್ರದ ಮುಂಚೂಣಿ ಕಾರ್ಮಿಕ ಸಂಘಟನೆ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್‌ನ (ಎಐಟಿಯುಸಿ) ಪ್ರಧಾನ ಕಾರ್ಯದರ್ಶಿಯಾಗಿ ಶ್ರೀಮತಿ ಅಮರ್‌ಜಿತ್ ಕೌರ್ ಡಿಸೆಂಬರ್ ೨೦೧೭ರಲ್ಲಿ ಆಯ್ಕೆಯಾಗಿದ್ದಾರೆ. ಇತ್ತೀಚೆಗೆ ಅವರು ಬ್ಯಾಂಕ್ ನೌಕರರ ಮತ್ತು ಅಂಗನವಾಡಿ ಕಾರ್ಯಕರ್ತೆಯರ ಸಮ್ಮೇಳನದಲ್ಲಿ ಪಾಲ್ಗೊಳ್ಳಲು ಬೆಂಗಳೂರಿಗೆ ಆಗಮಿಸಿದ್ದರು. 'ಹೊಸತು'ಗಾಗಿ ಅವರ ಜೊತೆ ನಡೆಸಿದ ಸಂದರ್ಶನ ಇಲ್ಲಿದೆ.

ಪಂಜಾಬ್‌ನ ಗುರ್‌ದಾಸ್‌ಪುರ ಜಿಲ್ಲೆಯ ಗ್ರಾಮವೊಂದರ ಕೃಷಿಮೂಲದ ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ ಅಮರ್‌ಜಿತ್ ದೆಹಲಿಯಲ್ಲಿ ಉನ್ನತ ವ್ಯಾಸಂಗ ಪೂರ್ಣಗೊಳಿಸುತ್ತಾರೆ. ಸ್ವಾತಂತ್ರ್ಯ ಹೋರಾಟಗಾರರ ಮಗಳಾಗಿ ಹತ್ತನೇ ತರಗತಿಯಲ್ಲೇ ವಿದ್ಯಾರ್ಥಿ ಚಳವಳಿಗೆ ಧುಮುಕಿದ ಅವರು ದೆಹಲಿ ವಿವಿಯಿಂದ ಎಂಎಸ್‌ಸಿ (ಭೌತಶಾಸ್ತ್ರ) ಮತ್ತು ಕಾನೂನು ಪದವಿ ಗಳಿಸುತ್ತಾರೆ. ಹಲವು ಹೋರಾಟಗಳ ನೇತೃತ್ವ ವಹಿಸಿ ೮೦ರ ದಶಕದಲ್ಲಿ ವಿದ್ಯಾರ್ಥಿ ಸಂಘಟನೆ ಎಐಎಸ್‌ಎಫ್‌ನ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಆಗಿ ಕಾರ್ಯ ನಿರ್ವಹಿಸಿರುತ್ತಾರೆ. ಮಹಿಳಾ ಚಳವಳಿಯಲ್ಲೂ ತಮ್ಮ ಛಾಪು ಮೂಡಿಸಿ ಎನ್‌ಎಫ್‌ಐಡಬ್ಲ್ಯುನ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿರುತ್ತಾರೆ. ಕಾರ್ಮಿಕ ಚಳವಳಿಯೇ ತನ್ನ ಜೀವಾಳ ಎಂದು ನಂಬಿರುವ ಅಮರ್‌ಜಿತ್ ಕೌರ್ ಎಐಟಿಯುಸಿಯ ಪ್ರಧಾನ ಕಾರ್ಯದರ್ಶಿಯ ಸ್ಥಾನಕ್ಕೇರಿದ್ದಾರೆ. ಮಹಿಳೆಯಾಗಿ, ಎಡಪಂಥೀಯ ನಾಯಕಿಯಾಗಿ, ಧೀರೋದಾತ್ತ ಹೋರಾಟಗಾರ್ತಿಯಾಗಿ, ಕಾರ್ಮಿಕ ಮುಖಂಡರಾಗಿ ತಮ್ಮ ಹೋರಾಟದ ಅನುಭವಗಳನ್ನು ನಮ್ಮ ಓದುಗರಿಗಾಗಿ ಹಂಚಿಕೊಂಡಿದ್ದಾರೆ.


ಸಂದರ್ಶಕರು

**ಎ. ಜ್ಯೋತಿ**

**ಡಿ. ಎ. ವಿಜಯಭಾಸ್ಕರ್**

ಚಿತ್ರಗಳು

**ಸಾತಿ ಸುಂದರೇಶ**


**ಹೊಸತು :** ಎಐಟಿಯುಸಿಯ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿರುವ ತಮಗೆ 'ಹೊಸತು' ಬಳಗದ ಪರವಾಗಿ ಅಭಿನಂದನೆಗಳು. ತಾವು ಕೆಲವು ದಶಕಗಳ ಹಿಂದೆ ಎಐಎಸ್‌ಎಫ್‌ನ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿ ಆನಂತರ ಕಾರ್ಮಿಕ ಚಳವಳಿಗೆ ಪಾದಾರ್ಪಣೆ ಮಾಡಿದಿರಿ. ವಿದ್ಯಾರ್ಥಿ ನಾಯಕಿಯಿಂದ ಕಾರ್ಮಿಕ ನಾಯಕಿಯಾಗಿ ಪರಿವರ್ತನೆ ಹೊಂದಿದ ತಮ್ಮ ಅನುಭವದ ಬಗ್ಗೆ ತಿಳಿಸುವಿರಾ?

**ಅಮರ್‌ಜಿತ್ ಕೌರ್ :** ಧನ್ಯವಾದಗಳು. ನನ್ನ ಪ್ರಕಾರ ಯಾರೇ ಆದರೂ ಚಳವಳಿಗಳಲ್ಲಿ ತೊಡಗಿಸಿಕೊಳ್ಳುವುದಾದರೆ ಅದು ವಿದ್ಯಾರ್ಥಿದೆಸೆಯಲ್ಲಿ ಆರಂಭವಾದರೆ ಒಳ್ಳೆಯದು. ಏಕೆಂದರೆ ಆ ವಯಸ್ಸಿನಲ್ಲಿ ಹೊಸ ಚಿಂತನೆಗಳು, ಕನಸುಗಳು, ಮಹತ್ವಾಕಾಂಕ್ಷೆಗಳು ಮತ್ತು ಚೈತನ್ಯ ಉತ್ತುಂಗದಲ್ಲಿರುತ್ತವೆ. ಅಲ್ಲದೆ, ಸ್ವಹಿತಕ್ಕಿಂತ ಮಿಗಿಲಾಗಿ ಸಮಾಜಕ್ಕೇನಾದರೂ ಒಳ್ಳೆಯದನ್ನು ಮಾಡಬೇಕೆಂಬ ಸಾಮಾಜಿಕ ಕಾಳಜಿ ಮತ್ತು ಕನಸುಗಳನ್ನು ಈ ವಯಸ್ಸು ಹೊತ್ತು

# ರಾಷ್ಟ್ರೀಯ ಪ್ರಮುಖ ಕಾರ್ಮಿಕ ಸಂಘಟನೆಯ ಪ್ರಥಮ ಕಾರ್ಯದರ್ಶಿ

# ಅಮರ್‌ಜಿತ್ ಕೌರ್



ಸಂದರ್ಶನ

ನಿಂತಿರುತ್ತದೆ. ಈ ಕನಸುಗಳನ್ನೇ ಬದುಕಿನಲ್ಲಿ ಮುಂದುವರೆಸಿಕೊಂಡು ಹೋದಲ್ಲಿ ರಾಜಕೀಯ ಚಳವಳಿಯಲ್ಲಿ ತೊಡಗಿಕೊಳ್ಳುವ ಸಾಧ್ಯತೆಗಳು ದಟ್ಟವಾಗಿ ಇರುತ್ತವೆ. ಈ ಕನಸುಗಳೊಂದಿಗೆ ನಾನು ವಿದ್ಯಾರ್ಥಿ ನಾಯಕಿಯಿಂದ ಕಾರ್ಮಿಕ ನಾಯಕಿಯ ಮಟ್ಟಕ್ಕೆ ತಲುಪಿದ್ದೇನೆಂದು ತಿಳಿಸಲು ಬಯಸುತ್ತೇನೆ.

ನನ್ನ ವಿದ್ಯಾರ್ಥಿದೆಸೆಯಲ್ಲೇ ವಿದ್ಯಾರ್ಥಿ ಚಳವಳಿಯಲ್ಲಿ ನಾನು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದೆ. ನನ್ನ ತಂದೆ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಅವರ ಹೆಚ್ಚಿನ ಒಡನಾಟವಿದ್ದಿದ್ದು ಕಾರ್ಮಿಕ ನಾಯಕರು ಮತ್ತು ರಾಜಕೀಯ ಹಿನ್ನೆಲೆಯುಳ್ಳ ಸ್ನೇಹಿತರೊಂದಿಗೆ. ಅವರು ಸೇರಿ ಚರ್ಚಿಸುವಾಗ ಸಾಮಾನ್ಯವಾಗಿ ನಾನೂ ಅವರ ಸಂಗಡ ಇರುತ್ತಿದ್ದೆ. ಇದು ನನ್ನ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರಿತು.

ಮೂರನೆಯದಾಗಿ, ನಾನು ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡುತ್ತಿದ್ದ ಸಂದರ್ಭದಲ್ಲಿ ವಿದ್ಯಾರ್ಥಿ ಚಳವಳಿಯಲ್ಲಿ ಸಕ್ರಿಯವಾಗಿದ್ದಾಗ, ಅಂದರೆ ವಿದ್ಯಾರ್ಥಿ ಸಂಘ, ಚುನಾವಣೆ, ಇತ್ಯಾದಿಗಳೆಂದು ಓಡಾಡುತ್ತಿರುವಾಗ ಸಾಕಷ್ಟು ಪ್ರತಿರೋಧ ಎದುರಿಸಿದೆ. ಏಕೆಂದರೆ ವಿದ್ಯಾರ್ಥಿ ರಾಜಕಾರಣದಲ್ಲಿ ಹೆಣ್ಣುಮಕ್ಕಳು ಕಾಣುತ್ತಿರಲಿಲ್ಲ. ಈ ಕ್ಷೇತ್ರ ಹೆಣ್ಣುಮಕ್ಕಳಿಗೆ ಸೂಕ್ತವಾದದ್ದಲ್ಲವೆಂದೂ ನಾವು ರಾಜಕೀಯ ಚಳವಳಿಗಳಲ್ಲಿ ನಿರತರಾಗುವುದನ್ನು ನಿಲ್ಲಿಸಬೇಕೆಂದು ನನಗೆ ಹೇಳಲಾಗುತ್ತಿತ್ತು. ಅಲ್ಲದೆ, ಸಮಾಜದಲ್ಲಿ ಮಹಿಳೆಗೆ ನಿರ್ದಿಷ್ಟ ಪಾತ್ರವನ್ನು ಕಟ್ಟಿಕೊಟ್ಟು ಮಹಿಳೆ ಮತ್ತು ಪುರುಷರಿಬ್ಬರಿಗೂ ಪ್ರತ್ಯೇಕವಾದ ಮಾದರಿಗಳಿವೆ ಎಂದು ಒತ್ತಿಹೇಳಲಾಗುತ್ತಿತ್ತು. ಇವೆಲ್ಲವೂ ನನಗೆ ರಾಜಕೀಯ ಚಳವಳಿಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಲು ದೃಢಸಂಕಲ್ಪ ಕೈಗೊಳ್ಳುವಂತೆ ಪ್ರೇರಣೆ ನೀಡಿದವು. ಆಗ ನನಗೆ ಅರಿವಾದ ಸತ್ಯವೇನೆಂದರೆ ಯಾರು ನನಗೆ ಹೆಣ್ಣುಮಕ್ಕಳು ರಾಜಕೀಯ ಚಳವಳಿಗಳಲ್ಲಿ ತೊಡಗಿಸಿಕೊಳ್ಳಬಾರದೆಂದು ಉಪದೇಶ ನೀಡುತ್ತಿದ್ದರೋ ಅವರು ಸಂಪ್ರದಾಯವಾದಿ ಧೋರಣೆ ಹೊಂದಿದ ರಾಜಕೀಯ ಸಿದ್ಧಾಂತವುಳ್ಳವರಾಗಿದ್ದರು ಮತ್ತು ಅವರು ಎಬಿವಿಪಿಗೆ ಸೇರಿದವರಾಗಿದ್ದರು. ಹಾಗಾಗಿ ನನ್ನ ಒಲವು ಎಡಪಂಥೀಯ ವಿದ್ಯಾರ್ಥಿ ಚಳವಳಿಯತ್ತ ಹರಿಯಿತು.

ನಾನು ವಿದ್ಯಾರ್ಥಿ ಚಳವಳಿಯಲ್ಲಿ ಸಕ್ರಿಯಳಾಗಿದ್ದಾಗ ನಮ್ಮ ವಿಶ್ವವಿದ್ಯಾನಿಲಯದ ಆವರಣದ ಸುತ್ತ ಕೈಗಾರಿಕಾ ಪ್ರದೇಶವಿತ್ತು. ಬಿರ್ಲಾ, ಡಿಸಿಎಮ್, ಅಯೋಧ್ಯಾ ಮಿಲ್, ಸ್ವತಂತ್ರಭಾರತ್ ಮಿಲ್, ಮುಂತಾದ ಪ್ರಸಿದ್ಧ ಸಿದ್ಧ ಉಡುಪುಗಳ ಕಾರ್ಖಾನೆಗಳು ಅಲ್ಲೇ ಕಾರ್ಯ ನಿರ್ವಹಿಸಿದ್ದವು. ಅಂದು ೫೦,೦೦೦ ಜನರ ದೊಡ್ಡ ಕಾರ್ಮಿಕಶಕ್ತಿ ಆ ಪ್ರದೇಶದಲ್ಲಿತ್ತು. ಕಾರ್ಮಿಕ ಸಂಘಗಳು, ಅದರಲ್ಲೂ ಎಐಟಿಯುಸಿ ಅತ್ಯಂತ ಪ್ರಬಲವಾಗಿ ಬೆಳೆದಿತ್ತು. ಕಾರ್ಮಿಕರು ಹೋರಾಟ ನಡೆಸಿದಾಗಲೆಲ್ಲಾ, ಮುಷ್ಕರ ಹಮ್ಮಿಕೊಂಡಾಗಲೆಲ್ಲಾ ನಾನು ವಿದ್ಯಾರ್ಥಿಗಳನ್ನು ಅಣಿನೆರಿಸಿಕೊಂಡು ಕಾರ್ಮಿಕರ ಹೋರಾಟಕ್ಕೆ ಬೆಂಬಲ ಸೂಚಿಸಲು ಅವರ ಮಿಲ್ ದ್ವಾರಗಳಿಗೆ ತೆರಳುತ್ತಿದ್ದೆ.



*೧೯೮೦ರಲ್ಲಿ ವಿದ್ಯಾರ್ಥಿ ನಾಯಕಿಯಾಗಿದ್ದ ಕೌರ್*

ಈ ಪ್ರಕ್ರಿಯೆ ನಮ್ಮ ಆವರಣದ ಸುತ್ತ ಜರುಗುತ್ತಿದ್ದ ಕಾರ್ಮಿಕ ಚಳವಳಿಯ ಸನಿಹಕ್ಕೆ ನನ್ನನ್ನು ಕರೆದೊಯ್ಯಿತೆಂದೇ ಹೇಳಬಹುದು. ನಮ್ಮ ವಿವಿ ಒಳಗೂ ಕೂಡ ನೌಕರರ ಸಂಘ ಎಐಟಿಯುಸಿಗೆ ಸೇರ್ಪಡೆಯಾಗಿದ್ದರಿಂದ ಎಐಟಿಯುಸಿಯ ಹಲವು ಹಿರಿಯ ನಾಯಕರು ವಿವಿಯ ಆವರಣಕ್ಕೆ ಆಗಾಗ ಭೇಟಿ ನೀಡುತ್ತಿದ್ದರು. ದೆಹಲಿ ವಿವಿದಲ್ಲಿ ನೌಕರರ ಹೋರಾಟ ನಡೆಯುತ್ತಿದ್ದಾಗ ಅವರ ಬೆಂಬಲಾರ್ಥ ನಾವು ವಿದ್ಯಾರ್ಥಿಗಳನ್ನು ಸಂಘಟಿಸುತ್ತಿದ್ದೆವು. ವಿದ್ಯಾರ್ಥಿ– ಶಿಕ್ಷಕ – ನೌಕರರ ಐಕ್ಯತೆಯೇ ನಮ್ಮ ಘೋಷಣೆಯಾಗಿತ್ತು. ಇದಲ್ಲದೆ ಆ ದಿನಗಳಲ್ಲಿ ದೆಹಲಿಯ ಸಾರಿಗೆ ಕಾರ್ಮಿಕರ ಸಂಘ ಬಹಳ ಪ್ರಬಲವಾಗಿತ್ತು ಮತ್ತು ಎಐಟಿಯುಸಿ ಸಕ್ರಿಯವಾಗಿ ಸಾರಿಗೆ ಕಾರ್ಮಿಕರನ್ನು ಸಂಘಟಿಸಿತ್ತು. ಅವರ ಹೋರಾಟಗಳಲ್ಲೂ ನಾನು ವಿದ್ಯಾರ್ಥಿ ನಾಯಕಿಯಾಗಿ ಪಾಲ್ಗೊಳ್ಳುತ್ತಿದ್ದೆ. ಹೀಗೆ ಟೆಕ್ಸ್‌ಟೈಲ್ ಮಿಲ್ ಕಾರ್ಮಿಕರ ಚಳವಳಿ, ವಿ ವಿ ನೌಕರರ ಸಂಘದ ಒಡನಾಟ ಮತ್ತು ಸಾರಿಗೆ ಕಾರ್ಮಿಕರ ಹೋರಾಟಗಳ ಮೂಲಕ ನಾನು ಕಾರ್ಮಿಕ ಸಂಘಟನೆಯ ಕ್ಷೇತ್ರಕ್ಕೆ ಹೆಚ್ಚು ಆಪ್ತಳಾದೆ.

ಮಹಿಳೆಯರು ರಾಜಕೀಯ ಜೀವನದಲ್ಲಿ ಭಾಗಿಯಾಗಬಾರದೆಂದು ನನಗೆ ಹೇಳಿದ್ದರಿಂದ ಮತ್ತು ನನ್ನನ್ನು ಮುಂದೆ ಹೆಜ್ಜೆ ಹಾಕದಂತೆ ತಡೆಯಲು ಯತ್ನಿಸಿದ್ದರಿಂದ ನನ್ನಲ್ಲಿ ತೀಕ್ಷ್ಣವಾದ ಲಿಂಗ ಸಂವೇದನೆ ಮತ್ತು ಲಿಂಗ ಸೂಕ್ಷ್ಮತೆಗಳು ಮನೆ ಮಾಡಿದವು. ಈ ನಿರ್ಬಂಧ ಕೇವಲ ಕ್ಯಾಂಪಸ್‌ನಲ್ಲಿ ಮಾತ್ರವಾಗಿರಲಿಲ್ಲ; ಕ್ಯಾಂಪಸ್‌ನಿಂದ ಹೊರಗಡೆ ಮೊಹಲ್ಲಾಗಳಲ್ಲಿ, ಸಮಾಜದ ಎಲ್ಲಾ ಸ್ತರಗಳಲ್ಲೂ, ಎಲ್ಲಾ ಜಾಗಗಳಲ್ಲೂ ಇದು ಜಾರಿಯಲ್ಲಿತ್ತು. ಜನ ನನ್ನ ತಾಯಿಗೆ ಹೇಳುತ್ತಿದ್ದರು, "ಈ ಕ್ಷೇತ್ರ ಹೆಣ್ಣುಮಕ್ಕಳಿಗಲ್ಲ, ನಿನ್ನ ಮಗಳು ಇಲ್ಲಿ ಬರುವ ಅಗತ್ಯವಿಲ್ಲ. ಇದು ಹುಡುಗರಿಗೆ ಮೀಸಲಿರುವ ಜಾಗ" ಎಂದು. ಆಗ ನಾನು ಮತ್ತಷ್ಟು ದೃಢವಾಗಲಾರಂಭಿಸಿದೆ. ಹೆಣ್ಣು ಗಂಡು ಸಮಾನವಾಗಿರುವಾಗ ಈ ಸಮಾಜ ಹೆಣ್ಣಿನ ಮೇಲೆ ಏಕೆ ನಿರ್ಬಂಧಗಳನ್ನು ಹೇರುತ್ತಿದೆ ಎಂಬುದರ ಬಗ್ಗೆ ತೀವ್ರವಾಗಿ ಆಲೋಚಿಸಲು ಶುರು ಮಾಡಿದೆ; ಸಮಾಜವು ಮಹಿಳೆಯನ್ನು ಕೆಲವು ಕೆಲಸಗಳಿಗೆ ಸೀಮಿತಗೊಳಿಸಿ ಮಾದರಿ ಪಾತ್ರಧಾರಿಯನ್ನಾಗಿ ನೋಡಲು ಸದಾ ಬಯಸುತ್ತದೇಕೆ ಎಂಬ ಹಲವು ಪ್ರಶ್ನೆಗಳೂ ನನ್ನಲ್ಲಿ ಗಂಭೀರವಾಗಿ ಕಾಡಿದವು. ಹೀಗೆ ಲಿಂಗತ್ವ ಸೂಕ್ಷ್ಮತೆ ಅಂತರ್ಗತವಾಗಿದ್ದ ನನ್ನಲ್ಲಿ ಮಹಿಳಾಪರ ಹಕ್ಕುಗಳಿಗಾಗಿ ಹೋರಾಡುವುದರ ಜೊತೆಜೊತೆಗೆ ಕಾರ್ಮಿಕರ ಹಕ್ಕುಗಳ ಕುರಿತು, ಕಾರ್ಮಿಕ ಸಂಘಟನೆಯಲ್ಲಿ ಹೆಚ್ಚು ಆಸಕ್ತಿ ಮೂಡಿತು. ನನ್ನೊಳಗೆ ಕಾರ್ಮಿಕ ವರ್ಗದ ಬಗ್ಗೆ ಅನುಭೂತಿ ಮತ್ತು ಸಹಾನುಭೂತಿ ಬೆಳೆದು ಕಾರ್ಮಿಕ ಚಳವಳಿ ನನ್ನನ್ನು ಸೆಳೆದುಕೊಂಡಿತು. ಅಲ್ಲಿಂದ ಆರಂಭವಾದ ಕಾರ್ಮಿಕ ವರ್ಗದೊಂದಿಗಿನ ನನ್ನ ಪಯಣ ನಿಲುಗಡೆ ಕಾಣದೆ ಇಂದು ಈ ಹಂತ ತಲುಪಿದೆ.

ದೆಹಲಿ ರಾಜ್ಯದಲ್ಲಿ ಎಐಎಸ್‌ಎಫ್‌ನಲ್ಲಿ ೯ ವರ್ಷಗಳ ಕಾಲ, ಸುಮಾರು ೭ ವರ್ಷಗಳು ಎಐಎಸ್‌ಎಫ್‌ನ ಪ್ರಧಾನ ಕಾರ್ಯದರ್ಶಿಯಾಗಿ ರಾಷ್ಟ್ರೀಯ ನಾಯಕತ್ವದಲ್ಲಿ, ೭ ವರ್ಷಗಳಿಗೂ ಮೀರಿ ದೆಹಲಿ ರಾಜ್ಯದ ಎನ್‌ಎಫ್‌ಐಡಬ್ಲ್ಯು ನಾಯಕತ್ವ, (ಆಗಲೂ ನಾನು ದೆಹಲಿ ರಾಜ್ಯ ಎಐಟಿಯುಸಿಯಲ್ಲಿ ಸಕ್ರಿಯವಾಗಿಯೇ ಇದ್ದೆ), ೧೯೯೪ಳ ಪಾಟ್ನಾ ರಾಷ್ಟ್ರೀಯ ಸಮ್ಮೇಳನದಲ್ಲಿ ರಾಷ್ಟ್ರೀಯ ಕಾರ್ಯದರ್ಶಿಯಾಗಿ ಬಡ್ತಿ (ಎನ್‌ಎಫ್‌ಐಡಬ್ಲ್ಯುನ ರಾಷ್ಟ್ರೀಯ ಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಣೆ), ೧೯೯೯–೨೦೦೨ ಅವಧಿಯಲ್ಲಿ ಎನ್‌ಎಫ್‌ಐಡಬ್ಲ್ಯುನ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಬೇಕಾಗಿ ಬಂದಿತು. ಆಗಲೂ ಎಐಟಿಯುಸಿ ಕೆಲಸವನ್ನು ಜೊತೆಯಲ್ಲೇ ನಿರ್ವಹಿಸುತ್ತಿದ್ದೆ. ೨೦೦೨ ನಂತರ ಸಂಪೂರ್ಣವಾಗಿ ಎಐಟಿಯುಸಿಯಲ್ಲಿ ತೊಡಗಿದೆ. ಈಗ ಡಿಸೆಂಬರ್ ೨೦೧೭ರಲ್ಲಿ ಪ್ರಧಾನ ಕಾರ್ಯದರ್ಶಿಯ ಜವಾಬ್ದಾರಿಯನ್ನು ನನಗೆ ನೀಡಲಾಗಿದೆ. ಹಲವು ತಿರುವುಗಳನ್ನೊಳಗೊಂಡ, ನಡುವೆ ಹತ್ತಾರು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗಿ ಬಂದ ಇದು ನನ್ನ ಬಹುದೊಡ್ಡ ಪಯಣವೆಂದೇ ಹೇಳಬಹುದು. ಆದರೆ ಕಾರ್ಮಿಕ ಚಳವಳಿ ನನ್ನ ಪ್ರಥಮ ಪ್ರೇಮವೆಂದೇ ಹೇಳಬಯಸುವೆ. ವಿದ್ಯಾರ್ಥಿ ಚಳವಳಿ ನನಗೆ ಮುನ್ನೋಟ ನೀಡಿ ದಿಕ್ಕು ತೋರಿಸಿದ್ದೇನೋ ನಿಜ. ಆದರೆ ವಿದ್ಯಾರ್ಥಿದೆಸೆಯ ನಂತರ ಏನು ಮತ್ತು ನನ್ನ ಜವಾಬ್ದಾರಿಯನ್ನು ನಿರ್ವಹಿಸುವ ಕ್ಷೇತ್ರವಾವುದು ಎಂಬ ಪ್ರಶ್ನೆ ಉದ್ಭವಿಸಿದಾಗ ಕಾರ್ಮಿಕ ಚಳವಳಿ ನನ್ನ ಮೊದಲ ಆದ್ಯತೆಯಾಯಿತು.

**ಹೊಸತು** : ದೇಶದ ಕಾರ್ಮಿಕ ಚಳವಳಿಯೊಳಗಿನ ಮಹಿಳಾ ಪಾಲ್ಗೊಳ್ಳುವಿಕೆಯಲ್ಲಿ ಏನಾದರೂ ಸುಧಾರಣೆ ಕಾಣಲು ಸಾಧ್ಯವಾಗಿದೆಯೆ?

**ಅಮರ್‌ಜಿತ್ ಕೌರ್** : ಖಂಡಿತವಾಗಿಯೂ ಹೌದು. ನನ್ನ ವಿದ್ಯಾರ್ಥಿದೆಸೆಯ ನಂತರದ ದಿನಗಳಲ್ಲಿ

ಹಲವು ಯುವತಿಯರು ವಿದ್ಯಾರ್ಥಿ ಚಳವಳಿಯಲ್ಲಿ, ವಿದ್ಯಾರ್ಥಿ ರಾಜಕಾರಣದಲ್ಲಿ ಹೆಜ್ಜೆ ಇಟ್ಟಿದ್ದನ್ನು ಕಾಣಬಹುದು. ನಾವು ವಿದ್ಯಾರ್ಥಿನಿಯರಾಗಿದ್ದಾಗ ಕೆಲವೇ ಕೆಲವು ಹೆಣ್ಣು ಮಕ್ಕಳು ನಾವು ವಿದ್ಯಾರ್ಥಿ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದೆವು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಸಾಕಷ್ಟು ಯುವತಿಯರು ವಿದ್ಯಾರ್ಥಿ ನಾಯಕಿಯರಾಗಿ ಹೊರ ಹೊಮ್ಮುತ್ತಿರುವುದನ್ನು ನಾವೇ ನೋಡಬಹುದು. ಮಹಿಳಾ ಚಳವಳಿಯೂ ಬೆಳೆಯುತ್ತಿದೆ. ಇಂದಿಗೂ ಸಮಾಜ ಮಹಿಳೆಯನ್ನು ಕೃಷಿಕಳನ್ನಾಗಿ ಗುರುತಿಸದಿದ್ದರೂ ರೈತ ಚಳವಳಿಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಿದೆ. ರೈತರ ಆತ್ಮಹತ್ಯೆಗಳಾದಂತಹ ಸಂದರ್ಭದಲ್ಲೂ ಸರ್ಕಾರವಾಗಲೀ ಆಡಳಿತಯಂತ್ರವಾಗಲೀ ಕುಟುಂಬದ ನೊಗ ಹೊತ್ತ ರೈತ ಮಹಿಳೆಗೆ ಮನ್ನಣೆ ನೀಡುವ ಕೆಲಸ ಮಾಡುತ್ತಿಲ್ಲ. ಆದರೂ ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ, ಮಹಿಳೆಯರು ರೈತ ಚಳವಳಿಯ ಮುಂಚೂಣಿಯಲ್ಲೂ ಇದ್ದಾರೆ ಎಂಬುದು ನಿಜ. ಅದೇ ರೀತಿ ಕಾರ್ಮಿಕ ಸಂಘಟನೆಗಳಲ್ಲೂ ಮಹಿಳೆಯರು ಬಹುಪಾಲು ಅಸಂಘಟಿತ ಮತ್ತು ಅಸಾಂಪ್ರದಾಯಿಕ ಕ್ಷೇತ್ರಗಳಲ್ಲಿ ದುಡಿಯು ತ್ತಿದ್ದಾರೆ. ಸಂಘಟಿತ ಕ್ಷೇತ್ರದಲ್ಲಿರುವ ಮಹಿಳೆಯರ ಪ್ರಮಾಣ ಕಡಿಮೆಯೇ. ಈಗ ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆರಡರಲ್ಲೂ ಮಹಿಳೆಯರ ಪಾಲ್ಗೊಳ್ಳುವಿಕೆ ಹೆಚ್ಚಿದೆ.

ಆದರೆ ಇದರ ಜೊತೆಜೊತೆಗೇ ಬಹಳ ಮುಖ್ಯವಾಗಿ ಯಾವ ಕೆಲಸ ಜರೂರಾಗಿ ಆಗಬೇಕಿತ್ತೋ ಅದು ಆಗುತ್ತಿಲ್ಲ ಎಂಬುದು ದುಃಖದ ವಿಚಾರ. ಮಹಿಳೆಯರ ಪಾಲ್ಗೊಳ್ಳುವಿಕೆಯ ಜೊತೆ ಅವರು ಕಾರ್ಮಿಕ ಸಂಘಟನೆಗಳ, ರೈತ ಸಂಘಗಳ ನಾಯಕತ್ವಕ್ಕೆ ಬರುವ ಪ್ರಕ್ರಿಯೆ ನಡೆಯುತ್ತಿಲ್ಲ. ಈ ವಿಚಾರದಲ್ಲಿ ನಮ್ಮ ಸಮಾಜ ಇನ್ನೂ ಹಿಂದುಳಿದಿದೆ. ಮಹಿಳೆಯ ಮೇಲೆ ಹತ್ತು ಹಲವು ನಿರ್ಬಂಧಗಳನ್ನು ಹೇರಲಾಗಿದೆ. ಹೆಣ್ಣಾಗಿರುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ. ಏಕೆಂದರೆ ಪದೇಪದೇ ಅವಳ ಮೇಲೆ ಸಮಾಜದ ಮೂಲಕ "ಸಿದ್ಧ ಮಾದರಿ"ಗಳ ರಾಜಕಾರಣವನ್ನು ಹೇರಲಾಗುತ್ತದೆ. ಅಷ್ಟೇ ಏಕೆ, ಚಳವಳಿಯ ನಾಯಕತ್ವ ನೀಡುವವರೂ ಸಹ ಮಹಿಳೆಯರ ಕುರಿತು ಪಾಳೆಯಗಾರಿ ಧೋರಣೆಯನ್ನು ಮುಂದುವರಿಸುತ್ತಾರೆ. ಈ ಸಮಸ್ಯೆ ರಾಜಕೀಯ ಚಳವಳಿ ಸೇರಿದಂತೆ ಎಲ್ಲಾ ಚಳವಳಿಗಳಲ್ಲೂ ಇದ್ದೇ ಇದೆ. ಈ ಜಾಡ್ಯ ಕಾರ್ಮಿಕ ಸಂಘಟನೆಗಳನ್ನೂ ಬಿಟ್ಟಿಲ್ಲ. ನಾನು ಇದನ್ನು ನೋವಿನಿಂದಲೇ ಒಪ್ಪಿಕೊಳ್ಳಬೇಕು. ಮಹಿಳೆಯರೂ ಸಹ ದಿಟ್ಟ ಹೋರಾಟಗಾರ್ತಿಯರಾಗಿ, ಉತ್ತಮ ಸಂಘಟಕಿಯರಾಗಿ ಕಾರ್ಮಿಕ ಸಂಘಟನೆಯ ನಾಯಕತ್ವ ನೀಡಬಲ್ಲರು, ಜವಾಬ್ದಾರಿ ನಿರ್ವಹಿಸಬಲ್ಲರು ಎಂಬುದನ್ನು ಪುರುಷ ಸಹೋದ್ಯೋಗಿಗಳಿಗೆ ಮನವರಿಕೆ ಮಾಡಿಸುವುದು ಅತ್ಯಂತ ಕಷ್ಟಕರ.



## ಧೀಮಂತ ರೈತ ಹೋರಾಟಗಾರ ಕೆ. ಎಸ್. ಪುಟ್ಟಣ್ಣಯ್ಯ ಅವರಿಗೆ ನೋವಿನ ನಮನ

ರೈತ ಹೋರಾಟಗಾರ, ಕರ್ನಾಟಕ ಶಾಸನ ಸಭೆಯಲ್ಲಿ ರೈತ, ದುಡಿವ ವರ್ಗದ ಪರವಾಗಿ ಏಕೈಕ ಧ್ವನಿಯಾಗಿದ್ದ ಶಾಸಕ ಕೆ. ಎಸ್. ಪುಟ್ಟಣ್ಣಯ್ಯ ನಿಧನರಾಗಿದ್ದಾರೆ. ಪ್ರೊ॥ ನಂಜುಂಡಸ್ವಾಮಿಯವರ ನಂತರ ಅವರ ಗರಡಿಯಲ್ಲಿಯೇ ಬೆಳೆದುಬಂದಿದ್ದ ಪುಟ್ಟಣ್ಣಯ್ಯ ರೈತರ ಕುರಿತು ಅಪಾರ ಕಾಳಜಿ ಹೊಂದಿದ್ದರು. ಎರಡು ಬಾರಿ ಶಾಸಕರಾಗಿ ಆಯ್ಕೆ ಆಗಿದ್ದ ಇವರು ಶಾಸನ ಸಭೆಯ ಒಳಗೂ ಹೊರಗೂ ಹೋರಾಟಗಾರರಾಗಿಯೇ ಗುರ್ತಿಸಿಕೊಂಡಿದ್ದರು. ಸಮಾಜವಾದಿ ಚಳುವಳಿಯ ಹಿನ್ನೆಲೆಯ ಪುಟ್ಟಣ್ಣಯ್ಯ ರೈತರ, ಬಡವರ ಸಮಸ್ಯೆಗಳನ್ನು ತಮ್ಮದೇ ಆದ ಶೈಲಿಯಲ್ಲಿ ಪ್ರಸ್ತುತಪಡಿಸುತ್ತಿದ್ದರು. ಕರ್ನಾಟಕ ರೈತ ಚಳುವಳಿ ಛಿದ್ರವಾಗಿರುವ ಇಂದಿನ ಸಂದರ್ಭದಲ್ಲಿ ರೈತ ಹೋರಾಟಗಾರರನ್ನೆಲ್ಲ ಒಟ್ಟುಗೂಡಿಸಿಕೊಂಡು ಕೇವಲ ಚಳುವಳಿಗೆ ಸೀಮಿತವಾಗದೇ ಅದಕ್ಕೊಂದು ಜನಪರ ರಾಜಕೀಯ ಆಯಾಮ ಕೊಡುವ ನಿಟ್ಟಿನಲ್ಲಿ ಶ್ರಮಿಸುತ್ತಿದ್ದರು. ಚಿಂತಕ ದೇವನೂರ ಮಹಾದೇವ ಅವರ ಜೊತೆಗೂಡಿ ರೈತ ದಲಿತ ಚಳುವಳಿಗಾರರನ್ನು ಸೇರಿಸಿ ಸರ್ವೋದಯ ಕರ್ನಾಟಕ ಪಕ್ಷ ಆರಂಭಿಸಿದರು. ಕಳೆದ ೨೦೧೩ರ ಚುನಾವಣೆಯಲ್ಲಿ ಅತ್ಯಂತ ಕ್ಲಿಷ್ಟ ಪರಿಸ್ಥಿತಿಯಲ್ಲಿಯೂ ಮೇಲುಕೋಟೆ ಕ್ಷೇತ್ರದಿಂದ ಕಾಂಗ್ರೆಸ್, ಜೆ.ಡಿ.ಎಸ್.ನ ಪ್ರಬಲ ಎದುರಾಳಿಗಳನ್ನು ಸೋಲಿಸಿ ಆಯ್ಕೆಯಾದರು. ಕಳೆದ ಎರಡು ವರ್ಷಗಳಿಂದ ಜನಪರ ಚಳುವಳಿಗಳ ನಾಯಕರನ್ನು ಸಂಪರ್ಕಿಸಿ ಕಾಂಗ್ರೆಸ್, ಜನತಾದಳ, ಬಿ.ಜೆ.ಪಿ.ಗೆ ಪರ್ಯಾಯವಾಗಿ ಒಂದು ರಾಜಕೀಯ ಮೈತ್ರಿಕೂಟ ರಚಿಸಲು ಯತ್ನಿಸಿದರು. ಇತ್ತೀಚೆಗೆ ಸರ್ವೋದಯ ಕರ್ನಾಟಕ ಪಕ್ಷವನ್ನು ಯೋಗೇಂದ್ರ ಯಾದವ ಅವರ ಸ್ವರಾಜ್ ಇಂಡಿಯಾ ಪಕ್ಷದಲ್ಲಿ ಸೇರಿಸಿ ರಾಷ್ಟ್ರೀಯ ಜಾಲದ ಭಾಗವಾದರು. ಕರ್ನಾಟಕಕ್ಕೊಂದು ಚಳುವಳಿಯ ರಾಜಕಾರಣದ ಪರ್ಯಾಯದ ಅವಶ್ಯಕತೆಯನ್ನು ಮನಗಂಡ ಪುಟ್ಟಣ್ಣಯ್ಯನವರು, ದೇವನೂರ ಮಹಾದೇವ, ಎಸ್. ಆರ್. ಹಿರೇಮಠ ಮುಂತಾದ ಗೆಳೆಯರ ಜೊತೆಗೂಡಿ ಜನಾಂದೋಲನಗಳ ಮಹಾಮೈತ್ರಿ ಎಂಬ ವೇದಿಕೆ ಆರಂಭಿಸಿದರು. ಎಡಪಕ್ಷಗಳು, ರೈತ, ದಲಿತ ಸಂಘಟನೆಗಳು ಇತರೆ ಜಾತ್ಯತೀತ, ಪ್ರಜಾಸತ್ತಾತ್ಮಕ ರಾಜಕೀಯ ಪಕ್ಷಗಳು, ಗುಂಪುಗಳು ಒಂದೆಡೆ ಸೇರಿ ಈ ಸಲದ ಚುನಾವಣೆಯನ್ನು ಎದುರಿಸಬೇಕು, ಒಂದು ಚಳುವಳಿಯಾಗಿ ಬೆಳೆಯಬೇಕು ಎಂಬುದು ಅವರ ಕನಸಾಗಿತ್ತು. ಇಂಥ ಕನಸನ್ನು ಸಾಕಾರಗೊಳಿಸಲು ಶ್ರಮಿಸುತ್ತಿರುವಾಗಲೇ ೧೮.೦೨.೨೦೧೮ರಂದು ಹೃದಯಾಘಾತದಿಂದ ನಿಧನರಾದರು.

ಸದಾ ನಗುಮೊಗದ, ಮುಖವಾಡವಿಲ್ಲದ ಸಹೃದಯಿ, ಸ್ನೇಹಜೀವಿ ಪುಟ್ಟಣ್ಣಯ್ಯ. ಪ್ರೊ॥ ನಂಜುಂಡಸ್ವಾಮಿಯವರು ತಮ್ಮ ಬೌದ್ಧಿಕತೆ, ಆಳವಾದ ಅಧ್ಯಯನದಿಂದ ತಮ್ಮ ವಿಚಾರಗಳನ್ನು ಮಂಡಿಸುತ್ತಿದ್ದರೆ, ಪುಟ್ಟಣ್ಣಯ್ಯ ತನ್ನ ಅನುಭವಗಳನ್ನು ಜನಭಾಷೆಯ ಮೂಲಕ ಜನಮನಕ್ಕೆ ಪರಿಣಾಮಕಾರಿಯಾಗಿ ತಲುಪಿಸುವ ಕೌಶಲ್ಯವನ್ನು ಹೊಂದಿದ್ದರು. ಶಾಸಕರ ಭವನದ ಅವರ ಕೊಠಡಿ ಸದಾ ರೈತ, ದಲಿತ, ಜನಪರ ಹೋರಾಟಗಾರರಿಂದ ತುಂಬಿ ತುಳುಕುತ್ತಿತ್ತು. ರಾಜ್ಯದ ರೈತರ ಕುರಿತು ದೊಡ್ಡ ಕನಸುಗಳನ್ನು ಕಟ್ಟಿಕೊಂಡಿದ್ದ ಪುಟ್ಟಣ್ಣಯ್ಯ ತಮ್ಮ ೬೮ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಹಲವಾರು ಕನಸುಗಳನ್ನು ಬಿಟ್ಟುಹೋಗಿದ್ದಾರೆ. ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿ ಅವರ ಕುಟುಂಬಕ್ಕೆ ಸಿಗಲಿ, ಅವರ ಆಶಯಗಳನ್ನು ಮುಂದುವರೆಸಿಕೊಂಡು ಹೋಗುವ ಶಕ್ತಿ ಅವರ ಸಂಘಟನೆಯ ಕಾರ್ಯಕರ್ತರಿಗೆ ಬರಲಿ ಎಂದು 'ಹೊಸತು' ಬಳಗ ಪುಟ್ಟಣ್ಣಯ್ಯನವರಿಗೆ ನೋವಿನ ನಮನ ಸಲ್ಲಿಸುತ್ತದೆ.

– *ಸಂಪಾದಕ*

ಮಹಿಳೆಯರ ಬಗ್ಗೆ ಒಂದು ಬಗೆಯ ಅನುಮಾನ ಇದ್ದೇ ಇದೆ. ಹಾಗಾಗೇ ೧೯೯೬ರಿಂದ ಈವರೆಗೂ ೨೦ ವರ್ಷಗಳು ಕಳೆದರೂ ಮಹಿಳಾ ಮೀಸಲಾತಿ ಮಸೂದೆ ಸಂಸತ್ತಿನ ಅನುಮೋದನೆಗೊಳಗಾಗದೆ ಗಾಳಿಯಲ್ಲಿ ತೇಲಾಡುತ್ತಿದೆ! ಸಂಸತ್ತಿನಲ್ಲಿ ಮತ್ತು ರಾಜ್ಯ ಶಾಸನಸಭೆಗಳಲ್ಲಿ ಮಹಿಳೆಯರಿಗೆ ಶೇ. ೩೩ರಷ್ಟು ಪ್ರಾತಿನಿಧ್ಯ ನೀಡುವ ಈ ಮಸೂದೆ ಜಾರಿಯಾದರೆ ಅಧಿಕಾರಕೇಂದ್ರಗಳಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತದೆ ಎಂಬ ಆತಂಕ ಅವರನ್ನಾವರಿಸಿದೆ.

ಮಹಿಳೆಯರ ಮೇಲೆ ಸಮಾಜ ವಿಧಿಸಿರುವ ಸಾಂಸ್ಕೃತಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳು, ಕೌಟುಂಬಿಕ ಗಡಿರೇಖೆಗಳು, "ಸಿದ್ಧ ಮಾದರಿಯ" ಪ್ರಶ್ನೆ, ಇವೇ ಮುಂತಾದವುಗಳು ಮಹಿಳೆಯರು ನಾಯಕತ್ವ ವಹಿಸಿಕೊಳ್ಳಲು ಇರುವ ಅಡ್ಡಿಆತಂಕಗಳೆಂದು ಹೇಳಬಹುದು. ಮಹಿಳೆ ನಾಯಕಿಯಾಗಿ ಜವಾಬ್ದಾರಿ ನಿರ್ವಹಿಸಲು ದ್ವಿಮುಖ ಸಮಸ್ಯೆಗಳು ಎದುರಾಗುತ್ತವೆ. ಕೆಲವೊಮ್ಮೆ ಕುಟುಂಬ ಹಿಂದೇಟು ಹಾಕುತ್ತದೆ. ಇಂತಹ ಸಂದರ್ಭಗಳಲ್ಲಿ ಮಹಿಳೆಯರು ಆತ್ಮವಿಶ್ವಾಸ ಕಳೆದುಕೊಳ್ಳುತ್ತಾರೆ. ಮತ್ತೊಂದೆಡೆ ಕೆಲವೊಮ್ಮೆ ಪುರುಷ ನಾಯಕತ್ವ ಮಹಿಳೆಯರನ್ನು ನಾಯಕಸ್ಥಾನದಲ್ಲಿ ನೋಡಲು ಪ್ರತಿರೋಧ ವ್ಯಕ್ತಪಡಿಸುತ್ತದೆ.

ಕಾರ್ಮಿಕ ಸಂಘಟನೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಖಂಡಿತವಾಗಿಯೂ ಹೆಚ್ಚಾಗಿದೆ; ಮಹಿಳೆಯರು ಧರಣಿಗಳಲ್ಲಿ, ಹೋರಾಟಗಳಲ್ಲಿ, ಮೆರವಣಿಗೆಗಳಲ್ಲಿ, ಪ್ರತಿಭಟನೆಗಳಲ್ಲಿ ಬಾವುಟ ಹಿಡಿದು ಘೋಷಣೆ ಮೊಳಗಿಸುವುದೇನೋ ಅಧಿಕಗೊಂಡಿದೆ. ಆದರೆ ಮಹಿಳೆಯರು ನಾಯಕತ್ವದಲ್ಲಿ ಯಾವ ಪ್ರಮಾಣದಲ್ಲಿರಬೇಕಿತ್ತೋ ಅದು ನೆರವೇರಿಲ್ಲ. ಕಾರ್ಮಿಕ ಸಂಘಟನೆಗಳ ನಾಯಕಸ್ಥಾನದಲ್ಲಿರುವ ಮಹಿಳೆಯರಾಗಲೀ ಪುರುಷರಾಗಲೀ ನಾಯಕತ್ವಕ್ಕೆ ಹೆಚ್ಚುಹೆಚ್ಚು ಮಹಿಳೆಯರು ಬರುವಂತೆ ಪ್ರೋತ್ಸಾಹಿಸಬೇಕು, ಕ್ರಮ ಕೈಗೊಳ್ಳಬೇಕು. ಮಹಿಳೆಯರನ್ನು ನಾಯಕತ್ವಕ್ಕೆ ತರುವಂತಹ ಜವಾಬ್ದಾರಿ ಮತ್ತು ಕರ್ತವ್ಯ ಟ್ರೇಡ್ ಯೂನಿಯನ್‌ಗಳ ನಾಯಕತ್ವಕ್ಕಿರುತ್ತದೆ. ಒಮ್ಮೊಮ್ಮೆ ಇದನ್ನು ಒತ್ತಾಯಪೂರ್ವಕವಾಗಿಯೂ ಕಾರ್ಯರೂಪಕ್ಕೆ ತರುವ ಅನಿವಾರ್ಯತೆ ಇರುತ್ತದೆ. ನನಗೆ ನೆನಪಿದೆ, ೧೯೯೫ರಲ್ಲಿ ಮೊದಲ ಬಾರಿಗೆ ರಾಷ್ಟ್ರೀಯ ನಾಯಕತ್ವಕ್ಕೆ ಆಯ್ಕೆಯಾದ ನಂತರ ೧೯೯೬ರಲ್ಲಿ ನಡೆದ ರಾಷ್ಟ್ರೀಯ ಸಾಮಾನ್ಯ ಸಭೆಯಲ್ಲಿ ಎಲ್ಲಾ ಕ್ಷೇತ್ರಗಳ ಕಾರ್ಮಿಕ ನಾಯಕರಿಗೆ ಒಂದು ಸವಾಲೆಸೆದಿದ್ದೆ. ನೋಡೋಣ, ನಿಮ್ಮ ನಿಮ್ಮ ಕಾರ್ಯಕ್ಷೇತ್ರಗಳಲ್ಲಿ ಯಾರೆಲ್ಲಾ ಮಹಿಳೆಯರನ್ನು ಕಾರ್ಮಿಕ ಚಳವಳಿಯೊಳಗೆ ಮತ್ತು ನಾಯಕತ್ವದೊಳಗೆ ಹೆಚ್ಚು ತೊಡಗಿಸಲು ಯತ್ನಿಸುತ್ತೀರಿ ಎಂದು. ಆಗ ಈ ಸವಾಲನ್ನು ಮೊದಲು ಸ್ವೀಕರಿಸಿದ್ದು ಬ್ಯಾಂಕ್ ನೌಕರರ ಸಂಘಟನೆ. ಎಐಬಿಇಎ ಮುಖಂಡರಾಗಿದ್ದ ಕಾಮ್ರೇಡ್ ತಾರಕೇಶ್ವರ್ ಚಕ್ರವರ್ತಿಯವರು ಬಂದು, "ನಿಮ್ಮ ಸವಾಲನ್ನು ಸ್ವೀಕರಿಸಲು ನಾವು ತಯಾರಿದ್ದೇವೆ, ಹೇಳಿ, ನಾನೇನು ಮಾಡಲಿ" ಎಂದು ಪ್ರೀತಿಯಿಂದ ಕೇಳಿದರು. "ಸರಿ, ಬ್ಯಾಂಕ್‌ಗಳಲ್ಲಿ ದುಡಿಯುತ್ತಿರುವ ಮಹಿಳಾ ಉದ್ಯೋಗಿಗಳ ಒಂದು ದಿನದ ರಾಷ್ಟ್ರೀಯ ಸಮಾವೇಶ ಹಮ್ಮಿಕೊಳ್ಳಿ; ಅಲ್ಲಿ ಅವರು ಮನಬಿಚ್ಚಿ ಮಾತನಾಡಲು ಸಾಧ್ಯವಾಗುತ್ತದೆ, ಅಲ್ಲಿ ಮಾತನಾಡುವುದನ್ನು ಕಲಿಯುತ್ತಾರೆ, ಬ್ಯಾಂಕಿಂಗ್ ಉದ್ಯಮದ ಬಗ್ಗೆ ಹೆಚ್ಚು ತಿಳುವಳಿಕೆ ಪಡೆಯುತ್ತಾರೆ. ಮಹಿಳಾ ನೌಕರರಲ್ಲಿ ವಿಶ್ವಾಸ ಮೂಡಿಸಿ, ನಿಮ್ಮ ಕಾರ್ಯಕಾರಿ ಸಮಿತಿಯಲ್ಲಿ ಮತ್ತು ನಿಮ್ಮ ರಾಷ್ಟ್ರೀಯ ಸಮಿತಿಗಳಲ್ಲಿ ಅವರಿಗೆ ಪ್ರಾತಿನಿಧ್ಯ ನೀಡಿ. ಆಗ ನೋಡಿ, ಹೇಗೆ ಬದಲಾವಣೆ ಕಾಣುತ್ತೀರಿ ಎಂದು" ಎಂದು ನಾನು ಹೇಳಿದೆ. ಎಐಬಿಇಎ ನಾಯಕತ್ವ ಅದನ್ನು ಅನುಸರಿಸಿತು. ೧೯೯೬ರಲ್ಲಿಯೇ ಮೊದಲ ಬಾರಿಗೆ ರಾಷ್ಟ್ರೀಯ ಮಹಿಳಾ ನೌಕರರ ಸಮಾವೇಶವನ್ನು ಆಯೋಜಿಸಿತು. ಅದನ್ನು ನಾಮಕಾವಾಸ್ತೆ ನಡೆಸಬಾರದೆಂದು ಇಂತಹ ಸಮಾವೇಶಗಳನ್ನು ರಾಜ್ಯ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಮತ್ತು ಬ್ಯಾಂಕ್ ಮಟ್ಟದಲ್ಲೂ ಹಮ್ಮಿಕೊಳ್ಳಬೇಕೆಂದು ನಾನು ಸೂಚಿಸಿದೆ. ೧೯೯೬ರಲ್ಲಿ ಆರಂಭವಾದ ಈ ಪ್ರಯೋಗದ ಪರಿಣಾಮ ಇಂದು ಸಹಸ್ರಾರು ಮಹಿಳೆಯರು ಬ್ಯಾಂಕಿಂಗ್ ಕ್ಷೇತ್ರದ ಕಾರ್ಮಿಕ ಚಳವಳಿಯ ಮೂಲಕ ತರಬೇತಿ ಪಡೆದಿರುತ್ತಾರೆ. ಅಲ್ಲದೆ, ಈಗ ನೂರಾರು ಮಹಿಳೆಯರು ರಾಜ್ಯ ಅಥವಾ ಬ್ಯಾಂಕ್ ಮಟ್ಟದ ಕಾರ್ಮಿಕ ಸಂಘದ ನಾಯಕತ್ವವನ್ನು ನಿರ್ವಹಿಸುತ್ತಿದ್ದಾರೆ. ಎಐಟಿಯುಸಿ ನಾಯಕತ್ವದ ಸೂಚನೆಯನ್ನು ಜಾರಿಗೊಳಿಸಿ ಎಐಬಿಇಎ ನಾಯಕರು ಒಂದು ವಿಧಾನವನ್ನು ಅನುಸರಿಸಿದರು. ಅವರ ಪ್ರಜ್ಞಾಪೂರ್ವಕ ಪ್ರಯತ್ನದಿಂದ ಈ ಬದಲಾವಣೆ ಸಾಧ್ಯವಾಗಿದೆ ಎಂದು ಹೇಳಬಯಸುತ್ತೇನೆ.

೧೯೯೭ರಲ್ಲಿ ನಮ್ಮ ರಾಷ್ಟ್ರೀಯ ಕಾರ್ಯದರ್ಶಿ ಮಂಡಳಿಯಲ್ಲಿ ಒಂದು ನಿರ್ಣಯ ಕೈಗೊಂಡೆವು. ಜನರಲ್ ಕೌನ್ಸಿಲ್‌ನ ಸ್ಥಾನಗಳನ್ನು ಭರ್ತಿ ಮಾಡುವಾಗ ಅದರಲ್ಲಿ ಮಹಿಳೆಯರ ಹೆಸರುಗಳೂ ಇರಬೇಕೆಂದು ನಾವು ಎಲ್ಲಾ ರಾಜ್ಯ ಸಮಿತಿಗಳಿಗೂ ಹಾಗೂ ಎಲ್ಲಾ ಕಾರ್ಮಿಕ ಸಂಘಗಳಿಗೂ ಸೂಚನೆ ನೀಡಿದೆವು. ಅಲ್ಲದೆ, ಮಹಿಳೆಯರ ಹೆಸರುಗಳಿಲ್ಲದ ಪಟ್ಟಿಗಳನ್ನು ನಾವು ಪಡೆಯುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿದೆವು. ಆಗ ಅವರು ಮಹಿಳೆಯರನ್ನು ಆಯ್ಕೆ ಮಾಡುವ ಅನಿವಾರ್ಯತೆಗೆ ಸಿಕ್ಕಿದರು. ಆ ಮಹಿಳೆಯರಿಗೆ ತರಬೇತಿ ಇರಬಹುದು ಅಥವಾ ಇಲ್ಲದೆಯೂ ಇರಬಹುದು. ಒಂದು ಬಾರಿ ಅವಕಾಶ ಸಿಕ್ಕರೆ ಅವರೂ ತಿಳುವಳಿಕೆ ಪಡೆಯುತ್ತಾರೆ. ನಾಯಕತ್ವದ ಜೊತೆ ಕೂರಿಸಿದರೆ ಅವರೂ ಕಲಿಯುತ್ತಾರೆ. ಪ್ರಜ್ಞಾಪೂರ್ವಕವಾಗಿ ಈ ಕೆಲಸ ಮಾಡಲಾಯಿತು. ಕ್ಷೇತ್ರಾವಾರು ಈ ಬದಲಾವಣೆ ತರುವ ಪ್ರಯತ್ನ ಮಾಡಿದೆವು.

ಇನ್ನೊಂದು ಉದಾಹರಣೆ ಕೊಡುತ್ತೇನೆ. ಅಂಗನವಾಡಿ ಕ್ಷೇತ್ರವು ಶೇ. ೧೦೦ರಷ್ಟು ಮಹಿಳಾ ಉದ್ಯೋಗಿಗಳಿರುವ ಕ್ಷೇತ್ರ. ಅದರೊಳಗೆ ಶೇ. ೧೦೦ರಷ್ಟು ಶ್ರಮಶಕ್ತಿ ಮಹಿಳೆಯರಾದರೂ ಶೇ. ೯೯ರಷ್ಟು ನಾಯಕತ್ವ ಪುರುಷರ ಪಾಲಾಗಿತ್ತು. ನಾನು ಕಾರ್ಯದರ್ಶಿಯಾದ ಕಾಲಘಟ್ಟದ ಮಾತಿದು. ಈಗ ಹಾಗಿಲ್ಲ. ಏಕೆಂದರೆ ನಾವು ಪ್ರಜ್ಞಾಪೂರ್ವಕವಾಗಿ ಈ ವಿಷಯದ ಕುರಿತು ನಿರಂತರವಾಗಿ ಮಾತನಾಡುತ್ತಲೇ ಇದ್ದೆವು. ಪುರುಷರು ನಾಯಕತ್ವದಲ್ಲಿರುವುದು ಬೇಡವೆಂದಲ್ಲ. ಆದರೆ ಶೇ. ೧೦೦ರಷ್ಟು ಮಹಿಳೆಯರಿರುವ ಕ್ಷೇತ್ರದಲ್ಲಿ ಮಹಿಳೆಯರಿಗೆ ನಾಯಕತ್ವವನ್ನು ಹೇಗೆ ನಿರಾಕರಿಸುತ್ತೀರೆಂದು ನಾವು ಒತ್ತಡ ಹಾಕುತ್ತಲೇ ಬಂದೆವು. ಬೀಡಿ ಕ್ಷೇತ್ರದಲ್ಲೂ ಅಷ್ಟೇ, ಬಹುಪಾಲು ಮಹಿಳೆಯರೇ ದುಡಿಯುತ್ತಿರುವ ಕ್ಷೇತ್ರವದು. ಅಲ್ಲೂ ನಾವು ಪ್ರಜ್ಞಾಪೂರ್ವಕವಾಗಿ ಮಹಿಳಾ ನಾಯಕತ್ವ ತರುವ ಪ್ರಯತ್ನ ಮಾಡಿದ್ದೇವೆ. ಅಂತೆಯೇ ಬಿಸಿಯೂಟ ತಯಾರಕರ ಸಂಘಟನೆ, ಆಶಾ ಕಾರ್ಯಕರ್ತೆಯರ ಸಂಘಟನೆ, ಹೀಗೆ ಹೊಸ ಹೊಸ ಸಂಘಟನೆಗಳು ರಚನೆಗೊಂಡಾಗ ನಾವು ಬುದ್ಧಿಪೂರ್ವಕವಾಗಿ ಮಹಿಳಾ ನಾಯಕತ್ವವನ್ನು ಬೆಳೆಸುವ ಪ್ರಯತ್ನ ಮಾಡಿದ್ದೇವೆ. ಎಲ್ಲೆಡೆ ಪುರುಷರು ಸಂಘಟನೆ ಕಟ್ಟಲು ನೆರವು ನೀಡುವುದು ಅಗತ್ಯವಾದರೂ ಸಹ ಮಹಿಳೆಯರು ನಾಯಕತ್ವದ ಭಾಗವಾಗಿರ ತಕ್ಕದ್ದೆಂದು ನಾವು ಕಟ್ಟುನಿಟ್ಟಾಗಿ ಸೂಚಿಸಿದೆವು. ಮಹಿಳೆಯರೇ ಅಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಇತರ ಪ್ರಮುಖ ಪದಾಧಿಕಾರಿಗಳಾಗಿ ಕಾರ್ಯ ನಿರ್ವಹಿಸಬೇಕೆಂದೂ ಸಹ ಸೂಚನೆ ನೀಡಿದೆವು. ಮಹಿಳೆಯರಿಗೆ ಮಾತುಗಾರಿಕೆ, ಸಭಾ ನಡವಳಿಕೆ ಮತ್ತು ಸಂಘಟನೆಯ ವಿಷಯದಲ್ಲಿ ತರಬೇತಿ



ನೀಡಬೇಕಿದೆ. ಅಲ್ಲದೆ, ಎಐಟಿಯುಸಿಯ ಶಿಕ್ಷಣ ಮಾಲಿಕೆಯಲ್ಲಿ ಎಂಟು ಕಿರುಹೊತ್ತಿಗೆಗಳನ್ನು ಹೊರತಂದಿದ್ದೇವೆ. ಅದರಲ್ಲಿ ಮಹಿಳಾ ಉದ್ಯೋಗಿಗಳ ತರಬೇತಿಗೆ ಸಂಬಂಧಪಟ್ಟಂತೆಯೂ ಒಂದು ಸಂಪುಟವನ್ನು ಮೀಸಲಿರಿಸಿದ್ದೇವೆ.

ಎಐಟಿಯುಸಿಯ ಭಾಗವಾಗಿ ದುಡಿಯುವ ಮಹಿಳೆಯರ ವೇದಿಕೆಯೊಂದನ್ನು ರಚಿಸಿದ್ದೇವೆ. ಇದು ಪ್ರತ್ಯೇಕ ಸಂಘಟನೆಯಲ್ಲ, ಆದರೆ ಉದ್ಯೋಗಸ್ಥ ಮಹಿಳೆಯರಿಗಾಗಿ ಇರುವಂತಹ ಒಂದು ವೇದಿಕೆಯಷ್ಟೇ. ಇದರ ಉದ್ದೇಶ ಉದ್ಯೋಗಸ್ಥ ಮಹಿಳೆಯರನ್ನು ಹೆಚ್ಚುಹೆಚ್ಚು ಕಾರ್ಮಿಕ ಸಂಘಟನೆಯಲ್ಲಿ ಸಕ್ರಿಯಗೊಳಿಸುವುದು, ಸಂಘಟನೆಯಿಂದ ಹೊರಗುಳಿದಿರುವ ಮಹಿಳಾ ಉದ್ಯೋಗಿಗಳನ್ನು ಕಾರ್ಮಿಕ ಸಂಘಟನೆಯ ವ್ಯಾಪ್ತಿಯೊಳಗೆ ತರುವುದು ಮತ್ತು ಅವರನ್ನು ನಾಯಕತ್ವ ಸ್ಥಾನಗಳಿಗೇರುವಂತೆ ತರಬೇತಿ ನೀಡುವುದು. ಎಐಟಿಯುಸಿ ಅಡಿ ಸ್ಥಾಪಿಸಿದ ಈ ದುಡಿಯುವ ಮಹಿಳೆಯರ ವೇದಿಕೆ ಮಹಿಳಾ ನಾಯಕತ್ವವನ್ನು ರೂಪಿಸುವಲ್ಲಿ ಸಹಕಾರಿಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಮಹಿಳೆಯರನ್ನು ಪ್ರಜ್ಞಾಪೂರ್ವಕವಾಗಿ ನಾಯಕತ್ವಕ್ಕೆ ತಂದು ತರಬೇತಿಗೊಳಿಸದೇ ಹೋದರೆ ಮತ್ತು ನಾಯಕತ್ವ ಸ್ಥಾನಗಳಲ್ಲಿರುವ ಪುರುಷರು ಮಹಿಳೆಯರನ್ನು ತಮ್ಮ ಸಹೋದ್ಯೋಗಿ ನಾಯಕಿಯರೆಂದು ಸ್ವೀಕರಿಸದಿದ್ದರೆ ಮಹಿಳೆಯರು ತಾವಾಗೇ ನಾಯಕತ್ವ ಸ್ಥಾನಗಳನ್ನು ತುಂಬುವುದು ದೂರದ ಮಾತು. ಏಕೆಂದರೆ ಮಹಿಳೆಯರಿಗೆ ಬೆಂಬಲದ ಅಗತ್ಯವಿದೆ.

ಮತ್ತೊಂದು ಪ್ರಮುಖ ಅಂಶವೆಂದರೆ ಬಹುತೇಕ ಮಹಿಳೆಯರು ಕೌಟುಂಬಿಕ ಸಮಸ್ಯೆಗಳನ್ನು ಎದುರಿಸುತ್ತಲಿರುತ್ತಾರೆ. ಅವರು ಎದುರಿಸುವ ಮನೆಯೊಳಗಿನ ಸಮಸ್ಯೆಗಳನ್ನು ಪಕ್ಕಕ್ಕೆ ಸರಿಸಿ ಅದು ಅವರ ತಲೆನೋವೆಂದು ಹೇಳಿ ಅದರಿಂದ ನಾವು ದೂರವಿರಲು ಬರುವುದಿಲ್ಲ. ನಿಜ, ಎಐಟಿಯುಸಿ ನೇರವಾಗಿ ಕೌಟುಂಬಿಕ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಲಾಗುವುದಿಲ್ಲ. ಆದರೆ ನಮ್ಮ ಜೊತೆ ಎನ್‌ಎಫ್‌ಐಡಬ್ಲ್ಯು ಎಂಬ ಸಹೋದರಿ ಸಂಘಟನೆ ಇದೆ ಎಂಬುದೂ ಅಷ್ಟೇ ನಿಜ. ಇಂತಹ ಸಮಸ್ಯೆಗಳು ಬಂದಾಗ ನಾವು ತಾಳ್ಮೆಯಿಂದ ಕೇಳಬೇಕು, ಕೇಳಿ ಸೂಕ್ತ ಮಾರ್ಗದರ್ಶನ ನೀಡಬೇಕು. ಇಂತಹ ಕೌಟುಂಬಿಕ ಸಮಸ್ಯೆಗಳನ್ನು ಎದುರಿಸುವಾಗ ಎನ್‌ಎಫ್‌ಐಡಬ್ಲ್ಯುನ ನೆರವು ಪಡೆಯಬೇಕಾಗುತ್ತದೆ. ಹೀಗೆ ಮಹಿಳೆಗೆ ತನ್ನ ವೈಯಕ್ತಿಕ ಸಮಸ್ಯೆಗಳಿಂದ ಹೊರಬರಲು ಸಹಕರಿಸಿದರೆ ಕಾರ್ಮಿಕ ಸಂಘಟನೆಯ ಮೂಲಕ ಮತ್ತಷ್ಟು ಬಲಿಷ್ಠರಾಗುವುದರ ಬಗ್ಗೆ ಅವಳಲ್ಲಿ ವಿಶ್ವಾಸ ಮೂಡಿಸುವ ಸಾಧ್ಯತೆಗಳು ನಿಚ್ಚಳವಾಗಿರುತ್ತವೆ. ಕಾರ್ಮಿಕ ಸಂಘಟನೆಯು ಮಹಿಳಾ ಸಬಲೀಕರಣದ ಅತಿ ದೊಡ್ಡ ಸಲಕರಣೆಯಾಗಿದೆ. ಇದರ ಅರಿವು ಮೂಡಿದ ಮಹಿಳೆಯರು ಸ್ವಯಂಪ್ರೇರಿತರಾಗಿ ಕಾರ್ಮಿಕ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಾರೆ. ಅಂತಹ ಪ್ರಜ್ಞಾವಂತ ಸಂಘಟಿತ ಮಹಿಳೆಯರ ಮಾದರಿಗಳನ್ನು ಅಸಂಘಟಿತರಾಗಿರುವ ಇತರ ಉದ್ಯೋಗಸ್ಥ ಮಹಿಳೆಯರನ್ನು ಸಂಘಟಿಸಲು ನಾವು ಬಳಸಿಕೊಳ್ಳುತ್ತೇವೆ. ನಾಯಕತ್ವಕ್ಕೆ ಅಣಿಗೊಳಿಸುವ ಮಹಿಳೆಯರನ್ನು ವೈಯಕ್ತಿಕ ನೆಲೆಯಿಂದ ಗಮನಿಸಬೇಕು; ಅವರ ಕಷ್ಟಸುಖಗಳನ್ನು ಪರಿಗಣಿಸಬೇಕು. ಅವರ ಸಮಸ್ಯೆಗಳನ್ನು ಬಗೆಹರಿಸುತ್ತಾ ಅವರಲ್ಲಿ ವಿಶ್ವಾಸ ಮೂಡಿಸಬೇಕು. ಒಂದು ಬಾರಿ ತಮ್ಮ ಸಂಕಷ್ಟಗಳನ್ನು ಎದುರಿಸುವ ಕಲೆಯನ್ನು ಅವರು ಕಲಿತುಬಿಟ್ಟರೆ ಅವರೊಳಗೇ ಆತ್ಮವಿಶ್ವಾಸ ಚಿಮ್ಮುತ್ತದೆ. ಪದೇಪದೇ ಯಾರ ಬಳಿಯೂ ಬಂದು ತೊಂದರೆಕೊಡಲಾರರು. ಅವರು ಇತರರಿಗೆ ಮಾರ್ಗದರ್ಶಕರಾಗಿ ಬೆಳೆದಿರುತ್ತಾರೆ. ಹೀಗೆ ನಾಯಕತ್ವ ಎಂಬುದು ಸರಣಿ ಕ್ರಿಯೆಯಾಗಿ ಪರಿವರ್ತನೆಯಾಗುತ್ತದೆ.

*(ಮುಂದುವರೆಯುವುದು)*

**ಎ. ಜ್ಯೋತಿ**
ಎಸ್–೩, ನಂ. ೩೭, ೧೬ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ
ವಿಜಯನಗರ, ಬೆಂಗಳೂರು – ೫೬೦ ೦೪೦




# ವರಕವಿ ಬೇಂದ್ರೆಯ ನೆನಪಲ್ಲಿ ಬಡ ಪ್ರೇಮಿಯೊಬ್ಬನ ಹಾಡು

**ನಾ**ನು ಬಡವ, ನೀ ಬಡವಿಯಲ್ಲ
ಕಪ್ಪುದೇಹ ನನ್ನದು, ಬಿಳಿ ಮೈ ನಿನ್ನದು
ಪ್ರೇಮಗೀತೆ ಹಾಡಿದೆವು,
ಜಗಕೆ ಸಾರಿ ಹೇಳಿದೆವು,
ಒಲವೆ ನಮ್ಮ ಬದುಕು ಎಂದು.

ನಾ ಬರೆದ ಒಂದೊಂದು ಕವಿತೆಗೂ
ನಿನ್ನಿಂದ ಮುತ್ತಿನ ಉಡುಗೊರೆ.
ಎಲ್ಲೆ ಮೀರದ ನಮ್ಮಿಬ್ಬರ ಪ್ರೀತಿ:
ಕಾವ್ಯ ಓದು ಕಲಿಸಿದೆ ಆ ನೀತಿ
ಈ ಬಾಳ ನಂಟಿಗೆ ಕೊನೆಯೆಂಬುದಿಲ್ಲಾ.

ನೋವ ತುಂಬಿದ ಈ ನಡಿಗೆಗೆ
ಕಾರಣ ಹುಡುಕುವ ಅಡಿಗಡಿಗೆ
ದುಃಖ ದುಮ್ಮಾನ ಮರೆತು ಹಾಡೋಣ,
ಮೇಲು ಕೀಳುಗಳ ತೊರೆದು ಕುಣಿಯೋಣ,
ಸಖಿ! ದಾಂಪತ್ಯದ ಮಧುರಗೀತೆ ಬರೆಯಲೆ?

ಕೇಳಲಿಲ್ಲ ನೀನು, ಹೇಳಲಿಲ್ಲ ನಾನು
ಜಾತಿಯೆಂಬ ಹೆಸರ
ಒಲುಮೆಗೆ ಯಾಕೆ ಬೇಕು?
ನಾ ಬೇರೆ, ನೀ ಬೇರೆ ಎಂಬ ಚೌಕು
ನಲುಮೆಯ ಬದುಕ ಬಾಳೋಣ ಬಾರಾ....

**ಡಾ|| ಬಿ. ಆರ್. ಕೃಷ್ಣಕುಮಾರ್**
ಭ್ರಷ್ಟಾಚಾರ ನಿಗ್ರಹ ದಳ (ಎಸಿಬಿ) ಪೊಲೀಸ್ ಠಾಣೆ
ನ್ಯಾಯಾಲಯದ ರಸ್ತೆ, ಚಾಮರಾಜನಗರ ಟೌನ್– ೫೭೧೩೧೩

# ಕ್ಯಾಲೆಂಡರನ್ನು ಕ್ಲಿಷ್ಟ(ಸರಳ?)ಗೊಳಿಸುವ ಹುಣ್ಣಿಮೆಗಳು!

**ಈ** ತಿಂಗಳಲ್ಲಿ ಎರಡು ಹುಣ್ಣಿಮೆಗಳಿರುವುದರಿಂದ ಅವು ಕ್ಯಾಲೆಂಡರ್‌ಗೆ ಒಡ್ಡುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ಒಂದೆರಡು ಸಣ್ಣ ಪ್ರಯೋಗಗಳನ್ನು ಮಾಡಬಹುದು. ೧ರಂದು ಸಂಜೆ ೭ಗಂಟೆಗೆ ಚಂದ್ರನನ್ನು ಗಮನಿಸಿ. ಅದರ ಪಕ್ಕದಲ್ಲಿಯೇ ಒಂದು ಚುಕ್ಕೆ ಕಾಣುವುದು ಅದೇ ಮಘ ನಕ್ಷತ್ರ. ಮರುದಿನ ಪುನಃ ಅದೇ ಹೊತ್ತಿಗೆ ಪೂರ್ವ ದಿಕ್ಕನ್ನು ನೋಡಿ. ಚಂದ್ರ ಕಾಣುವುದಿಲ್ಲ. ಆದರೆ, ಆ ನಕ್ಷತ್ರ ಕಾಣುತ್ತದೆ. ದಿನೇ ದಿನೇ ಅದೇ ಹೊತ್ತಿಗೆ ದಿಗಂತದಿಂದ ಆ ನಕ್ಷತ್ರದ ಎತ್ತರವನ್ನು ಗಮನಿಸಿ. ಅದು ಕ್ರಮೇಣ ಮೇಲೇರಿದಂತೆ ಕಾಣುತ್ತದೆ. ೨೮ರಂದು ಪುನಃ ಚಂದ್ರ ಆ ನಕ್ಷತ್ರದ ಪಕ್ಕವೇ ಕಾಣುತ್ತದೆ. ಅದಾದ ಮೂರು ರಾತ್ರಿಗಳ ನಂತರ ೩೧ಕ್ಕೆ ನೀವು ಹುಣ್ಣಿಮೆಯ ಚಂದ್ರನನ್ನು ಕಾಣುವಿರಿ. ಆ ಚಂದ್ರದ ಸಮೀಪ ಇರುವ ನಕ್ಷತ್ರ ಚಿತ್ರಾ. ಚಾಂದ್ರಮಾನ ಪದ್ಧತಿಯಲ್ಲಿ ಹುಣ್ಣಿಮೆಯ ಚಂದ್ರನ ಬಳಿ ಇರುವ ನಕ್ಷತ್ರದ ಹೆಸರೇ ತಿಂಗಳಿಗೂ ಇರುತ್ತದೆ. ಆದ್ದರಿಂದ ಚಿತ್ರಾ ನಕ್ಷತ್ರ ಈ ತಿಂಗಳ ಹೆಸರನ್ನು ಚೈತ್ರ ಎಂದು ನಿರ್ಧರಿಸುತ್ತದೆ. ಯುಗಾದಿಯ ಆಚರಣೆಯ ದಿನಾಂಕ ನಿರ್ಧಾರವಾಗುತ್ತದೆ.

ಇನ್ನೊಂದು ಪ್ರಶ್ನೆ ಈಗ ಉದ್ಭವಿಸುತ್ತದೆ. ೧ನೆಯ ತಾರೀಖಿನ ಹುಣ್ಣಿಮೆಯ ಚಂದ್ರ ಮಘ ನಕ್ಷತ್ರದ ಸಮೀಪ ಇರುವುದರಿಂದ ಅದು ಮಾಘಮಾಸವಾಗಿರಬೇಕಲ್ಲವೇ? ಮಾಘವಾದ ಮೇಲೆ ಫಾಲ್ಗುಣ ಇಲ್ಲದೆಯೇ ಚೈತ್ರ ಹೇಗೆ ಬಂದಿತು?




ಮಾರ್ಚ್ ೧ರಂದು ಹುಣ್ಣಿಮೆ ಎಂದರೆ ಆ ರಾತ್ರಿ ಕಾಣುವುದು ಹುಣ್ಣಿಮೆಯ ಚಂದ್ರ. ವಾಸ್ತವದಲ್ಲಿ ಹುಣ್ಣಿಮೆ ಎಂಬ ಘಟನೆ ೨ರ ಮುಂಜಾವು ೬ ಗಂಟೆಗೆ ನಡೆಯಲಿದೆ. ಸೂರ್ಯೋದಯದಿಂದ ಸೂರ್ಯೋದಯಕ್ಕೆ ಒಂದು ದಿನ ಪರಿಗಣಿಸಿ ಇರುವುದರಿಂದ ಹುಣ್ಣಿಮೆ ಎಂಬ ಘಟನೆಯನ್ನು ೧ನೇ ತಾರೀಖಿಗೆ ಬರೆಯಬೇಕೇ? ೨ನೆಯ ತಾರೀಖಿಗೆ ಬರೆಯಬೇಕೆ? ಎಂಬ ಪ್ರಶ್ನೆ ಏಳುತ್ತದೆ. ಆದರೆ, ಈ ಘಟನೆ ೧ನೆಯ ರಾತ್ರಿಗೆ ಹತ್ತಿರವಾಗಿ ಇರುವುದರಿಂದ ೧ನೇ ತಾರೀಖನ್ನೇ ಹುಣ್ಣಿಮೆ ಎಂದು ಪರಿಗಣಿಸಬೇಕಾಗುತ್ತದೆ. ೨ರ ಬೆಳಗ್ಗೆ ೦೬ ಗಂಟೆಗೆ ಚಂದ್ರ ಮಘ ಮತ್ತು ಪುಬ್ಬ ನಕ್ಷತ್ರಗಳ ನಡುವೆ ಇರುತ್ತದೆ.



೧೯(ಸಂಜೆ) ಶುಕ್ರ–ಬುಧ–ಚಂದ್ರ ಪುಟ್ಟ ಗುಂಪು

ಆಕಾಶವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮಾರ್ಚ್ ೧ರ ಮತ್ತು ೩೧ರ ಹುಣ್ಣಿಮೆಗಳು ಆಯಾಯಾ ನಕ್ಷತ್ರಗಳಿಗಿಂತ ಸ್ವಲ್ಪ ಹಿಂದೆ ಇರುವುದು ಕಾಣುತ್ತದೆ. ವಾಸ್ತವದಲ್ಲಿ ಏಪ್ರಿಲ್ ೧ರಂದು ಚಂದ್ರ ಚಿತ್ರಾದ ಪಕ್ಕದಲ್ಲಿಯೇ ಇರುತ್ತದೆ. ಹೀಗೆ ನಕ್ಷತ್ರಗಳೊಡನೆ ಹುಣ್ಣಿಮೆಯನ್ನು ಜೋಡಿಸಲು ಜೂನ್–ಜುಲೈನಲ್ಲಿ ಒಂದು ಅಧಿಕಮಾಸವನ್ನು ಸೇರಿಸಬೇಕಾಗುತ್ತದೆ. ಅಲ್ಲಿ ಎರಡು ಜ್ಯೇಷ್ಠ ಮಾಸಗಳಿವೆ. ಪುನಃ ಹುಣ್ಣಿಮೆಗಳ ಚಂದ್ರ ಈ ಸರಿದೂಗುವಿಕೆಗೆ ಹೊಂದಿಕೊಳ್ಳುವುದು ಮುಂದುವರೆದು ಡಿಸೆಂಬರ್‌ನಲ್ಲಿ ಮೃಗಶಿರಾ ನಕ್ಷತ್ರಕ್ಕೆ ಮಾರ್ಗಶಿರ ತಾಳೆಯಾಗುತ್ತದೆ. ಅಲ್ಲಿಂದ ಮುಂದೆ ಲೆಕ್ಕ ಮತ್ತು ಆಕಾಶದಲ್ಲಿ ಚಂದ್ರನ ಸ್ಥಾನ ಹೊಂದಿಕೊಳ್ಳುತ್ತವೆ. ಮೂರು ವರ್ಷಗಳ ನಂತರ ಪುನಃ ವ್ಯತ್ಯಾಸವಾದಾಗ ಇನ್ನೊಂದು ಅಧಿಕಮಾಸವನ್ನು ಸೇರಿಸಬೇಕಾಗುತ್ತದೆ.

ಈ ತಿಂಗಳಲ್ಲಿ ಗ್ರಹಗಳನ್ನು ಗುರುತಿಸಲು ಚಂದ್ರ ಒಳ್ಳೆಯ ಅವಕಾಶ ನೀಡುತ್ತಿದೆ. ಛಾಯಾಗ್ರಹಣಕ್ಕೂ ಅನುಕೂಲಕರವಾಗಿದೆ. ಶುಕ್ರ ಮತ್ತು ಬುಧ ಎರಡೂ ಸಂಜೆಯ ಆಕಾಶದಲ್ಲಿಯೇ ಕಾಣುತ್ತವೆ. ಪಶ್ಚಿಮ ದಿಗಂತದಲ್ಲಿ ಇವು ಪರಸ್ಪರ ಸಮೀಪಿಸಿ ದೂರವಾಗುವುದನ್ನು ಕಾಣಬಹುದು. ೧೯ರಂದು ಬಿದಿಗೆಯ ರೇಖಾಚಂದ್ರ ಇವುಗಳ ಜೊತೆಗೂಡುತ್ತದೆ. ಅದಾದ ಮೇಲೆ ಶುಕ್ರ ದಿನೇ ದಿನೇ ಮೇಲೇರಿದರೆ ಬುಧ ಕೆಳಗೆ ಇಳಿಯುತ್ತದೆ. ಗುರು, ಶನಿ ಮತ್ತು ಮಂಗಳ – ಈ ಮೂರೂ ಗ್ರಹಗಳು ಮುಂಜಾವಿನಲ್ಲಿ ಕಾಣುತ್ತವೆ. ಚಂದ್ರ ಇವುಗಳ ಸಮೀಪ ಹಾದುಹೋಗುವ ಸಂದರ್ಭ ಛಾಯಾಗ್ರಹಣಕ್ಕೆ ಅನುಕೂಲವಾಗಿದೆ. ೨೦ರಂದು ವಸಂತವಿಷುವ – ಹಗಲು ರಾತ್ರಿಗಳ ಅವಧಿ ಸಮ. ಈ ಘಟನೆಗೂ ಹೊಸ ವರ್ಷಗಣನೆಗೂ ನೇರ ಸಂಬಂಧ ಇರುವುದರಿಂದ ೧೮ರಂದು ಯುಗಾದಿ ಹಬ್ಬವಿದೆ.

ಸಂಜೆಯ ಆಕಾಶದಲ್ಲಿ ನೆತ್ತಿಯ ಮೇಲೆ ಕಾಣುವುದು (ಒರೈಯನ್) ಮಹಾವ್ಯಾಧ; ಅದರ ಪಶ್ಚಿಮಕ್ಕೆ ವೃಷಭ; ಪೂರ್ವಕ್ಕೆ ಮಿಥುನ; ಉತ್ತರಕ್ಕೆ ಆರಿಗಾ – ವಿಜಯಸಾರಥಿ. ಈ ಎಲ್ಲ ಪುಂಜಗಳಲ್ಲಿ ಪ್ರಕಾಶಮಾನವಾದ ನಕ್ಷತ್ರಗಳಿವೆ. ದಕ್ಷಿಣಕ್ಕೆ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಸ್ಫುಟವಾಗಿ ಕಾಣುತ್ತವೆ. ಮಹಾವ್ಯಾಧ ಮತ್ತು ಮಹಾಶ್ವಾನ ಪುಂಜಗಳಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು; ಇದು ಆಕಾಶಗಂಗೆಯ ಒಂದು ಶಾಖೆ. ಇದು ಉತ್ತರದಲ್ಲಿ ಕುಂತಿ (ಕೆಸಿಯೋಪಿಯಾ)ವರೆಗೂ ವಿಸ್ತರಿಸುತ್ತದೆ. ವಾಯುವ್ಯದಿಂದ ಆಗ್ನೇಯಕ್ಕೆ ನೆತ್ತಿ ಮೂಲಕ ಆಕಾಶಗಂಗೆ ಎಂಬ ನದಿ ಹಾದುಹೋಗುವುದನ್ನು ಗುರುತಿಸಲು ಈಗ ಒಳ್ಳೆಯ ಅವಕಾಶ.

**ಖಗೋಳ ದಿನಚರಿ**

೦೧ ಚಂದ್ರ – ಮಘ ಜೋಡಿ
೦೨ ಬೆಳಗ್ಗೆ ೦೬ : ೨೧ಕ್ಕೆ ಹುಣ್ಣಿಮೆ
೦೭ ಚಂದ್ರ – ಗುರು ಜೋಡಿ
೦೯ ಚಾಂದ್ರಮಾಸದ ಕೊನೆಯ ಪಾದ
೧೧ ಚಂದ್ರ – ಶನಿ ಜೋಡಿ ; ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೧೫ ಬುಧ ಗ್ರಹದ ಗರಿಷ್ಠ ಕೋನೋನ್ನತಿ
೧೭ ಅಮಾವಾಸ್ಯೆ ೧೮:೪೨ಕ್ಕೆ
೧೯ (ಸಂಜೆ) ಶುಕ್ರ – ಬುಧ – ಚಂದ್ರ ಪುಟ್ಟಗುಂಪು
೨೦ ವಸಂತ ವಿಷುವ
೨೩ ಚಂದ್ರ – ರೋಹಿಣಿ ಜೋಡಿ
೨೪ ಚಾಂದ್ರಮಾಸದ ಮೊದಲಪಾದ
೨೬ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೨೮ ಚಂದ್ರ – ಮಘ ಜೋಡಿ
೩೧ ಹುಣ್ಣಿಮೆ ೧೮:೦೭ಕ್ಕೆ


**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಹೆಣ್ಣಾಗಿ ಜನಿಸಿ ತನ್ನೊಡಲಂ...

ಮೀನಾಕ್ಷಮ್ಮ

ಕೆಟ್ಟ ಜಾತಕ ಫಲಗಳನ್ನು ವರದಕ್ಷಿಣೆಯೆಂಬ ಮಾಂತ್ರಿಕ ನುಂಗಿ ಹಾಕುವುದುಂಟು. ವರದಕ್ಷಿಣೆ ಕೊಡುವುದಾದರೆ ನೋಡೋಣ ಎಂಬ ಒಂದು ಸಂಬಂಧ ಕೂಡಿ ಬಂತು. ಯಾರದೋ ಕೈ-ಕಾಲು ಹಿಡಿದು ಅವಳಪ್ಪ ಸಂಬಂಧವೊಂದನ್ನು ಕುದುರಿಸಿಯೇ ಬಿಟ್ಟರು. ಅದೂ ಸುಲಭದ ಬಾಬತ್ತಲ್ಲ. ಇಪ್ಪತ್ತೈದು ಸಾವಿರ ಕೊಡಬೇಕೆಂಬ ಷರತ್ತಿನ ಒಪ್ಪಂದ. ಸಾಕಷ್ಟು ಹೊಲ-ಗದ್ದೆ-ತೋಟ - ಜಮೀನು ಇರುವ ಮನೆಯಂತೆ. ಅಂದಿನ ಮದುವೆಗಳೆಂದರೆ ಎರಡೂ ಕಡೆಯ ಅಪ್ಪಂದಿರ ಮಧ್ಯೆ ನಡೆಯುವ ವ್ಯವಹಾರ. ಅಲ್ಲಿ ಸ್ವಾರ್ಥ- ಸುಲಿಗೆ - ಮೇಲಾಟ ಜೊತೆಗೆ ಹಟಮಾರಿತನ ಎಲ್ಲವೂ ಇರುತ್ತದೆ. ಹೆಂಗಸರು ತಲೆ ಹಾಕುವಂತಿಲ್ಲ.

ಪುಷ್ಪಾಳ ನಗು ಚಂದ್ರ ಉದಯಿಸಿ ಬಂದಂತೆ. ಆಕೆ ಚಿಗರೆ ಕಂಗಳ ಚುರುಕು ನೋಟದ ಮುಗ್ಧ ಹುಡುಗಿ. ವಯಸ್ಸು ಹದಿನಾಲ್ಕು. ಅತಿ ರೂಪವತಿಯಲ್ಲ. ಆದರೂ ಆಕೆಯಲ್ಲೇನೋ ಆಕರ್ಷಣೆ. ಅವಳಿಗೊಂದೇ ಚಿಂತೆ ! ಎಲ್ಲಿಗೆ ಹೋದ ನನ್ನ ತಮ್ಮ ಅನಂತ? ನನಗೆ ಹೇಳದೆ ಎಲ್ಲಿಗೂ ಹೋಗುವವನಲ್ಲ ಅವನು. ಬಾವಿಯಿಂದ ನೀರು ಸೇದಿ ಹೂಗಿಡಗಳಿಗೆ ಹಾಕಲು ನನ್ನ ಜೊತೆಗೆ ಬರುತ್ತಿದ್ದ. ತುಂಬಿ ಮುಟ್ಟದ ಹೂಗಳನ್ನು ನಸುಕಿಗೇ ಎದ್ದು ಕೊಯ್ದು ತಂದು ಕೊಡುತ್ತಿದ್ದ. ಶುದ್ಧ ಬಿಳುಪಿನ ಅನಂತ ಪುಷ್ಪವೆಂಬ ಹೆಸರಿನ ಹೂವೆಂದರೆ ಅವನಿಗಿಷ್ಟ. ಬಲು ಸುವಾಸನೆ ಅದಕ್ಕೆ. ನಾನು ಅನಂತ, ನೀನು ಪುಷ್ಪ - ನನ್ನ ಹೆಸರು ಮೊದಲಿಗಿದೆ ಎಂದು ಕಿಲ ಕಿಲ ನಗುತ್ತಿದ್ದ. ಹೌದಲ್ಲ, ನಮ್ಮಿಬ್ಬರ ಹೆಸರಿನ ಹೂವದು! ನಾವು ಇಬ್ಬರೂ ತುಂಬ ಹೂವಿನ ಗಿಡ ಬೆಳೆಸಿದ್ದೇವೆ ಎಂದು ಪುಷ್ಪಾ ತುಂಬಾ ಜಂಭ ಪಡುತ್ತಿದ್ದಳು. ಅಕ್ಕಾ-ಅಕ್ಕಾ ಎಂದು ಹಿಂದೆಯೇ ಇರುತ್ತಿದ್ದ ತಮ್ಮನನ್ನು ಜ್ವರಕ್ಕೆ ಮದ್ದು ತೆಗೆದುಕೊಳ್ಳಲು ಅಮ್ಮನೇ ಅಜ್ಜನ ಮನೆಗೆ ಕಳಿಸಿದ್ದಳು. ಅಲ್ಲಿ ಹಾಲು ತುಪ್ಪಕ್ಕೇನೂ ಕೊರತೆಯಿಲ್ಲ. ಟಾನಿಕ್ ತೆಗೆದುಕೊಂಡು ಹುಶಾರಾಗಿ ಬರುವನೆಂದು ಅಮ್ಮ ಹೇಳಿದ್ದಳು. ಅಲ್ಲಿಂದ ಎಲ್ಲಿಗೆ ಹೋದ? ಯಾರನ್ನು ಕೇಳಿದರೂ ಹೇಳುವುದೇ ಇಲ್ಲ. ಮುಖ ಸಪ್ಪಗೆ ಮಾಡಿಕೊಂಡು ಆಕಾಶಕ್ಕೆ ಕೈ ತೋರಿಸುತ್ತಾರೆ. ಆಕಾಶ ನೋಡಿದರೆ ಅಲ್ಲಿ ಪುಷ್ಪಾಳಿಗೆ ಕಾಣಿಸುವುದಿಲ್ಲ ಅವನು! ಹಿಂದೊಮ್ಮೆ ಯಾರೋ ಬಂದು ಅಮ್ಮನಲ್ಲಿ ಏನೋ ಹೇಳಿದಾಗ, ಹೋ... ಎಂದು ಅಮ್ಮ ಹುಯಿಲಿಟ್ಟು, ಬಾಟಲಿಯಲ್ಲಿದ್ದ ಏನನ್ನೋ ಕುಡಿದು ನೆಲದ ಮೇಲೆ ಬಿದ್ದು ಹೊರಳಾಡಿದ್ದಳು. ಪುಷ್ಪಾಳೇ ಯಾರನ್ನೋ ಎಲ್ಲಿಂದಲೋ ಕರೆದುಕೊಂಡು ಬಂದಿದ್ದಳು. ಅವರು ಏನೇನೋ ಮದ್ದು ಅರೆದು ಕುಡಿಸಿ, ವಾಂತಿ ಮಾಡಿಸಿ, ಕುಳ್ಳಿರಿಸಿ ತಲೆಗೆ ನೀರು ತಟ್ಟಿ ಸಮಾಧಾನ ಮಾಡಿ ಹೋಗಿದ್ದರು. ಪುಷ್ಪಾಗೆ ಅದೆಲ್ಲ ಯಾಕೆ - ಏನೆಂದು ತಿಳಿಯುವ ವಯಸ್ಸಲ್ಲ. ಮತ್ತೆ ತಮ್ಮನು ಮನೆಗೆ ಬರಲೇಇಲ್ಲ. ಈ ಅಪ್ಪನಾದರೂ ಮನೆಯಲ್ಲಿದ್ದು ಅವನನ್ನು ಹುಡುಕಿ ತರಬಾರದೇ? ಎಲ್ಲೆಲ್ಲೋ ಸುತ್ತುತ್ತಿರುತ್ತಾರೆ. ನಾವೂ ಅವರ ಜತೆ ಹೋಗಬೇಕಂತೆ! ಅಮ್ಮ ಒಪ್ಪುವುದಿಲ್ಲ.



ತಮ್ಮನನ್ನು ನಾನೇ ಹುಡುಕಿ ಕರೆತರುತ್ತೇನೆಂದುಕೊಂಡ ಪುಷ್ಪಾ ಅಮ್ಮನ ಜೊತೆ ಮಲಗಿ ನಿದ್ದೆ ಹೋದಳು.

ಇನ್ನು ಪುಷ್ಪಾಳ ಜಾತಕ, ಜ್ಯೋತಿಷಿಗಳ ಪ್ರಕಾರ ಇಂಥ ಕೆಟ್ಟ ಜಾತಕವನ್ನು ಅವರು ನೋಡಿಯೇ ಇಲ್ಲವಂತೆ. ವಿಕೃತಿ ನಾಮ ಸಂವತ್ಸರ, ಅಧಿಕ ಆಷಾಢ, ಅಷ್ಟಮಿ ತಿಥಿ, ಶುಕ್ರವಾರ, ಕನ್ಯಾರಾಶಿ, ಉತ್ತರಾ ನಕ್ಷತ್ರ – ಸಾಲದ್ದಕ್ಕೆ ಏಳರಾಟ ಶನಿ ಜನ್ಮರಾಶಿಯಲ್ಲೇ ವಕ್ಕರಿಸಿದ್ದಾನಂತೆ! ಮದುವೆ ತುಂಬ ಕಷ್ಟವಂತೆ. ಇವಳ ಕೈಯಿಂದ ವರನಿಗೆ ಹಾಕಿಸುವ ಹೂಮಾಲೆ ಅವನಿಗೆ ಕಷ್ಟಗಳ ಸರಮಾಲೆ ತರುತ್ತದಂತೆ! ಅಬ್ಬಾ ಅಂತೆ ಕಂತೆಗಳೇ! ಹದಿನಾರರ ಪ್ರಾಯದ ಪುಷ್ಪಾಳ ಜಾತಕ ಯಾವ ವರನ ಜಾತಕಕ್ಕೂ ಕೂಡಿ ಬರಲಿಲ್ಲ. ಜಾತಕ ಚೆನ್ನಾಗಿಲ್ಲ, ನಮಗೆ ಬೇಡ – ಕಡ್ಡಿ ಮುರಿದಂತೆ ಅವರ ಮುಲಾಜಿಲ್ಲದ ಉತ್ತರ. ಈ ಸುದ್ದಿ ಬೆಳಕಿನ ವೇಗದಲ್ಲಿ, ಅದಕ್ಕಿಂತಲೂ ಮಿಗಿಲಾದ ವೇಗದಲ್ಲಿ ಎಲ್ಲೆಡೆ ಹರಡಿತು. ಅವಳನ್ನು ಮದುವೆಯಾಗಿ ಹಳ್ಳಕ್ಕೆ ಬೀಳಬೇಡವೆಂಬ ಹಿತ ನುಡಿ ಮದುವೆಗಿರುವ ಗಂಡುಗಳಿಗೆ ತಲುಪಿತು. ಇದು ಅಂದಿನ ಸಮಾಜಬಾಂಧವರ ಒಗ್ಗಟ್ಟು. ಪುಷ್ಪಾಳ ಮದುವೆ ಒಗಟಾಗಿ ಕಗ್ಗಂಟಾಗಲಾರಂಭಿಸಿತು. ಅವಳಮ್ಮ ಈಗಾಗಲೇ ಅವಳನ್ನು ಹತ್ತಿರದ ಶಾಲೆಗೆ ಕಳಿಸಿ ಸ್ವಲ್ಪ ಓದಿಸಿದ್ದರು. ಹೆಣ್ಣುಮಕ್ಕಳಿಗೇಕೆ ಶಾಲೆಯೆಂದು ಅಮ್ಮನೊಂದಿಗೆ ಅಪ್ಪ ಜಗಳವಾಡಿದ್ದರು. ಈಗ ಮದುವೆ ಕನಸಿನ ಮಾತೆಂಬ ಅರಿವಾಗಿ ಮುಂದೆ ಓದಿಸೋಣವೆಂದು ಅಮ್ಮ ಗೋಗರೆದರೆ – ಯಾರಲ್ಲಿದೆ ರೊಕ್ಕ! ನಿನಗೇನು ಹುಚ್ಚೇ ಎಂಬ ಪ್ರಶ್ನೆ ಎಲ್ಲರಿಂದಲೂ ಬಾಣದಂತೆ ತೂರಿಬಂತು. ಹೌದು, ಹೆಣ್ಣಾಗಿ – ಅದರಲ್ಲೂ ಬಡವರ ಮನೆಯಲ್ಲಿ ಹೆಣ್ಣಾಗಿ ಹುಟ್ಟಬಾರದು. ಅದು ಹುಣ್ಣಿನಂಥ ನೋವು ಕೊಡುತ್ತದೆ. ಕಣ್ಣೊರೆಸಿಕೊಂಡು ಸುಮ್ಮನಾದರು ಅಮ್ಮ. ಗುಡಿಸಲಂಥ ಮನೆ ಇದೆ. ಜಾಗ ಇದೆ. ದುಡಿಯಲು ಜನರಿಲ್ಲ. ಪುಷ್ಪಾಳ ಅಪ್ಪ ಒಮ್ಮೆ ಊರು ಬಿಟ್ಟರೆಂದರೆ ಆರು ತಿಂಗಳಿಗೊಮ್ಮೆ ನೆನಪಾದರೆ ಬರುತ್ತಾರೆ. ಅವರಿಗೆ ಊರು ಸುತ್ತುವ ಕೆಲಸ. ವೈದಿಕ ಮನೆತನದ ಅವರಿಗೆ ನೂರೆಂಟು ಕೆಲಸಗಳು. ಅವರ ಅಣ್ಣನ ಮನೆಯಲ್ಲೇ ಹೆಚ್ಚಾಗಿ ಇರುವುದು. ಕೇಳಿದರೆ ನೀನೂ ಬಾ ಎನ್ನುವರು. ಅಮ್ಮನಿಗದು ಇಷ್ಟವಿಲ್ಲ. ಇಂಥವರು ಮನೆ ಯಜಮಾನರಾದರೆ ಹೇಗೆ? ಇವಳ ಅಮ್ಮನಿಗೆ ಏನು ಮಾಡುವುದೆಂದು ತೋಚದಾಯಿತು. ಇದ್ದ ಜಾಗದಲ್ಲೇ ಏನಾದರೂ ಕೃಷಿ–ಬಾಳೆ ಗಿಡ ಬೆಳೆಸುವುದು. ತರಕಾರಿ ಹೂವು–ಹಣ್ಣು ಬೆಳೆಸಿ ಮಾರುವುದು, ಗೇರುಬೀಜ ಕೃಷಿ – ಹೀಗೆ ಬದುಕಲು ದಾರಿ ಕಂಡುಕೊಂಡಳು. ದಿನ ಕಳೆಯುತ್ತಿತ್ತು.

ಕೆಲವೊಮ್ಮೆ ಕೆಟ್ಟ ಜಾತಕ ಫಲಗಳನ್ನು ವರದಕ್ಷಿಣೆಯೆಂಬ ಮಾಂತ್ರಿಕ ನುಂಗಿ ಹಾಕುವುದುಂಟು. ವರದಕ್ಷಿಣೆ ಕೊಡುವುದಾದರೆ ನೋಡೋಣ ಎಂಬ ಒಂದು ಸಂಬಂಧ ಕೂಡಿ ಬಂತು. ಯಾರದೋ ಕೈ–ಕಾಲು ಹಿಡಿದು ಅವಳಪ್ಪ ಸಂಬಂಧ ವೊಂದನ್ನು ಕುದುರಿಸಿಯೇ ಬಿಟ್ಟರು. ಅದೂ ಸುಲಭದ ಬಾಬತ್ತಲ್ಲ. ಇಪ್ಪತ್ತೈದು ಸಾವಿರ ಕೊಡಬೇಕೆಂಬ ಷರತ್ತಿನ ಒಪ್ಪಂದ. ಸಾಕಷ್ಟು ಹೊಲ–ಗದ್ದೆ–ತೋಟ – ಜಮೀನು ಇರುವ ಮನೆಯಂತೆ. ಅಂದಿನ ಮದುವೆಗಳೆಂದರೆ ಎರಡೂ ಕಡೆಯ ಅಪ್ಪಂದಿರ ಮಧ್ಯೆ ನಡೆಯುವ ವ್ಯವಹಾರ. ಅಲ್ಲಿ ಸ್ವಾರ್ಥ– ಸುಲಿಗೆ – ಮೇಲಾಟ ಜೊತೆಗೆ ಹಟಮಾರಿತನ ಎಲ್ಲವೂ ಇರುತ್ತದೆ. ಹೆಂಗಸರು ತಲೆಹಾಕುವಂತಿಲ್ಲ. ಮದುಮಗನಂತೂ ಕೋಲೆ ಬಸವನಂತೆ ದೊಡ್ಡವರು ಹೇಳಿದ್ದನ್ನು ಕೇಳುವುದಷ್ಟೇ ಆತನ ಕೆಲಸ. ಇರುವ ಜಾಗ ಬ್ಯಾಂಕಿಗೆ ಅಡವಿಟ್ಟು ಸಾಲ ತಂದು ವರದಕ್ಷಿಣೆ ಕೊಡುವುದೆಂದು ನಿರ್ಣಯವಾಯ್ತು. ಬ್ಯಾಂಕಿನ ವ್ಯವಹಾರ ಸರಿಯಾಗಿ ಗೊತ್ತಿಲ್ಲದ ಅಪ್ಪ ಅವರ ಅಣ್ಣನ ಮಗನನ್ನು ಜೊತೆ ಮಾಡಿಕೊಂಡು ಪೇಟೆಗೆ ಹೋಗಿ ವ್ಯವಹಾರ ಮುಗಿಸಿ ಹಣ ಬ್ಯಾಂಕಿನಲ್ಲಿಟ್ಟು ಬಂದಿದ್ದಾಯ್ತು. ಜಾಗದ ಮೇಲೆ ಕಣ್ಣಿಟ್ಟಿದ್ದ ಇವರ ಅಣ್ಣನ ಮಗ ಯಾಕಿಷ್ಟು ಅವಸರದಲ್ಲಿ ವರದಕ್ಷಿಣೆ ಕೊಟ್ಟು ಮದುವೆ ಮಾಡುವುದು ಯಾರಾದರೂ ಬಡ ಹುಡುಗ ಸಿಗುತ್ತಿರಲಿಲ್ಲವೇ – ಎಂದು ತಕರಾರು ತೆಗೆದು ಮುನಿಸಿನಿಂದಲೇ ವಾಪಸು ಹೋದರು. ಮದುವೆ ಹತ್ತಿರದ ದೇವಸ್ಥಾನದಲ್ಲಿ. ಆಗ ಛತ್ರ, ಮಂಟಪ–ಅದ್ದೂರಿಯ ಮಾತೇ ಇರಲಿಲ್ಲ. ಹಳ್ಳಿಯ ದೇವಸ್ಥಾನದ ಪ್ರಾಂಗಣದಲ್ಲಿ ಒಂದು ಕಡೆ ಎರಡು ಮಣೆ ಇರಿಸಿ ನಾಲ್ಕು ಕಂಬ ಕಟ್ಟಿ ಬೇಗಡೆ ಅಂಟಿಸಿದರೆ ಮದುವೆ ಮಂಪಟ ರೆಡಿ. ಅರ್ಚಕರೇ ಪುರೋಹಿತರಾಗಿ ಎಲ್ಲ ಹೊಣೆ ಹೊತ್ತು ಮದುವೆ ಮಾಡಿಸುತ್ತಿದ್ದರು. ವಿಪರೀತ ಶಾಸ್ತ್ರಗಳೂ ಇರುತ್ತಿರಲಿಲ್ಲ.

ವರನ ಕಾಶೀಯಾತ್ರೆ – ಧಾರೆ – ಕನ್ಯಾದಾನ – ಮಾಂಗಲ್ಯ ಧಾರಣೆ – ಹೋಮ – ಅರುಂಧತೀ ದರ್ಶನ – ಅಲ್ಲಿಗೆ ಮದುವೆ ಮುಗಿಯುತ್ತಿತ್ತು. ಸರಿ, ಮದುವೆಗೆ ವಾರ ಇರುವಾಗಲೇ ಹಣಕ್ಕಾಗಿ ವರನ ಅಪ್ಪನ ತಕರಾರು. ಕೊಡುತ್ತೇನೆ, ಇನ್ನೂ ಸಮಯವಿದೆ. ಮದುವೆಯ ದಿನವೇ ಕೊಡುವುದು. ಮತ್ತೆ ಮೋಸ ಮಾಡಿದರೆ? ಮೊದಲೇ ಕೆಟ್ಟ ಜಾತಕ – ಏನು ಅನಾಹುತ ಆಗುವುದೋ ಎಂಬ ದಿಗಿಲು! ಅದಾಗದು, ಈಗಲೇ ಕೊಡಬೇಕೆಂಬ ಒತ್ತಾಯ – ಒಂದು ಪುಟ್ಟ ಜಗಳವೇ ಆಯ್ತು. ಅದೋ ಮದುವೆ ದಿನ ಬಂದೇ ಬಿಟ್ಟಿತು. ಪುಷ್ಪಾಳ ವಯಸ್ಸು ಹದಿನೆಂಟು, ವರನದ್ದು ಇಪ್ಪತ್ತು. ಮದುವೆ ದಿನವೂ ಅನಂತನನ್ನು ಕರೆತರಲಿಲ್ಲ ಯಾಕೆ?

ಹಿಂದಿನ ದಿನವೇ ಅಪ್ಪ ಪೇಟೆಗೆ ಹೋಗಿ ತಾನು ಇಟ್ಟ ಹಣ ಪಡೆಯಲು ಬ್ಯಾಂಕಿನ ಕಡೆ ಹೆಜ್ಜೆ ಹಾಕಿದರು. "ನಿಮಗೊಬ್ಬರಿಗೇ ಕೊಡುವಂತಿಲ್ಲ, ಇಬ್ಬರ ಹೆಸರಿನಲ್ಲಿರುವ ಜಾಯಿಂಟ್ ಅಕೌಂಟ್ ಅದು. ಅವರನ್ನೂ ಕರೆತನ್ನಿ" ಎಂದರು ಬ್ಯಾಂಕಿನವರು. ಇವರಿಗೆ ಅರ್ಥವಾಗಲಿಲ್ಲ. ಚಾಲಾಕಿ ಅಣ್ಣನ ಮಗ ಇಬ್ಬರ ಹೆಸರಿನಲ್ಲೂ ಖಾತೆ ತೆರೆದು ಹಣ ಇರಿಸಿ ದೂರದ ತನ್ನ ಮನೆಗೆ ಹೋಗಿ ಮದುವೆಗೂ ಬಾರದೆ ಆರಾಮವಾಗಿದ್ದ. ಇವರನ್ನೇ ಅಲ್ಲವೇ ದಾಯಾದಿಗಳು ಎನ್ನುವುದು! ಆಕಾಶವೇ ಕಳಚಿ ಬಿದ್ದಂತಾಗಿ ಅಪ್ಪ ಊರಿಗೆ ಹಿಂದಿರುಗಿ ದೇವಸ್ಥಾನಕ್ಕೆ ಬೆಳಿಗ್ಗೆಯೇ ಬೇಗ ಬಂದರು. ಎಲ್ಲರಿಗೂ ಗೊತ್ತಾದರೆ ಅವಮಾನ. ಏನು ಮಾಡುವುದು? ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳಬೇಕಲ್ಲವೆ – ಇಲ್ಲಿ ನೋಡಿದರೆ ವಿಧಿಗಳೆಲ್ಲ ಆಗಲೇ ಪ್ರಾರಂಭವಾಗಿವೆ. ಸ್ವಲ್ಪ ಸಮಯದಲ್ಲೇ ಧಾರೆ ಎರೆಯಬೇಕು. ಇವರನ್ನೇ ಎದುರು ನೋಡುತ್ತಿದ್ದ ವರನ ಅಪ್ಪನಿಗೆ ಇವರ ಸಪ್ಪೆ ಮುಖ ನೋಡಿ ಅನುಮಾನ ಬಲವಾಯಿತು. ಹಣಕ್ಕೆ ಬೇಡಿಕೆ ಇಟ್ಟರು. ಬೇರೆಲ್ಲೂ ಹಣ ಹೊಂದಿಸಲು ಸಮಯವಿಲ್ಲ. ತಕ್ಷಣಕ್ಕೆ ಜಾರಿಕೊಳ್ಳಲು ಒಂದು ಸುಳ್ಳು ಹೇಳಿದರು. ಸಾವಿರ ಸುಳ್ಳು ಹೇಳಬಹುದಲ್ಲವೇ ಮದುವೆ ಮಾಡಲು? ಧಾರೆಯಾಗಲಿ, ಕೊಡುತ್ತೇನೆ. ಸರಿ, ಧಾರೆ ಎರೆಸಿಕೊಳ್ಳಲು ಮಂಟಪದ ಕಡೆ ಸವಾರಿ ಹೋಯ್ತು. ಮಂಟಪದಲ್ಲಿ ಧಾರೆ ಎರೆದುಕೊಡುವಾಗ ದಕ್ಷಿಣೆ ಇಡುವುದು ಪದ್ಧತಿ. ಅದೇ ವರದಕ್ಷಿಣೆ. ಅದೀಗ ಬೆಳೆದು ಭೂತಾಕಾರವಾಗಿದೆ. ದಕ್ಷಿಣೆ ಕೊಟ್ಟಿಲ್ಲವಾದರೆ ಕನ್ಯಾದಾನಕ್ಕೆ ಬೆಲೆ ಇಲ್ಲ. ಮಗಳನ್ನು ಧಾರೆಯೆರೆದು ಕೊಡುವಾಗ ಅಪ್ಪ ಐದು ರೂಪಾಯಿ ದಕ್ಷಿಣೆ ಇಟ್ಟರು ಸಾಂಕೇತಿಕವಾಗಿ. ಎರಡು ದಿನಗಳಲ್ಲಿ ಮಾತಾಡಿದಂತೆ ಹಣ ಕೊಡುವೆನೆಂದೂ, ಹಣ ಬ್ಯಾಂಕಿನಲ್ಲಿದ್ದು ಇಬ್ಬರ ಹೆಸರಿನಲ್ಲಿಟ್ಟಿದ್ದು ನನಗೆ ಗೊತ್ತಿರಲಿಲ್ಲವೆಂದೂ ಆತ ಮದುವೆಗೆ ಬಂದಿಲ್ಲವೆಂದೂ ವಿನೀತರಾಗಿ ತಾನು ಮೋಸಹೋದದ್ದನ್ನು ಪುಷ್ಪಾಳ ಅಪ್ಪ ಸತ್ಯ ಹೇಳಿ, ತಪ್ಪಾಯಿತೆಂದು ಒಪ್ಪಿಕೊಂಡರು. ಸತ್ಯವನ್ನೇ ಸುಳ್ಳೆಂದು ನಂಬುವ ಕಾಲ ಇದು. ಅಬ್ಬಾ ಈ ಮದುವೆಯ ವ್ಯವಹಾರವೇ – ಇನ್ನು ಇದು ಜಾನುವಾರುಗಳ ಮಾರಾಟದ ವ್ಯವಹಾರಕ್ಕಿಂತಲೂ ಕೀಳು!

ಅದೆಲ್ಲಿತ್ತೋ ಭಾರೀ ಸಿಟ್ಟು ವರನ ಅಪ್ಪನನ್ನು ಕೆಂಡಾಮಂಡಲವಾಗಿಸಿತು. ಮೋಸ ಇದು, ಅನ್ಯಾಯ, ಇಂಥ ಸುಳ್ಳುಗಾರರ ಮಗಳು ನಮಗೆ ಬೇಡ. ನಾವು ಮರ್ಯಾದಸ್ಥರು. ಎದ್ದೇಳೋ ಮಗನೆ, ತಾಳಿ ಕಟ್ಟಬೇಡ. ಬೇರೆ ಹುಡುಗಿಯೊಂದಿಗೆ ಇಲ್ಲಿಯೇ ಇದೇ ಜಾಗದಲ್ಲಿ ಅದೇ ಮುಹೂರ್ತಕ್ಕೆ ಮದುವೆ ಮಾಡುತ್ತೇನೆ. ಯಾರಾದರೂ ಇದ್ದರೆ ಮುಂದೆ ಬನ್ನಿ. ಇದು ಮದುಮಗನ ಅಪ್ಪನ ಘೋಷಣೆ. ಎಲ್ಲ ಕಡೆ ಗಲಾಟೆ – ಗುಸು – ಗುಸು – ಹಾಗಂತೆ – ಹೀಗಂತೆ, ತಲೆಗೊಂದು ಮಾತು. ಪುಷ್ಪಾಳ ಅಮ್ಮನಿಗೆ ಕಣ್ಣೀರ ಹೊಳೆಯೇ ಹರಿಯಿತು. ಅಬ್ಬಾ, ಹೆಣ್ಣಿನ ಜನ್ಮವೇ! ಈ ಗಂಡಸರು ಆಡಿದ್ದೇ ಆಟವೇ? ಏನು ಮಾಡುವುದೀಗ? ಮದುವೆ ಮುಗಿಯಲಿ, ಖಂಡಿತ ಕೊಡಿಸುತ್ತೇನೆ ಎಂಬ ಅವಳ ಕ್ಷೀಣ ಧ್ವನಿ ಅಲ್ಲಿನ ಜೋರು ಬೊಬ್ಬೆ ಗಲಾಟೆಗಳ ನಡುವೆ ಯಾರ ಕಿವಿಗೂ ಬೀಳಲಿಲ್ಲ. ಮದುವೆ ನಿಶ್ಚಯವಾಗಿ, ಮಂಟಪದಲ್ಲಿ ಆ ಮದುವೆ ನಡೆಯದೆ ಹೋದರೆ ಆ ಹೆಣ್ಣನ್ನು ಮುಂದೆ ಯಾರೂ ಮಾಡಿಕೊಳ್ಳುವುದಿಲ್ಲ. ಇದು ಶಾಸ್ತ್ರದಲ್ಲೆಲ್ಲೂ ಇಲ್ಲದ ಅಲಿಖಿತ ಒಪ್ಪಂದ! ಆದರೆ ಹುಡುಗನಿಗಾದರೆ ಅಲ್ಲೇ ಬೇರೆ ಹೆಣ್ಣಿನೊಂದಿಗೆ ಲಗ್ನ ಆಗುತ್ತದೆ. ಅಬ್ಬಾ... ಹಿಂದೂಗಳಲ್ಲಿನ ಕಟ್ಟಳೆಗಳೇ, ಹೆಣ್ಣಾಗಿ ಹುಟ್ಟಲೇಬಾರದು! ಅರ್ಚಕರು, ಪುಷ್ಪಾಳ ಬಂಧುಗಳು, ಅಪ್ಪ ಅಮ್ಮ ಎಷ್ಟೆಲ್ಲ ಪರಿಪರಿಯಾಗಿ ಕೇಳಿಕೊಂಡರೂ ವರನ ತಂದೆಯ ಮನಸ್ಸು ಕರಗಲೇ ಇಲ್ಲ. ಅವರು ಕೋಪೋದ್ರಿಕ್ತರಾಗಿ ಕಂಪಿಸುತ್ತಿದ್ದರು. ಅವರದ್ದು ಒಂದೇ ರಾಗ – ಹಣ ಕೊಡಲಿ, ತಾಳಿ ಕಟ್ಟುತ್ತೇವೆ. ಇವರದ್ದು ಅದೇ ಉತ್ತರ – ಎರಡು ದಿನದಲ್ಲಿ ಕೊಡುತ್ತೇವೆ. ಮದುವೆ ಮುಂದುವರಿಯಲಿ. ಹೆಣ್ಣೆಂದರೆ ಇಲ್ಲಿ ಪಣಕ್ಕಿಟ್ಟ ವಸ್ತು. ಹೆಣ್ಣುಗಳಿಗೇನು ಬರವೇ ಈ ದೇಶದಲ್ಲಿ! ನೋಡ ನೋಡುತ್ತಿದ್ದಂತೆಯೇ ಅಲ್ಲಿನ ಚಿತ್ರಣವೇ ಬದಲಾಯಿತು. ಮಗಳೊಡನೆ ಮದುವೆಗೆ ಬಂದಿದ್ದ ಓರ್ವ ಕ. ಪಿ. (ಕನ್ಯಾಪಿತೃ) ತನ್ನ ಮಗಳನ್ನು ಮದುವೆ ಮಾಡಿಕೊಡಲು ತಯಾರಾದ. ಅವಳೂ ಪುಷ್ಪಾಳಿಗೆ ಪರಿಚಿತಳೇ. ಲಗ್ನಕ್ಕಾಗಿ ಇನ್ನೊಂದು ಹೆಣ್ಣು ಬಲಿಪಶು.

ಮದುವೆ ಮಾಡಿಸಲು ಅರ್ಚಕರಿಗೆ ಒತ್ತಾಯಿಸಿದರು. ಅವರು ಪ್ರತಿಭಟಿಸಿದರು. "ಇದು ದೇವಸ್ಥಾನ, ಖುಷಿ ಬಂದಂತೆ ನಡೆದುಕೊಳ್ಳುವ ಹಾಗಿಲ್ಲ. ಪುಷ್ಪಾಳ ಮದುವೆಯೇ ಇಲ್ಲಿ ನಡೆಯಲಿ. ನಿಮ್ಮ ಬೇಡಿಕೆಯ ಹಣ ಕೊಡಿಸುವ ಜವಾಬ್ದಾರಿ ನನ್ನದು. ಅರ್ಧಕ್ಕೆ ಮದುವೆ ನಿಲ್ಲಿಸಬೇಡಿ. ತಾಳಿ ಕಟ್ಟಿ ಪುಣ್ಯ ಕಟ್ಟಿಕೊಳ್ಳಿ" ಎಂದರೂ ಬೆಲೆ ಕೊಡಲಿಲ್ಲ. ಕೊನೆಗೆ ಅರ್ಚಕರು – ಬೇರೆ ಹೆಣ್ಣಿನ ಜೊತೆ ಮದುವೆ ನೀವು ಬೇರೆ ಕಡೆ ಮಾಡಿಕೊಳ್ಳಿ. ಇಲ್ಲಿ ನಾನು ಅವಕಾಶ ಕೊಡುವುದಿಲ್ಲ. ತೊಲಗಿ ಇಲ್ಲಿಂದ – ಎಂದು ಕೋಪೋದ್ರಿಕ್ತರಾಗಿ ನುಡಿದರು. ಮುಹೂರ್ತದ ಸಮಯ ಹತ್ತಿರ ಬಂದಿದ್ದರಿಂದ ಇನ್ನೇನೂ ಮಾಡಲಾಗದೆ ವರನ ಅಪ್ಪ ಮಗನನ್ನು ದರದರನೆ ಎಳೆದುಕೊಂಡು ಹೊರಗೆ ಬಂದರು. ದೇವಸ್ಥಾನದ ಹೊರಗಿರುವ ದೊಡ್ಡ ಆಲದ ಮರದಡಿಯಲ್ಲಿ ನಿಮಿಷಾರ್ಧದಲ್ಲಿ ಧಾರೆ ಎರೆಸಿಕೊಂಡು, ತಾಳಿ ಬಿಗಿಸಿ ತನ್ನ ಹಟ ಗೆಲ್ಲಿಸಿಕೊಂಡೇ ಬಿಟ್ಟರು. ಅಬ್ಬಾ, ಗಂಡು ಹೆತ್ತವರ ಆಟಾಟೋಪವೇ. ವಿವೇಚನೆಯೇ ಇಲ್ಲವೇ ಈ ಸಮುದಾಯಕ್ಕೆ?

ಮತ್ತೆ ಗಲಾಟೆ, ಬೊಬ್ಬೆ, ಮಾತಿನ ಚಕಮಕಿ, ಧಾರೆಯೆರೆದ ವಧುವನ್ನೇನು ಮಾಡುವುದು? ಹೆಣ್ಣನ್ನು ಒಬ್ಬನಿಗೆ ಮಾತ್ರ ತಾನೇ ಧಾರೆಯೆರೆಯುವುದು? ಮತ್ತೆ ಬೇರೆ ಮದುವೆ ನಡೆಯುತ್ತದೆಯೇ ನಿಮ್ಮ ಶಾಸ್ತ್ರದಲ್ಲಿ? ಅದಕ್ಕೆ ಅವರ ಉತ್ತರ "ನೀವು ಮಾತಿಗೆ ತಪ್ಪಿದ್ದರಿಂದ ಹೀಗಾಯ್ತು. ತಪ್ಪು ನಿಮ್ಮದೇ." ಇವರೇನು ಕಡಿಮೆಯೇ "ನಾನು ಶಾಸ್ತ್ರದಲ್ಲಿರುವಂತೆ ಐದು ರೂಪಾಯಿ ದಕ್ಷಿಣೆ ಇಟ್ಟಿದ್ದೇನೆ. ಲೋಪ ನಡೆದಿಲ್ಲ. ಇನ್ನವಳು ನಿಮ್ಮವಳು. ಉಳಿದ ಹಣ ಬರುತ್ತದೆಂದು ಹೇಳಿದೆನಲ್ಲ" ವಧುವಿನ ಅಪ್ಪನ ಸಮಜಾಯಿಷಿ. "ನಿಮಗವಳು ಹೊರೆಯಾಗಿದ್ದರೆ ಸುಳ್ಳು ಹೇಳಿ ಮದುವೆ ಮಾಡಿ ಕಳಿಸುವುದು ಬೇಡ. ಧಾರೆಯಾಗಿದ್ದರೆ ಕಳಿಸಿ ನಮ್ಮ ಮನೆಗೆ. ನಮ್ಮಲ್ಲಿ ಬೇಕಾದಷ್ಟು ಕೆಲಸ ಇದೆ. ಮಾಡಿಕೊಂಡಿರುತ್ತಾಳೆ" ಇದು ವರನ ಅಪ್ಪನ ತೀರ್ಪು. ಮದುವೆಯ ಸಡಗರ ಕಳೆದು ಮೀನು ಮಾರ್ಕೆಟಾಯಿತು ಆ ದೇವಸ್ಥಾನ. ಅಬ್ಬಾ, ಹೊರೆಯಾದರೆ ಅವರ ಮನೆಗೆ ಹೋಗಿ ಇರಬೇಕಂತೆ! ಹೆಣ್ಣುಗಳನ್ನು ಏನೆಂದುಕೊಂಡಿದ್ದಾರೋ ಈ ಧರ್ಮಶಾಸ್ತ್ರ ಓದಿದವರು! ಹೆಣ್ಣಿಗೆ ಕಣ್ಣೀರೇ ಗತಿ. ಅವಳ ಕಣ್ಣುಗಳು ಸಮುದ್ರಕ್ಕಿಂತ ಆಳ. ಎಷ್ಟು ಅತ್ತರೂ ನೀರು ಮುಗಿಯುವುದಿಲ್ಲ. ಇದನ್ನೆಲ್ಲ ಕೇಳುತ್ತ ನಿಂತಿದ್ದ ಪುಷ್ಪಾಳ ಅಮ್ಮನಿಗೆ ಭೂಮಿ ಬಾಯ್ದೆರೆದು ನುಂಗಬಾರದೇ – ಆ ಸೀತಾ ಮಾತೆಯನ್ನಾದರೆ ನೆಲ ಬಿರಿದು ನುಂಗಿ ಬಿಟ್ಟಿತ್ತಂತೆ! ಇನ್ನು ತಲೆ ಎತ್ತಿ ಹೇಗೆ ಊರಲ್ಲಿರುವುದು? ಗೊಳೋ ಎಂದು ಅಳಲು ಪ್ರಾರಂಭಿಸಿದಳು. ಅಷ್ಟರಲ್ಲಿ ಯಾರೋ ಒಬ್ಬರು ಬಂದು ಫಟ್ಟೆಂದು ಚಿಟಿಕೆ ಹೊಡೆದು "ನೀವು ತಯಾರಿದ್ದರೆ ಅವರಂತೆಯೇ ಇಲ್ಲೇ, ಈಗಲೇ ಮದುವೆ. ಒಬ್ಬ ವರ ಒಪ್ಪಿದ್ದಾನೆ. ಮಂಟಪದಿಂದ ಹೆಣ್ಣು ಖಾಲಿ ಹೋಗಬಾರದು. ಏನಂತೀರಿ?" ಎಂದಾಗ ವರನನ್ನು ನೋಡಲು ಎಲ್ಲರೂ ಅತ್ತ ನಡೆದರು. ಮದುವೆಗೆಂದು ಬಂದು ಜಮಖಾನದ ಮೇಲೆ ಕುಳಿತಿದ್ದ. ಆತನೊಬ್ಬ ಸಕಲಕಲಾವಲ್ಲಭ. ದುಶ್ಚಟಗಳೆಲ್ಲದರ ದಾಸ. ಪಿತ್ರಾರ್ಜಿತ ಆಸ್ತಿಯನ್ನು ಜೂಜಾಡಿ ಪೂರ್ತಿ ಕಳಕೊಂಡವ. ಕಸುಬು ಯಾವುದೂ ಇಲ್ಲ. ಉಂಡಾಡಿಯಾಗಿ ಊರೆಲ್ಲ ತಿರುಗಿ ಹೊಟ್ಟೆ ಹೊರೆಯುವವ. ಎಲ್ಲಿ ಯಾವುದೇ ಮದುವೆ–ಮುಂಜಿ–ಪೂಜೆ–ಯಾಗ–ಯಜ್ಞ ಏನೇ ಇರಲಿ. ಯಾವುದೇ ಆಮಂತ್ರಣವಿಲ್ಲದೆ ಅಲ್ಲಿ ಊಟದ ಸಮಯಕ್ಕೆ ಹಾಜರ್. ಅವನಿಗೆ ಈಗ ಗ್ರಹಚಾರ ಸರಿ ಇಲ್ಲವಂತೆ. ಒಂದು ಮದುವೆ ಮಾಡಿದರೆ ಎಲ್ಲ ಸರಿಹೋಗುತ್ತದಂತೆ. ಇದು ಊರಲ್ಲಿ ಅವನ ಬಗ್ಗೆ ಇರುವ ಅಸಲು ಕಥೆ. ಆದರೆ ಅವನಿಗೆ ಹೆಣ್ಣು ಕೊಟ್ಟು ಮದುವೆ ಮಾಡಿ ಅವನು ಸರಿ ಹೋಗುವುದು ನಿಜವೇ ಎಂದು ನೋಡಿ ಪ್ರಯೋಗ ಮಾಡಲು ಯಾರೂ ಸಿದ್ಧರಿಲ್ಲ. ಇಂಥ ಸಮಯಕ್ಕಾಗಿಯೇ ಕಾಯುತ್ತಿರುವ ಈ ವರ ಮಹಾಶಯನನ್ನು ನೋಡಿ – ಹೋ –

ಈಗ ಪುಷ್ಪಾಳ ಅಮ್ಮನಿಗೆ ಅದೆಲ್ಲಿತ್ತೋ ರೋಷ! ಸಾಕ್ಷಾತ್ ರಣಚಂಡಿಯೇ ಆದಳು. ಇದನ್ನೆಲ್ಲ ಮಂಟಪದಲ್ಲಿ ಧಾರೆ ಎರೆಸಿಕೊಂಡು ಕೂತಿದ್ದ ಪುಷ್ಪಾ ಬೆರಗುಗಣ್ಣಿನಿಂದ ನೋಡುತ್ತಿದ್ದಳು. ಈ ಕಿತ್ತಾಟ ತನಗಾಗಿಯೇ ಎಂದು ಅವಳಿಗೂ ಈಗ ಅರ್ಥವಾಗಿತ್ತು. ಮೆಲ್ಲನೆ ಎದ್ದು ಬಂದು ಅಮ್ಮನ ಪಕ್ಕ ನಿಂತುಕೊಂಡಳು.

ಮಗಳ ಕೈ ಹಿಡಿದುಕೊಂಡು ಅಮ್ಮ ಗಟ್ಟಿಯಾಗಿ "ಏಯ್ ಪುಷ್ಪಾಳನ್ನು ಈತನಿಗೆ ಗಂಟುಹಾಕುತ್ತೀರೇನು? ನಾನಿರುವವರೆಗೆ ಬಿಡಲಾರೆ. ಅವಳ ಬದುಕನ್ನು ಬರಡಾಗಿಸುತ್ತೀರಾ? ನನ್ನ ಮಗಳು ಬಿಟ್ಟಿ ಬಿದ್ದಿಲ್ಲ, ಕಷ್ಟಪಟ್ಟು ಬೆಳೆಸಿದ್ದೇನೆ. ನಮ್ಮನ್ನು ನಮ್ಮ ಪಾಡಿಗೆ ಬಿಟ್ಟು ಬಿಡಿ. ನನ್ನ ಮಗಳಿಗೆ ಬದುಕುವುದು ಹೇಗೆಂದು ನಾನು ಕಲಿಸುತ್ತೇನೆ. ನಿಮ್ಮ ಸಮಾಜವೂ ಬೇಡ, ನಿಮ್ಮ ಸಹವಾಸವೇ ಬೇಡ. ನಿಮ್ಮ ಯೋಗ್ಯತೆಗಿಷ್ಟು ಬೆಂಕಿ ಹಾಕ! ಅಯೋಗ್ಯರು" ಹೀಗೆನ್ನುತ್ತ ಯಾರ ಮಾತೂ ಕೇಳದೆ ಮಗಳನ್ನು ಕರೆದುಕೊಂಡು ಮನೆಯ ಕಡೆ ನಡೆದಳು. ಅರ್ಚಕರಿಗೆ ಹಾಗಲಕಾಯಿ ಜಜ್ಜಿ ಬೇವಿನ ಕಾಯಿ ಜತೆಗೆ ಬಾಯಿಗಿಟ್ಟಷ್ಟು ಕಹಿ ಅನುಭವವಾಯ್ತು.

* * *

ಪುಷ್ಪಾಳನ್ನು ಓದಿಸುವುದೆಂದು ಸರ್ವಾನುಮತದ ನಿರ್ಣಯವಾಯ್ತು. ದೇವಸ್ಥಾನದ ದುರ್ಘಟನೆಯಿಂದ ಮನನೊಂದ ಅರ್ಚಕರೂ ಪುಷ್ಪಾಳ ಮನೆಗೆ ಬಂದು ಕೈಲಾದ ಸಹಾಯ ಮಾಡುವೆನೆಂದು ಹೇಳಿದರು. ಅವರ ಬಂಧುವೊಬ್ಬರು ಪೇಟೆಯ ಮನೆಯಲ್ಲಿದ್ದಾರೆ ಎಂದೂ ಅಲ್ಲಿ ಬಿಡುವುದಾದರೆ ಮಾತನಾಡುವೆನೆಂದು ಹೇಳಿದರು. ಎಲ್ಲರೂ ಒಪ್ಪಿದರು. ಹುಡುಗಿ ಓದಿ ಕೆಲಸಕ್ಕೆ ಸೇರಲಿ. ಹೆಣ್ಣು ಮಕ್ಕಳಿಗೆ ವಿದ್ಯೆ ಇಂದು ಅವಶ್ಯ – ಇಲ್ಲವಾದರೆ ಹುರಿದು ಮುಕ್ಕಿ ತಿನ್ನುತ್ತಾರೆ ಹೆಣ್ಣುಗಳನ್ನು – ಎಂದು ಎಲ್ಲರೂ ಸಹಮತ ವ್ಯಕ್ತ ಪಡಿಸಿದರು. ಹತ್ತಿರದ ಬಂಧು ಒಬ್ಬರು ಹಣಕಾಸಿನ ವ್ಯವಸ್ಥೆ ಮಾಡಿ ವಾರಕ್ಕೊಮ್ಮೆ ಅವಳನ್ನು ಮನೆಗೆ ಕರೆತಂದು ಮತ್ತೆ ಪೇಟೆಗೆ ತಲುಪಿಸುವ ಹೊಣೆ ಹೊತ್ತರು. ಪೇಟೆ ಹತ್ತು ಮೈಲಿ ದೂರ. ನಡೆದು ಹೋಗಲಾಗದು. ಅಮ್ಮ ಊರಿನ ಮನೆಯಲ್ಲೇ ಇದ್ದು ಜಾಗದಲ್ಲಿ ದುಡಿದು ನಾಲ್ಕು ಕಾಸು ಜಾಗ್ರತೆಯಿಂದ ಉಳಿಸಿ ಮಗಳ ಕೈಗಿಡಲಾರಂಭಿಸಿದರು. ಅಮ್ಮನೂ ಕೆಲವೊಮ್ಮೆ ಪೇಟೆಗೆ ಹೋಗಿ ಮಗಳನ್ನು ಕರೆತರುವಳು. ಮತ್ತೆ ಬಸ್ಸಿನಲ್ಲಿ ಕುಳ್ಳಿರಿಸಿ ಕಳಿಸುವಳು. ಪೇಟೆಯ ಬದುಕು ಪುಷ್ಪಾಗೆ ಒಗ್ಗಿಕೊಳ್ಳಲಾರಂಭಿಸಿತು. ಹಲವು ಗೆಳತಿಯರು, ಶಾಲೆಯ ಪರಿಸರ, ವಿಧವಿಧವಾದ ಆಕರ್ಷಣೆಗಳು. ಆದರೆ ಎಲ್ಲವೂ ಆಕೆಗೆ ಎಟುಕದು. ಪ್ರತಿ ವಾರವೂ ಅಮ್ಮನ ಮನೆಗೆ ಬಂದು ಜೊತೆ ಯಲ್ಲಿದ್ದು ತನ್ನ ಸಂತೋಷವನ್ನೆಲ್ಲ ಹಂಚಿಕೊಂಡು ಹಿಂತಿರುಗುವಳು. ತಾನು ಓದಿ ಕೆಲಸ ಹುಡುಕಿ ನಿನ್ನನ್ನು ಚೆನ್ನಾಗಿ ನೋಡಿಕೊಳ್ಳುವೆನೆಂದು ಅಮ್ಮನಿಗೆ ಹೇಳುವಳು. "ಅಮ್ಮ, ನಿನಗಿಲ್ಲಿ ಒಬ್ಬಳಿಗೆ ಭಯ ವಾಗುವುದಿಲ್ಲವೇ" ಎಂದೂ ಕೇಳುವಳು. ಅಪ್ಪ ಎಲ್ಲಿ ಎಂದೂ ಕೇಳುವಳು. ತಮ್ಮ ಇನ್ನು ಬರುವುದಿಲ್ಲವೆಂದು ಅವಳು ಕ್ರಮೇಣ ಅರ್ಥಮಾಡಿಕೊಂಡಳು. ತನಗೊಂದು ಕೆಲಸ ಸಿಗಲಿ, ತಾನು ಏನೆಂದು ಎಲ್ಲರಿಗೂ ತೋರಿಸಿ ಕೊಡುತ್ತೇನೆಂದು ಮನದಲ್ಲೇ ಅಂದುಕೊಳ್ಳುವಳು.

ಹೀಗಿರಲು ಒಂದು ದಿನ ಅಮ್ಮನನ್ನು ನೋಡಲು ಮನೆಗೆ ಬಂದಾಗ ಅಮ್ಮನೂ ಅಪ್ಪನೂ ಜಗಳವಾಡು ತ್ತಿದ್ದುದನ್ನು ಕಂಡು ಪುಷ್ಪಾ ದಂಗಾದಳು. "ನಮಗೇಕೆ ಜಾಗ, ಗಂಡು ಮಗು ತೀರಿದ ಮೇಲೆ ಯಾರಿಗಿದು? ಮಾರಿಬಿಡೋಣ" ಎಂದು ಅಪ್ಪನೂ "ಅದೆಲ್ಲ




ಸಾಧ್ಯವಿಲ್ಲ, ನಾವೇನು ಬೀದಿಗೆ ಬೀಳುವುದೇ? ಇರುವುದೆಲ್ಲಿ? ಬೆಳೆದ ಮಗಳಿದ್ದಾಳೆ, ನೆನಪಿರಲಿ" ಎಂದು ಅಮ್ಮನೂ ಸೂರು ಕಿತ್ತುಹೋಗುವಂತೆ ಕಿತ್ತಾಡುತ್ತಿದ್ದರು. "ನನ್ನಣ್ಣನ ಮಗ ಇದ್ದಾನೆ. ನಮಗಿನ್ನು ಅವನೇ ಆಸರೆ. ಅಲ್ಲಿ ಹೋಗಿ ಇರೋಣ, ಪುಷ್ಪಾಗೆ ಮದುವೆ ಮಾಡುತ್ತಾನಂತೆ." ಅಪ್ಪ ಹೇಳಿದಾಗ – "ನೀವೆಲ್ಲ ಮದುವೆ ಮಾಡಿದ್ದು ನೋಡಿಲ್ಲವೇ ಚಂದ? ಅಷ್ಟಕ್ಕೂ ಅವಳ ಜಾತಕ ಸರಿ ಇಲ್ಲವೆಂದು ಊರೆಲ್ಲ ಡಂಗುರ ಹೊಡೆಸಿದರೆ ಇನ್ನೇನಾಗುತ್ತೆ?" ಅಮ್ಮ ಕೆಣಕಿದರು. ಅಪ್ಪನಿಗೆ ಪಿತ್ತ ನೆತ್ತಿಗೇರಿ, "ನಾನು ಜಾಗ ಮಾರುವವನೇ, ಮಾರಿದ ಹಣ ಅಣ್ಣನ ಮಗನ ಕೈಗಿತ್ತರೆ ನಮ್ಮನ್ನು ಕಡೆತನಕ ನೋಡುತ್ತಾನೆ" ಎಂದು ಭೀಷ್ಮ ಶಪಥ ಗೈದಂತೆ ಜೋರಾಗಿ ಕಿರುಚಿ ಮನೆಯಿಂದ ಹೊರಬಿದ್ದರು. ಅಂದಿನ ಜಗಳ ವಿಪರೀತಕ್ಕೆ ಹೋಗಿತ್ತು. ಒಂದು ರೀತಿಯ ಭಯ–ಆತಂಕ ಶುರುವಾಗಿತ್ತು. ಅಮ್ಮ ಕಣ್ಣೀರು ಹಾಕುತ್ತಾ "ಮಗಳೇ ಪುಷ್ಪಾ, ಯಾಕಮ್ಮಾ ನನ್ನ ಹೊಟ್ಟೇಲಿ ಹುಟ್ಟಿದೆ? ನಮ್ಮನ್ನು ಬದುಕಲು ಯಾರೂ ಬಿಡುವುದಿಲ್ಲ ಮಗು. ಹೆಣ್ಣು ಮಕ್ಕಳಿಗೆ ಚಿಕ್ಕಾಸೂ ಬೆಲೆಯಿಲ್ಲ. ಇವರು ಜಾಗ ಮಾರುತ್ತಾರಂತೆ. ನಾನೂ ನೀನೂ ಕೆರೆಯೋ ಬಾವಿಯೋ ನೋಡಿ ಕೊಳ್ಳಬೇಕಾದೀತು" ಎಂದು ಮಗಳನ್ನು ತಬ್ಬಿ ಕೊಂಡಳು. ಪುಷ್ಪಾಗೂ ಅಳು ಬಂತು. ತಾನು ಓದಿ ಕೆಲಸಕ್ಕೆ ಸೇರಿಕೊಳ್ಳದಿದ್ದರೆ ಯಾವುದೂ ಸರಿಯಾಗ ಲಾರದು ಎಂದೆನಿಸಿತವಳಿಗೆ. ಎಲ್ಲದಕ್ಕೂ ತಾನೇ ಕೇಂದ್ರಬಿಂದು ಎಂದು ಆಕೆಗೆ ಅನಿಸತೊಡಗಿತು.

* * *

ಮುಂದಿನ ವಾರವೇ ಆಘಾತಕರ ಸುದ್ದಿ ಬಂತು. ಪುಷ್ಪಾಳ ಅಪ್ಪ ಆತನ ಹೆಸರಿನಲ್ಲಿದ್ದ ಜಾಗವನ್ನು ಬೇರೆಯವರಿಗೆ ಮಾರಿದ್ದಾರೆಂದೂ ಮೂರು ತಿಂಗಳ ಒಳಗೆ ಮನೆಯನ್ನು ಖಾಲಿ ಮಾಡಿಕೊಡಬೇಕೆಂದೂ ಇಬ್ಬರೂ ಆತನ ಅಣ್ಣನ ಮನೆಗೆ ಹೋಗಿ ಇರಬೇಕೆಂದೂ ವರ್ತಮಾನ ಬಂತು. ಹೆಂಡತಿ, ಹೆಣ್ಣು ಮಗಳು ಇರುವಾಗ ಅದು ಹೇಗೆ ಒಬ್ಬರೇ ಜಾಗ ಮಾರುವುದೆಂದು ಅಮ್ಮ ಊರ ಪಟೇಲರೊಂದಿಗೆ ಕೇಳಿದಳು. ಅದಕ್ಕೆ "ನಮ್ಮ ದೇಶದ ಕಾನೂನುಗಳೆಲ್ಲಾ ಹೀಗೇ ಇವೆಯಮ್ಮಾ, ಸ್ವಂತ ಜಮೀನು ಒಬ್ಬರ ಹೆಸರಲ್ಲಿದ್ದರೆ ಅವರಿಗೆ ಮಾರಲು ಹಕ್ಕಿದೆ. ಏನೂ ಮಾಡಲಾಗದು" ಎಂದು ಅವರೂ ಬೇಸರದಿಂದ ನುಡಿದರು. "ನಿಮಗೆ ಸಹಾಯ ಬೇಕಿದ್ದರೆ ಹೇಳಿ, ಒಂದು ಕಂಪ್ಲೆಂಟು ಬರೆದು ಕೊಡಿ. ಕೋರ್ಟಿನಲ್ಲಿ ಕೇಸು ಹಾಕೋಣ. ನೀವು ಜಾಗ ಬಿಟ್ಟು ಕದಲಬೇಡಿ. ಏನು ಆಗುತ್ತದೋ ಮುಂದೆ ನೋಡೋಣ" ಎಂದು ಸಮಾಧಾನ ಹೇಳಿ ಮುಂದಿನವಾರ ಬಂದು ನನ್ನನ್ನು ಭೇಟಿ ಮಾಡಿ, ಮಾತನಾಡೋಣ ಎಂದು ಹೇಳಿದರು. ಇದೀಗ ಪರಿಸ್ಥಿತಿ ತುಂಬ ವಿಪರೀತಕ್ಕೆ ಹೋದಂತಾಯಿತು. ಬದುಕಿಗಾಗಿ ಇಬ್ಬರು ಹೆಣ್ಣುಮಕ್ಕಳು ಯುದ್ಧ ವೊಂದಕ್ಕೆ ಸನ್ನದ್ಧರಾಗಲೇಬೇಕಾಯಿತು. ಅಮ್ಮ ಬಂಧು ಗಳೊಂದಿಗೆ ಸಮಾಲೋಚಿಸಿದಳು. ಒಬ್ಬೊಬ್ಬರೂ ಜಾರಿಕೊಳ್ಳ ತೊಡಗಿದರು. "ಅಯ್ಯೋ, ನಿಮಗೇಕೆ ಜಾಗ, ಕೃಷಿ ಮಾಡಲು ಆಗದವರು ಜಾಗ ಇಟ್ಟುಕೊಂಡು ಏನು ಮಾಡುತ್ತೀರ?" "ನೀನು ಯಾರ ಮಾತೂ ಕೇಳುವವಳಲ್ಲ, ನಿನಗಿಷ್ಟ ಬಂದಂತೆ ಮಾಡು." "ಪೇಟೆ ಸೇರಿಕೊಂಡರೆ ಬದುಕಲು ನೂರಾರು ದಾರಿಗಳುಂಟು. ಪ್ರಾಯದ ಮಗಳನ್ನಿಟ್ಟು ಕೊಂಡು ಅಲ್ಲಿ ಒಬ್ಬಳೇ ಏನು ಮಾಡಲು ಸಾಧ್ಯ ನಿನಗೆ?" "ಅಲ್ಲ, ಅವತ್ತು ಮಗಳಿಗೆ ಬದುಕಲು ಕಲಿಸುತ್ತೇನೆ ಯಾರ ಹಂಗೂ ಬೇಡ, ಅಯೋಗ್ಯರು ಎಂದೆಲ್ಲ ಎಲ್ಲರ ಮುಂದೆ ಹೇಳಿ ದೇವಸ್ಥಾನದಿಂದ ಹೊರಗೆ ಬಂದೆ. ಆತನು ಅಲ್ಲದಿದ್ದರೆ ಇನ್ನಾರನ್ನಾದರೂ ನೋಡಿ ನಾವು ಪುಷ್ಪಾಳ ಮದುವೆ ಮಾಡುತ್ತಿರಲಿಲ್ಲವೇ? ಈಗ ನಮ್ಮನ್ನೇನು ಕೇಳುವುದು?" – ಹೀಗೆ ಒಬ್ಬೊಬ್ಬರೂ ಮಾತಾಡಿ ಈಗಲೇ ಆಗಿರುವ ಗಾಯದ ಮೇಲೆ ಇನ್ನಷ್ಟು ಉಪ್ಪು ಸುರಿದರು. ಪುಷ್ಪಾಳಿಗೆ ಬಂಧುಗಳು ಸಾಕಷ್ಟಿದ್ದಾರೆ. ಎಲ್ಲರೂ ಸೇರಿದರೆ ಎರಡು–ಮೂರು ಲಾರಿಗಳಲ್ಲೂ ತುಂಬಿ ತುಳುಕಾಡುವಷ್ಟು! ಇಂಥ ಸಮಯದಲ್ಲೆ ಅಲ್ಲವೇ ಬಂಧುಗಳ ನಿಜ ಬಣ್ಣ ಗೊತ್ತಾಗುವುದು? "ನಮಗೂ ಹಾಸಿ ಹೊದೆಯುವಷ್ಟು ಕಷ್ಟಗಳಿವೆ. ನಾವು ಯಾರಿಗೆ ಹೇಳೋಣ" ಎನ್ನುತ್ತಾರವರು. ಇದರ ಮಧ್ಯೆ ಇನ್ನೊಂದು ಆಘಾತ! ಪುಷ್ಪಾಳ ವಿದ್ಯಾಭ್ಯಾಸದ ಹೊಣೆ ಹೊತ್ತ ಬಂಧುವೊಬ್ಬರು ಅಕಸ್ಮಾತ್ತಾಗಿ ತೋಟದಲ್ಲಿ ತಿರುಗಾಡುವಾಗ ಹಾವು ಕಚ್ಚಿ ತಕ್ಷಣವೇ ತೀರಿಕೊಂಡರಂತೆ! ಅಮ್ಮ ಕಂಗೆಟ್ಟರು.

ಇದೇನಿದು? ಹೀಗೇಕಾಗುತ್ತದೆ. ವಿಧಿ ನಮ್ಮನ್ನೇ ಯಾಕೆ ಗುರಿಯಾಗಿರಿಸಿಕೊಂಡಿದೆ? ಇದೆಲ್ಲಾ ಪುಷ್ಪಾಳ ಕೆಟ್ಟ ಜಾತಕದ ಫಲ ಎಂದು ಬ್ರಾಹ್ಮಣ ಸಮುದಾಯ ಆಡಿಕೊಂಡು ನಾಲಗೆಯ ತೀಟೆ ತೀರಿಸಿಕೊಂಡಿತು. ಇಲ್ಲದ ಮೀಸೆ ತಿರುವಿಕೊಂಡರು ಜ್ಯೋತಿಷಿಗಳು. ಕೆಟ್ಟ ಜಾತಕವೆಂದು ಕೇಳಿ–ಕೇಳಿ ರೋಸಿಹೋಗಿತ್ತು ಪುಷ್ಪಾಗೆ! "ಕೆಟ್ಟ ಜಾತಕದಲ್ಲಿ ಹೆಣ್ಣು ಮಗು ಹುಟ್ಟಿದರೆ ತಕ್ಷಣ ಸಾಯಿಸಬೇಕು. ಯಾಕಾದರೂ ಬದುಕಿ ಸುತ್ತಾರೋ" ಎಂದು ನೊಂದುಕೊಂಡಳು. ಅದನ್ನು

# ಅಜ್ಜಿ, ಅಮ್ಮ, ನಾನು, ನನ್ನ ಮಗಳು

ಎರಡೆರಡು ಕಿಲೋ ಭಾರದ
ತೋಡೆ ಹಾಕ್ಕೊಂಡು ನನ್ನ ಅಜ್ಜಿ
ಅಡುಗೆ ಮನೆಯಿಂದ ಪಕ್ಕದ ಕೋಣೆಗೆ
ಪಕ್ಕದ ಕೋಣೆಯಿಂದ ಸ್ವತಃ ಅಡಿಗೆಮನೆಗೆ
ತಾನೇ ಸಾಮ್ರಾಜ್ಞಿಯ ಹಾಗೆ
ಡೌಲಿನಿಂದ ತಿರುಗುವಾಗ
ಭಾರದಿಂದ ಆಕೆಯ ಕಾಲುಗಳು
ತುಂಬಿ ಬರುತ್ತಿವೆ! ನೋಯುತ್ತವೆ! ಚುಚ್ಚುತ್ತವೆ!
ಕಾಲಿನ ಹಿಮ್ಮಡಿಗೆ ಕಪ್ಪು ಕಲೆ ಬಿದ್ದು
ಗಾಯ ಹೆಚ್ಚಾಗಿ ರಕ್ತ ಸೋರುತ್ತಿತ್ತು
ಆ ತೋಡೆಯ ಕೆಳಗೆ ಅರಿವೆ ಕಟ್ಟಿ
ಗಾಯಕ್ಕ ಕಾವು ಕೊಟ್ಟು
ರುಜ್ಯ ಮಾಡುತ್ತಿದ್ದಳು

ನನ್ನ ಅವ್ವ
ತೋಡೆ ಬಿಟ್ಟು ನಾಜೂಕಾದ
ಎರಡೆಳೆಯ ಕಾಲ್ಗೆಜ್ಜೆ
ಹಾಕಿಕೊಳ್ಳಲು ಶುರು ಮಾಡಿದಳು
ಈಗ ಕಾಲು ನೋಯುವುದಿಲ್ಲ! ಚುಚ್ಚುವುದಿಲ್ಲ!
ತನ್ನದೇ ಧಿಮಾಕಿನಲ್ಲಿ ಅವಳು
ಅಡಿಗೆಮನೆ, ಪಕ್ಕದ ಕೋಣೆ, ವರಾಂಡ
ಅಂಗಳ, ಮಹಡಿ, ಅಟ್ಟ ಹೀಗೆ
ಎಲ್ಲ ಕಡೆ ತಿರುಗುತ್ತಿದ್ದಳು
ಯಾವಾಗಲಾದರೂ ಒಮ್ಮೊಮ್ಮೆ ಕಾಲ್ಗೆಜ್ಜೆಗಳು
ಚುಚ್ಚುತ್ತಿದ್ದವು
ಸೀರೆಯ ಅಂಚು
ಹರಿಯುತ್ತಿತ್ತು
ಒಂದೊಂದೆ ಎಳೆಗಳು ಜೋತಾಡುತ್ತಿದ್ದವು
ಆದರೂ ಅವಳಿಗೆ ನಿರ್ಲಕ್ಷ್ಯ
ರಾಣಿಯ ಹಾಗೆ ಭರಭರಾಟಿಯಿಂದ
ನಡೆಯುತ್ತಿದ್ದಳು

ನಾನಾದರೂ
ಚುಚ್ಚುವ, ಗಾಯವಾಗುವ, ಹರಿಯುವ
ಯಾವ ಜಂಜಡವಿಲ್ಲದೆ
ತೋಡೆದ ಸರಿಸಾಟಿ ಕಾಲ್ಗೆಜ್ಜೆಯನ್ನೂ
ಗಾಳಿಗೆ ತೂರಿ ಬಿಟ್ಟೇನಿ. ಬಿಟ್ಟು
ಹಗುರಾದ ಚಪ್ಪಲ್, ಬೂಟ, ಸ್ಯಾಂಡಲ್
ಹಾಕ್ತಾ ಹಾಕ್ತಾ,

ಮನೆಯಿಂದ ಎಲ್ಲಾ ಕಡೆ ಓಡಾಡುತ್ತ
ನಾ ಹೊರಗ ಕಾಲಿಟ್ಟಿನಿ
ಆದರs ನನಗs ಗೊತ್ತಿಲದ್ಹಂಗ ಚಪ್ಪಲ್ ಜಾರ್ತಾ ಇದೆ.
ಬೂಟ್ ಚುಚ್ತಾ ಇದೆ. ಸ್ಯಾಂಡಲ್ ನಡತಾ ಇದೆ.
ಆದರೂ ಸಿಗಬೇಕಾದ ಸ್ವಾತಂತ್ರ್ಯಕ್ಕಾಗಿ
ನಾನು ಎಲ್ಲಾ ಎಲ್ಲಾನೂ ಸಹನ ಮಾಡಿಕೊಂಡಿನಿ

ಈಗ ಮಾತ್ರ
ನನ್ನ ಮಗಳು ಹೇಳ್ತಾಳ
ಅವ್ವಾ! ತೋಡೆ ಬೇಡ! ಪೈಂಜನ್ ಬೇಡ!
ಚಪ್ಪಲ್, ಬೂಟ್, ಸ್ಯಾಂಡಲ್ ಯಾವದೂ ಬೇಡ,
ಅವನ್ನ ಹಿಡಿಯೋದು ಬ್ಯಾಡ! ಜಾರೂದು ಬ್ಯಾಡ
ಯಾವ ಯಾವದೂ ಬ್ಯಾಡ,
ಮುಳ್ಳನ್ನೆ ಮುರಿಯುವಂತಹ
ಗಟ್ಟಿಯಾದ ಮಜಬೂತಾದ ಉಕ್ಕಿನಂತಹ ಕಾಲು
ಮುಂದಿನ ಶತಮಾನಕ್ಕಾದರೂ ಆಗಲಿ




ಮರಾಠಿ ಮೂಲ – ನೀಲಮ್ ಮಣಗಾಂವೆ
ಕನ್ನಡಕ್ಕೆ – ಡಾ॥ ದೇವಿಕಾ ಡಿ. ನಗರಕರ
ಮುಖ್ಯಸ್ಥರು, ಕನ್ನಡ ವಿಭಾಗ, ಶಿವನಂದ ಮಹಾವಿದ್ಯಾಲಯ
ಕಾಗವಾಡ – ೫೯೧ ೨೨೩

ಕೇಳಿ ಅವಳ ಅಮ್ಮನಿಗೆ ಹೊಟ್ಟೆಯೊಳಗೆ ಚೂರಿ ಹಾಕಿ ತಿರುವಿದಂತಾಯಿತು. ಅಮ್ಮನಲ್ಲವೇ ಸಮಾಧಾನ ಮಾಡಿದಳು. ಕೂಡಲೇ ಪಟೇಲರನ್ನು ಹುಡುಕಿಕೊಂಡು ಹೊರಟಳು.

✶ ✶ ✶

ಎಲ್ಲವನ್ನೂ ವಿವರವಾಗಿ ಊರ ಪಟೇಲರಿಗೆ ಅರುಹಿದಳು. ಅವರು ಜೈನ ಸಮುದಾಯದವರು. ಅಂತಃಕರಣವುಳ್ಳವರು. ಇವರ ಕೈಯಲ್ಲೊಂದು ಕಂಪ್ಲೇಂಟ್ ಬರೆಸಿ ವಕೀಲರ ಮೂಲಕ ಕಳಿಸಿದರು. ಜಾಗದ ಬಗೆಗಿನ ಕೇಸ್ ದಾಖಲಾಯಿತು. (ಮುಂದೆ ಈ ಕೇಸು ಜೀವ ತಳೆದು, ನ್ಯಾಯಾಲಯಂಗಳಲ್ಲಿ ಹಾವಿನಂತೆ ಹರಿದಾಡಿ, ಸುತ್ತಿ ಸುತ್ತಿ ಬಳಲಿ ಬೆಂಡಾಗಿ ಪ್ರಾಯ ಸಂದು ಹನ್ನೆರಡು ವರ್ಷಗಳಲ್ಲಿ ನಿತ್ರಾಣಗೊಂಡು "ತನ್ನ ಆಸ್ತಿ ಮಾರುವ ಹಕ್ಕು ಪಟ್ಟಾದಾರನಿಗೆ ಇದೆ" ಎಂಬ ತೀರ್ಪನ್ನು ಬೊಗಳಿ ಅಸುನೀಗಿತು.)

ಮನೆಯಲ್ಲಿ ಕೆಲ ಸಮಯ ಇಬ್ಬರೂ ಇದ್ದು ಹೇಗೋ ಜೀವನ ಸಾಗುತ್ತಿತ್ತು. ಪುಷ್ಪಾಳದ್ದು ತ್ರಿಶಂಕು ಸ್ಥಿತಿ. ಓದೂ ಇಲ್ಲ, ಜಾಗವೂ ಇಲ್ಲ, ಕೆಲಸವೂ ಇಲ್ಲ ! ಮದುವೆಯೂ ಇಲ್ಲ. ಪಟೇಲರ ಪ್ರಯತ್ನದಿಂದ ಮತ್ತೆ ಪುಷ್ಪಾಳನ್ನು ಪೇಟೆಯಲ್ಲಿ ಸದ್ಗೃಹಸ್ಥರೊಬ್ಬರ ಮನೆಯಲ್ಲಿ ಹೊಲಿಗೆ ಕಲಿಯಲೆಂದು ಬಿಡಲಾಯ್ತು. ಅವಳಮ್ಮನನ್ನು ಹಾಗೆಯೇ ಬೇರೊಂದು ಮನೆಯಲ್ಲಿ ಕೆಲಸಕ್ಕೆಂದು ಬಿಟ್ಟರು. ದಿನ ಕಳೆದಂತೆ ಅಮ್ಮನ ಒಡನಾಟದಿಂದ ಪುಷ್ಪಾ ದೂರವುಳಿಯಬೇಕಾಯ್ತು. ಇಬ್ಬರು ಹಲ್ಲು ಕಚ್ಚಿಕೊಂಡು ಸಹಿಸಲಾಗದೆ ಸಹಿಸಿಕೊಂಡರು. ಹೊಲಿಗೆ ಕಲಿಯಲೆಂದು ಹೋದವಳು ಖಾಸಗಿಯಾಗಿ ವಿದ್ಯೆ ಕಲಿಯುವ ಕಡೆ ಗಮನ ನೀಡಿ ಪರೀಕ್ಷೆ ಕಟ್ಟಿ ಪಾಸು ಮಾಡಿದಳು. ಇನ್ನು ಸ್ವಂತ ಮನೆ ಇಲ್ಲ. ಅಮ್ಮನಿರುವ ಮನೆ ಹೆಚ್ಚು ದೂರವೇನಿಲ್ಲ. ವಾರಕ್ಕೊಮ್ಮೆ ನೋಡಿ ಬರುವಳು. ಇದೀಗ ಕೆಲಸ ವೊಂದನ್ನು ಹುಡುಕುವ ಕಡೆ ಗಮನ. ಅದೊಂದೇ ಈಗ ಸಾಧಿಸಬೇಕಾದ ಗುರಿ. ಅಮ್ಮ ಹೊಟ್ಟೆಪಾಡಿಗಾಗಿ ದುಡಿಯುತ್ತಿದ್ದಳು. ಜೀವನ ಹೇಗೋ ಸಾಗುತ್ತಿತ್ತು. ಪುಷ್ಪಾಳಿಗೀಗ ಎಲ್ಲಿಲ್ಲದ ಧೈರ್ಯ ಬಂದಿತ್ತು. ಬಂಧುಗಳೆಲ್ಲಾ ಇವರ ಸುದ್ದಿ ಬಿಟ್ಟಿದ್ದರು. ಅಪ್ಪ ಅವರಣ್ಣನ ಮನೆಯಲ್ಲಿ ಠಿಕಾಣಿ ಹೂಡಿದ್ದರು. "ಅವರವರ ತಲೆಗೆ ಅವರವರ ಕೈ. ನಾವೇನು ಮಾಡೋಣ, ಹಣೆಯಲ್ಲಿ ಬರೆದದ್ದು ಕೈಯಿಂದ ಅಳಿಸಲಾಗದು" ಎಂದು ಎಲ್ಲರೂ ಒಣ ವೇದಾಂತ ಹೇಳುತ್ತಿದ್ದರು. ಅಪರೂಪಕ್ಕೊಮ್ಮೆ ಪುಷ್ಪಾ ಬಂಧುಗಳ ಮನೆಗೆ ಭೇಟಿ ನೀಡಿದರೆ – "ಎಷ್ಟು ದಿನದ ರಜೆ ಪುಷ್ಪಾ? ಅಲ್ಲಿ ಹೊಲಿಗೆ ಕ್ಲಾಸು ತಪ್ಪಿಸಿ

**ಬಣ (ಣ್ಣ)**

ಬಣ, ಬಣ್ಣ –
ಜಗತ್ತಿನ ಎರಡು
ದೊಡ್ಡ ಸಮಸ್ಯೆಗಳು !
(ಪರಸ್ಪರ ಪೂರಕ)

ಸಿಪಿಕೆ
ಮೈಸೂರು

ಬಂದೆಯಾ? ಹೀಗೆ ರಜೆ ಹಾಕಿದರೆ ನೀನಿರುವ ಮನೆಯವರು ಸಿಟ್ಟಾದಾರಲ್ಲವೆ?" ಎನ್ನುವರು. ಪುಷ್ಪಾ ಮರುದಿನವೇ ಹೊರಡುವಳು. ಪುಷ್ಪಾ – ಅಮ್ಮ ಇರುವ ಮನೆಯವರು ಅವರನ್ನು ಅನುಕಂಪದಿಂದ – ಅಕ್ಕರೆಯಿಂದ ನೋಡಿ ಕೊಳ್ಳುವರು. ಸಾಕಷ್ಟು ಕೆಲಸವನ್ನು ಮಾಡಿಸುವರು. ಪುಷ್ಪಾಗೆ ಶಾಲೆ ಕಲಿಯಲು, ಟೈಪ್‌ರೈಟಿಂಗ್, ಶಾರ್ಟ್ ಹ್ಯಾಂಡ್, ಹೊಲಿಗೆ, ಕಸೂತಿ ಕಲಿಯಲು ನೆರವಾದರು. ಬಂಧುಗಳಿಗಿಂತ ಇತರರೇ ಹೃದಯವಂತರೆಂದು ಪುಷ್ಪಾ ಕ್ರಮೇಣ ಕಂಡು ಕೊಂಡಳು. ಆಕೆಯ ಅಸಮಾಧಾನ ಜಾಸ್ತಿಯಾಗತೊಡಗಿತು. ಎಲ್ಲೆಂದರಲ್ಲಿ ಕೆಲಸಕ್ಕೆ ಪ್ರಯತ್ನಿಸತೊಡಗಿದಳು. ತನಗೊಂದು ಕೆಲಸ ಕೊಡಿಸಿ ಎಂದು ಎಲ್ಲರಿಗೂ ದುಂಬಾಲು ಬಿದ್ದು ಅಂಗಲಾಚಿ ಬೇಡತೊಡಗಿದಳು. ನೌಕರಿ ಸಿಕ್ಕರೆ ಎಲ್ಲಿಗೆ ಬೇಕಾದರೂ ಹೋಗಲು ಆಕೆ ಸಿದ್ಧಳಿದ್ದಳು. "ಸುಮ್ಮನಿರು, ಕೆಲಸ ಹುಡುಕುವುದೆಂದರೆ ಅದೇನು ಬ್ಯಾಟರಿ ಲೈಟು ಹಿಡಿದುಕೊಂಡು ತಿರುಗುವುದೇ, ನಿನಗೆ ಅನುಭವವಿಲ್ಲ. ಹಾಗೆಲ್ಲಾ ಹಗುರವಾಗಿ ಕೇಳಿಕೊಂಡು ತಿರುಗಬಾರದು. ಮೊದಲೇ ಚಿಕ್ಕ ಪ್ರಾಯದ ಹುಡುಗಿ, ದಾರಿ ತಪ್ಪಿಸುತ್ತಾರೆ. ಬೆರಳು ತೋರಿದರೆ ಹಸ್ತ ನುಂಗುತ್ತಾರೆ. ನಾವೆಲ್ಲಾ ಪ್ರಯತ್ನಿಸುತ್ತೇವೆ. ದುಡುಕಬೇಡ" ಎಂದು ಅವಳಿರುವ ಮನೆಯವರು ಸ್ವಲ್ಪ ಗದರಿದರು.

ಪುಷ್ಪಾ ಬಾಲ್ಯದಲ್ಲಿ "ಪೂತ್ತ ಮರ್ಲದಿ" (ತುಳು ಭಾಷೆಯಲ್ಲಿ ಅದಕ್ಕೆ ಹೂವಿನ ಹುಚ್ಚು ಇರುವವಳು ಎಂದರ್ಥ) ಎಂದೇ ಪ್ರಸಿದ್ಧಳು. ಊರಿನಲ್ಲಿದ್ದಾಗ ಮನೆಯ ತೋಟದಲ್ಲಿ ಬೆಳೆದ ಎಲ್ಲ ಹೂಗಳನ್ನು ಅವಳು ಮುಡಿದಿದ್ದಾಳೆ – ತಲೆ ತುಂಬ ಕೂದಲೂ ಕಾಣಿಸದಷ್ಟು ಒತ್ತೊತ್ತಾಗಿ! ಈಗಲೂ ಅವಳಿಗೆ ಹೂಗಳೆಂದರೆ ಅತಿಯಾದ ಮೋಹ. ಮನೆಯಲ್ಲಿ ಬಿಟ್ಟಿಯಾಗಿ ಅರಳಿ ಸಿಗುತ್ತಿದ್ದ ಹೂಗಳಿಗೆ ಪೇಟೆಯಲ್ಲಿ ಬೆಲೆಯೋ ಬೆಲೆ. ಗೆಳತಿಯೊಬ್ಬಳ ಹುಟ್ಟು ಹಬ್ಬದ ಪ್ರಯುಕ್ತ ಆಕೆಯೊಂದಿಗೆ ಫೋಟೋ ತೆಗೆಸಿಕೊಳ್ಳಬೇಕಾದ ಸಂದರ್ಭದಲ್ಲಿ ನಾಲ್ಕಾರು ಗೆಳತಿಯರು ಸಿಂಗರಿಸಿಕೊಂಡು ಹೊರಟಿದ್ದರು. ಪುಷ್ಪಾ ಮಲ್ಲಿಗೆಯ ಹೂವನ್ನು ವಿಪರೀತ ಮುಡಿದುಕೊಂಡು (ಅತಿ ಎನ್ನಿಸುವಂತೆ) ಫೋಟೋ ತೆಗೆದಾದ ಮೇಲೆ ಸ್ಟುಡಿಯೋದಿಂದ ಎಲ್ಲರೊಂದಿಗೆ ನಡೆದು ಬರುತ್ತಿದ್ದಳು. ದಾರಿಯಲ್ಲಿ ಸ್ಕೂಟರ್ ಸವಾರರಿಬ್ಬರು ಇವರ ಗುಂಪನ್ನು ನೋಡಿ ಚುಡಾಯಿಸತೊಡಗಿದರು. ಪುಷ್ಪಾ ಮತ್ತು ಗೆಳತಿಯರ ಗುಂಪನ್ನು ಹಿಂದೆ ತಿರುಗಿ ನೋಡುತ್ತ... ನೋಡುತ್ತ ಸ್ಕೂಟರ್ ಇವರನ್ನು ದಾಟಿ ಮುಂದಕ್ಕೆ ಹೋಯಿತು. ಎದುರಿನಿಂದ ದೊಡ್ಡ ಲಾರಿಯೊಂದು ಅತಿ ವೇಗದಿಂದ ಬರುತ್ತಿದೆ. ಅಗೋ ತೀರ ಸಮೀಪಕ್ಕೆ ಬಂತು. ಇವರು ಹಿಂದೆ ತಿರುಗಿ ಮುಂದೆ ಹೋಗುತ್ತಿದ್ದಾರೆ. ಹೋ... ಕಣ್ಣು ಮಿಟುಕಿಸುವಷ್ಟರಲ್ಲಿ ಎರಡೂ ಢಿಕ್ಕಿ ಹೊಡೆದವು. ಅಯ್ಯೋ ಅನಾಹುತ ವಾಯಿತು. ಮುಂದಿನ ಸವಾರ ಅಪ್ಪಚ್ಚಿಯಾಗಿ ನೆಲಕ್ಕೆ ಬಿದ್ದ. ಇನ್ನೊಬ್ಬ ದೂರಕ್ಕೆಸೆಯಲ್ಪಟ್ಟು ಪ್ರಾಣಾಪಾಯದಿಂದ ಪಾರಾದ. ಗುಂಪು ಜಮಾಯಿಸಿತು. ದೃಶ್ಯ ನೋಡಿದವರೆಲ್ಲ ಇವರ ಗುಂಪಿನತ್ತ ಕೈ ತೋರಿ ನಡೆದ ಸಂಗತಿ ಹೇಳಿದರು. ಪೊಲೀಸರು ಬಂದರು. ಇಬ್ಬರನ್ನೂ ಆಸ್ಪತ್ರೆಗೆ ಸಾಗಿಸಿದರು. ಒಬ್ಬ ಉಳಿಯಲಿಲ್ಲ, ಇನ್ನೊಬ್ಬ ಸಾಕ್ಷಿ ಹೇಳಲು ಉಳಿದುಕೊಂಡ. ಪುಷ್ಪಾಗೆ – ಗೆಳತಿಯರಿಗೆ ಆತನ ಪರಿಚಯವಿದೆ. ಇವರು ಕಲಿಯುತ್ತಿದ್ದ ಸಂಜೆ ಕಾಲೇಜಿಗೆ ಅವನೂ ಬರುತ್ತಿದ್ದ. ಹೃದಯ ವಿದ್ರಾವಕ ಘಟನೆ. ಯಾವ ಶತ್ರುಗೂ ಹೀಗಾಗಬಾರದು. ಆದರೆ ಆಗಿ ಹೋಯಿತು. ಗಡಿಯಾರದ ಮುಳ್ಳನ್ನು ಹಿಂದೆ ತಿರುಗಿಸಲಾಗದು. ಅವನ ಹೆಸರು ಜೇಮ್ಸ್ ರಾಡ್ರಿಗಸ್. ಶ್ರೀಮಂತ ಮನೆತನ. ಮುಂದಿನ ತಿಂಗಳು ದುಬಾಯಿಗೆ ಹೋಗುವವನಿದ್ದ. ಆದರೆ ಎಲ್ಲವನ್ನೂ ಬಿಟ್ಟು ಈಗಲೇ ಹೊರಟು ಹೋದ. ಅವನ ಮನೆಯಲ್ಲಿ ಕಣ್ಣೀರಮಡುಗಟ್ಟಿ ನಿಂತಿತು. ಆಸ್ಪತ್ರೆಯಿಂದ ಬಂದ ಮಗನ ದೇಹ ನೋಡಿ ಹೆತ್ತವರು ಮೂರ್ಛೆ ಹೋಗಿ ಅವರು ಆಸ್ಪತ್ರೆ ಸೇರಬೇಕಾಯಿತು. ಸಂಜೆಗೆ ಸುದ್ದಿ ಎಲ್ಲಕಡೆ ಹರಡಿತು. ಬರುವವರು ಬಂದರು. ಚರ್ಚ್ ಶೋಕದ ಗಂಟೆ ಬಾರಿಸಿತು. ಅದು ಪುಷ್ಪಾಗೂ ಕೇಳಿಸಿತು. ಹೃದಯ ಕಿತ್ತು ಬರುವಂಥ ನಾದ ಅದು. ಚರ್ಚ್‌ಗೆ ಪುಷ್ಪಾ ಮತ್ತು ಗೆಳತಿಯರೂ ಹೋದರು. ದುಃಖದ ಗಂಜಿ ಉಂಡು ಬಂದರು. ಯಾರೇನು ಮಾಡುವುದು? ಹುಡುಗಿಯರ ಗುಂಪು ಅತಿಯಾಗಿ ಸಿಂಗರಿಸಿಕೊಂಡು ಹೋಗುತ್ತಿದ್ದುದನ್ನು ನೋಡುತ್ತ ಮುಂದೆ ಗಾಡಿ ಓಡಿಸಿದ್ದರಿಂದ ಹೀಗಾಯಿತೆಂದು ಸುದ್ದಿ ನಿಧಾನವಾಗಿ ಹರಡಿತು. ಪೊಲೀಸರು ಇವರ ಗುಂಪನ್ನು ಹುಡುಕುತ್ತಿದ್ದರು. ಮರುದಿನ ಇವರು ಓದುತ್ತಿದ್ದ ಶಾಲೆಯನ್ನು ಪತ್ತೆ ಹಚ್ಚಿ ಹುಡುಗಿಯರನ್ನು ಸ್ಟೇಷನ್‌ಗೆ ಕರೆದುಕೊಂಡು ಬರಲು ಪ್ರಿನ್ಸಿಪಾಲರಿಗೆ ಕರೆ ಕಳಿಸಲಾಯಿತು. ಹುಡುಗಿಯರನ್ನು ಶಪಿಸುತ್ತ, ಬೈಯುತ್ತ ಪ್ರಿನ್ಸಿಪಾಲರು ಸ್ಟೇಷನ್‌ಗೆ ಇವರನ್ನು ಕರೆದೊಯ್ದರು. "ನಮ್ಮ ಹುಡುಗಿಯರು ಹೀಗೆಲ್ಲ ಆಗುವುದೆಂದು ಎಣಿಸಿರಲಿಲ್ಲ. ಶಾಲೆಯಲ್ಲಿ ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಗಂಡುಬೀರಿಯರಲ್ಲ. ಅವರ ಪಾಡಿಗೆ ಅವರು ಬರುತ್ತಿದ್ದರು. ಹುಡುಗರು ರಸ್ತೆಯಲ್ಲಿರಬೇಕಾದರೆ ಜಾಗ್ರತೆಯಾಗಿರಬೇಡವೇ? ಇವರನ್ನು ಹಿಂಬಾಲಿಸಿದ್ದು ಅವರ ತಪ್ಪಲ್ಲವೇ? ಯಾರಾದರೂ ಹಿಂದೆ ನೋಡಿಕೊಂಡು ಮುಂದೆ ಗಾಡಿ ಓಡಿಸುತ್ತಾರೆಯೆ? ನೀವೇ ಹೇಳಿ ಸ್ವಾಮಿ. ಹೆಣ್ಣು ಮಕ್ಕಳಲ್ಲವೇ, ಬಿಟ್ಟು ಬಿಡಿ" ಎಂದೆಲ್ಲ ವಾದ ಮಾಡಿ, ಗೋಗರೆದು ಇನ್ಸ್‌ಪೆಕ್ಟರನ್ನು ಒಪ್ಪಿಸಿ ವಾಪಾಸು ಕರೆ ತಂದರು. ಹುಡುಗಿಯರಿಗೂ ಬುದ್ಧಿವಾದ ಹೇಳಿದರು.

ಈ ಘಟನೆಯಿಂದ ಪುಷ್ಪಾಳ ಹೂವಿನ ಹುಚ್ಚು ತೀರಿಕೊಂಡ ರಾಡ್ರಿಗಸ್‌ನ ಜೊತೆಗೇ ಹೊರಟುಹೋಯಿತು. ಅವಳೆಂದೂ ಮತ್ತೆ ಹೂ ಮುಡಿಯಲಿಲ್ಲ. ಆದರೆ ಮೊದಲಿಗಿಂತಲೂ ಹೂಗಳನ್ನು ಹೆಚ್ಚು ಹೆಚ್ಚು ಪ್ರೀತಿಸತೊಡಗಿದಳು. ಹೂಗಳನ್ನು ತರುವಳು, ಮುಂದಿಟ್ಟುಕೊಂಡು ಅಳುವಳು, ಬಾಡಿದ ನಂತರ ಹೊರಗೆ ಎಸೆ ಯುವಳು... ಮತ್ತೆ ತರುವಳು... ಮತ್ತೆ ಬಾಡುವುವು... ಹೌದು, ಹೂಗಳಂತೆಯೇ ಮನುಷ್ಯರೂ ಸಹ! ಹೂಗಳ ಆಯಸ್ಸು ಕಡಿಮೆ. ಮನುಷ್ಯನದು ಸ್ವಲ್ಪ ಹೆಚ್ಚು, ಎಲ್ಲವೂ ನಾಶ ಆಗುತ್ತದೆ – ನಾವೂ ಕೂಡ... ಆದರೆ ರಾಡ್ರಿಗಸ್‌ನ ಅಕಾಲ ಮೃತ್ಯು? ಅಲ್ಲ – ಆತನೇ ತಂದುಕೊಂಡಿದ್ದು. ಅಯ್ಯೋ... ಅವನು ಅರಳಬೇಕಾದವನು... ಹೂವಿನಂತೆ ಪರಿಮಳ ಬೀರಬೇಕಾದವನು... ಹೀಗೇಕೆ ಆಗುತ್ತದೆ? ಪುಷ್ಪಾಗೆ ತಲೆ ನೋಯತೊಡಗಿತು.

ಈಗ ಪುಷ್ಪಾಗೆ ಭಯವಿಲ್ಲ, ಪೇಟೆಯ ಗಲ್ಲಿಗಲ್ಲಿಗಳಲ್ಲೂ ಸುತ್ತುತ್ತಾಳೆ. ತಾನು ಭಾರಿ ದೊಡ್ಡವಳಾದಂತೆ, ತನಗಾರೂ ಏನನ್ನೂ ಹೇಳಬೇಕಿಲ್ಲವೆಂಬಂತೆ, ತನಗಿಷ್ಟ ಬಂದುದನ್ನು ಮಾಡುವವಳಂತೆ, ಯಾರ ಮಾತೂ ಕೇಳದವಳಂತೆ ಆಕೆ ಬದಲಾಗಿದ್ದಾಳೆ. ಅವಳೇನಾದರೂ ಕೇಳುವುದಿದ್ದರೆ ಅಮ್ಮನನ್ನೇ, ಅಮ್ಮನ ಮಾತನ್ನು ಮಾತ್ರ. ಸುಖವಾಗಲೀ ದುಃಖವಾಗಲೀ ಹೇಳಿಕೊಳ್ಳುವುದು ಅವರಮ್ಮನ ಬಳಿಯಲ್ಲೇ. ನಾಲ್ಕಾರು ಕಡೆ ಅರ್ಜಿ ಹಾಕಿ ಕೆಲಸಕ್ಕೆ ಸೇರಿ, ನಾಲ್ಕೈದು ತಿಂಗಳು ಕೆಲಸ ಮಾಡಿ ಆ ಕೆಲಸಗಳನ್ನು ಬಿಟ್ಟುಬಿಟ್ಟಿದ್ದಳು ಪುಷ್ಪಾ. "ಕೆಲಸ ಸಿಗುವುದೇ ಕಷ್ಟ, ಸಿಕ್ಕಿದ ಕೆಲಸ ಬಿಟ್ಟು ಬಿಡಬಾರದು ಮಗಳೇ, ಎಷ್ಟೇ ಕಷ್ಟವಾದರೂ ಮಾಡಬೇಕು" ಎಂದು ಅಮ್ಮನೆಂದರೆ – "ನಿನಗದೆಲ್ಲ ಕತೆ ಗೊತ್ತಾಗುವುದಿಲ್ಲ ಅಮ್ಮಾ, ಸುಮ್ಮನಿರು" ಎಂದಷ್ಟೇ ಹೇಳುವಳು. ನಗರದ ಬದುಕಿನ ಒಳ ಹೊರಗುಗಳನ್ನೆಲ್ಲ ಅರ್ಥ ಮಾಡಿಕೊಂಡಳು. ಎಲ್ಲಿ ಹೋದರೂ ಹೆಣ್ಣೆಂದರೆ ತಾತ್ಸಾರ ಈ ಜನಗಳಿಗೆ. ಕೊನೆಗೆ ಎಲ್ಲ ತಪ್ಪು ಅವಳದ್ದೇ ಎನ್ನುತ್ತಾರೆ. ಹೌದು ಎಲ್ಲ ತಪ್ಪೂ ನಮ್ಮದೇ! ಈ ದೇಶದಲ್ಲಿ ಹೆಣ್ಣಾಗಿ ಹುಟ್ಟಿ ಹೊಟ್ಟೆ ಹೊರೆಯುವುದು ಬಹು ದೊಡ್ಡ ತಪ್ಪು! ಜೈನ ಧರ್ಮದಲ್ಲಿನ ಸಲ್ಲೇಖನ ವ್ರತದಂತೆ ಉಪವಾಸ ಮಾಡಿ ದೇಹ ತ್ಯಾಗ ಮಾಡುವುದು ಲೇಸು – ಇಂಥ ಅಪಾಯಕಾರಿ ಯೋಚನೆಗಳು ನುಸುಳಿದರೂ ಅಮ್ಮನನ್ನು ನೆನೆದು ಸಮಾಧಾನಮಾಡಿಕೊಳ್ಳುವಳು. ಪುಷ್ಪಾ ತುಂಬ ಚಿಕ್ಕವಳಾಗಿದ್ದಾಗ ಶಾಲೆಯ ವಾರ್ಷಿಕೋತ್ಸವದಲ್ಲಿ ಡ್ಯಾನ್ಸ್ ಮಾಡಿ ಮೊದಲ ಬಹುಮಾನ ಗಳಿಸಿದ್ದಳು.

*ಹೊಸ ಚೆಲುವಿನ ಗೆಲುವಿನ ಸಂತೋಷವೇ ಬಾ...*
*ಆನಂದವೇ ಬಾ... ವಸಂತ ಮಾಸವೆ ಬಾ...*
*ವಸಂತ ಮಾಸವೆ ಬಾ...*

ಎಂಬ ಪದ್ಯಕ್ಕೆ ಮುದ್ದಾಗಿ ನರ್ತಿಸಿ ಎಲ್ಲರ ಮನಸೂರೆಗೊಂಡಿದ್ದಳು. ಅಂದು ಕರೆದ ವಸಂತ ಮಾಸದ ಸಂಭ್ರಮ ತನ್ನ ಬಾಳಿನಲ್ಲಿ ಬರಲೆಂದು ಪುಷ್ಪಾ ಹಂಬಲಿಸುತ್ತಿದ್ದಾಳೆ. ಒಮ್ಮೆ ಖುಷಿಯಾಗಿರುತ್ತಾಳೆ. ಮತ್ತೊಮ್ಮೆ ಸಿಡುಕುತ್ತಾಳೆ. ಇನ್ನೊಮ್ಮೆ ದುಃಖಿಸುತ್ತಾಳೆ, ಅಳುತ್ತಾಳೆ, ಮತ್ತೊಮ್ಮೆ ನಗುತ್ತಾಳೆ – ಹುಣ್ಣಿಮೆಯ ಚಂದ್ರ ಉದಯಿಸಿ ಬಂದಂತೆ!

ಮೀನಾಕ್ಷಮ್ಮ
೩೪/೧೧, ೨ನೇ ಕ್ರಾಸ್, ೨ನೇ ಮೈನ್, ಬಾಂಬೇ ಡೈಯಿಂಗ್ ಸಮೀಪ, ಯಶವಂತಪುರ, ಬೆಂ. –೨೨

# ಕರ್ನಾಟಕ ಮತ್ತು ಗುಜರಾತ್ : ಮಹಿಳಾ ಅಭಿವೃದ್ಧಿ ಮಾದರಿ ತುಲನೆ



ಟಿ. ಆರ್. ಚಂದ್ರಶೇಖರ

## ಪ್ರಸ್ತಾವನೆ

ಕಳೆದ ಹತ್ತಾರು ವರ್ಷಗಳಿಂದ ಗುಜರಾತ್ ಅಭಿವೃದ್ಧಿ ಮಾದರಿಯ ಬಗ್ಗೆ ಮಾತನಾಡಲಾಗುತ್ತಿದೆ. ಅದನ್ನು ರಾಷ್ಟ್ರಮಟ್ಟದಲ್ಲಿ ಅಳವಡಿಸಿಕೊಳ್ಳುವ ಬಗ್ಗೆಯೂ ಮಾತುಗಳು ಕೇಳಿಬರುತ್ತಿವೆ. ಆದರೆ ಅಧ್ಯಯನಗಳಿಂದ ಕಂಡುಬರುವ ಸಂಗತಿಯೆಂದರೆ ಅದರಲ್ಲಿ 'ಮಾದರಿ'ಯಾಗಬಹುದಾದ ಯಾವುದೇ ಸಂಗತಿಯೂ ಗೋಚರಿಸುವುದಿಲ್ಲ. ಅದನ್ನು ಸುಳ್ಳು ಸುಳ್ಳೇ ವೈಭವೀಕರಿಸ ಲಾಗುತ್ತಿದೆ. ಈ ಮಾದರಿಯ ಬಗ್ಗೆ ಒಂದು ಭ್ರಮೆಯನ್ನು ಹುಟ್ಟುಹಾಕಲಾಗಿದೆ. ಅದರಲ್ಲಿ ಹುರುಳಿಲ್ಲ. ಅಧಿಕಾರದ ನೆಲೆಯಿಂದ ಮತ್ತು ಆಕ್ರಮಣಕಾರಿಯಾಗಿ ಏನನ್ನು ಹೇಳಿದರೂ ನಡೆಯುತ್ತದೆ ಅನ್ನುವ ಠೇಂಕಾರ ಇಲ್ಲಿ ಕಾಣುತ್ತದೆ. ಗುಜರಾತ್ ಅಭಿವೃದ್ಧಿ ಮಾದರಿ ಅನ್ನುವುದೊಂದು ಗಾಳಿಯಲ್ಲಿ ಕಟ್ಟಿರುವ ಗೋಪುರ. ಯಾವುದೇ ಅಭಿವೃದ್ಧಿ ಸೂಚಿಯನ್ನು ತೆಗೆದು ಕೊಂಡರೂ ಅದು ಅನೇಕ ಉತ್ತಮ ಅಭಿವೃದ್ಧಿ ಸಾಧಿಸಿಕೊಂಡಿರುವ ರಾಜ್ಯಗಳಿಗಿಂತ ಉನ್ನತ ಸ್ಥಾನ ಪಡೆಯುವುದು ಸಾಧ್ಯವಿಲ್ಲ. ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಗುಜರಾತಿನಲ್ಲಿ ಮಹಿಳೆಯರ ಸ್ಥಿತಿಗತಿಯನ್ನು ಕರ್ನಾಟಕದ ಮಹಿಳೆಯರ ಸ್ಥಾನಮಾನದ ಎದುರಿಗಿಟ್ಟು ವಿಶ್ಲೇಷಣೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಮೂಲಕ ಗುಜರಾತ್ ಅಭಿವೃದ್ಧಿ ಮಾದರಿ ಅನ್ನುವುದೊಂದು ಲೊಳಲೊಟ್ಟೆ ಅನ್ನುವುದನ್ನು ಸೋದಾಹರಣವಾಗಿ ಇಲ್ಲಿ ತೋರಿಸಲಾಗಿದೆ.

**ಗುಜರಾತಿನಲ್ಲಿ ಮಹಿಳೆಯರ ಬದುಕಿನ ಸ್ಥಿತಿಗತಿ**

ಕೋಷ್ಟಕ ೧ರಲ್ಲಿ ಹತ್ತು ಮಹಿಳಾ ಅಭಿವೃದ್ಧಿ ಸೂಚಿಗಳಿಗೆ ಸಂಬಂಧಿಸಿದ ಅಂಕಿಸಂಖ್ಯೆಗಳನ್ನು ಗುಜರಾತ್, ಕರ್ನಾಟಕ ಮತ್ತು ಭಾರತಕ್ಕೆ ಸಂಬಂಧಿಸಿದಂತೆ ನೀಡಲಾಗಿದೆ. ಎಲ್ಲ ಸೂಚಿಗಳಲ್ಲಿಯೂ ಕರ್ನಾಟಕವು ಗುಜರಾತಿಗಿಂತ ಮಾತ್ರವಲ್ಲ ರಾಷ್ಟ್ರಮಟ್ಟದ ಸೂಚಿಗಳಿಗಿಂತ ಉತ್ತಮ ಸ್ಥಾನದಲ್ಲಿದೆ. ವಾಸ್ತವವಾಗಿ ಗುಜರಾತಿನಲ್ಲಿ ಕೆಲವು ಸೂಚಿಗಳು ಆತಂಕ ಹುಟ್ಟಿಸುವಷ್ಟು ಕೆಳಮಟ್ಟದಲ್ಲಿವೆ. ಲಿಂಗ ಅಸಮಾನತೆ ಅನ್ನುವುದು ಗುಜರಾತಿನಲ್ಲಿ ತೀವ್ರ ಕಳವಳಕಾರಿ ಯಾಗಿದೆ. ಮಕ್ಕಳ ಲಿಂಗ ಅನುಪಾತವನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. ಪ್ರತಿ ಸಾವಿರ ಗಂಡುಮಕ್ಕಳಿಗೆ ಇದಿರಾಗಿ ಕಾಣೆಯಾಗಿರುವ ಹೆಣ್ಣು ಮಕ್ಕಳ ಸಂಖ್ಯೆ ೧೧೦. ಇದರ ಸಂಖ್ಯೆ ಕರ್ನಾಟಕದಲ್ಲಿ ಕೇವಲ ೫೨. ಒಟ್ಟು ಜನಸಂಖ್ಯೆಯನ್ನು ತೆಗೆದುಕೊಂಡರೂ ಗುಜರಾತಿನ ಸ್ಥಿತಿಯು ಆತಂಕಕಾರಿಯಾಗಿದೆ. ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ೨೦೧೧ರಲ್ಲಿ ಕಾಣೆಯಾದ ಮಹಿಳೆಯರ ಒಟ್ಟು ಸಂಖ್ಯೆ ೨೫.೪೩ ಲಕ್ಷ. ಈ ರಾಜ್ಯದ ಒಟ್ಟು ಮಹಿಳಾ ಸಂಖ್ಯೆಯಲ್ಲಿ ಕಾಣೆಯಾದ ಮಹಿಳೆಯರ ಪ್ರಮಾಣ ಶೇ.೮.೭೮ರಷ್ಟಾಗುತ್ತದೆ. ಆದರೆ ಕರ್ನಾಟಕದಲ್ಲಿ ಇವರ ಪ್ರಮಾಣ ಕೇವಲ ಶೇ.೨.೭೮. ಜನಸಂಖ್ಯೆಯ ಬೆಳವಣಿಗೆಗೆ ಸಂಬಂಧಿಸಿದ ಎರಡು ಸೂಚಿಗಳನ್ನು ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೧ : ಮಹಿಳಾ ಅಭಿವೃದ್ಧಿಯ ಆಯ್ದ ಸೂಚಿಗಳು**

| ಮಹಿಳಾ ಅಭಿವೃದ್ಧಿ ಸೂಚಿಗಳು | ಕರ್ನಾಟಕ | ಗುಜರಾತ್ | ಭಾರತ |
|---|---|---|---|
| ಒಟ್ಟು ಜನಸಂಖ್ಯೆಯ ಲಿಂಗ ಅನುಪಾತ : ಜನಗಣತಿ–೨೦೧೧ | ೯೭೩ | ೯೧೯ | ೯೪೨ |
| ಸಾಕ್ಷರತೆಯಲ್ಲಿ ಲಿಂಗ ತಾರತಮ್ಯ: ಜನಗಣತಿ–೨೦೧೧ | ಶೇ. ೧೪.೭೨ | ಶೇ. ೧೬.೫೦ | ಶೇ. ೧೬.೬೮ |
| ಒಟ್ಟು ಸಂತಾನೋತ್ಪತ್ತಿ ಪ್ರಮಾಣ: ೨೦೧೫–೧೬.(ಎನ್‌ಎಫ್‌ಎಚ್‌ಎಸ್ ೪) | ೧.೮೦ | ೨.೦೦ | ೨.೨ |
| ಒಟ್ಟು ೦–೬ ವಯೋಮಾನದ ಮಕ್ಕಳ ಲಿಂಗ ಅನುಪಾತ: ಜನಗಣತಿ–೨೦೧೧ | ೯೪೮ | ೮೯೦ | ೯೧೯ |
| ಒಟ್ಟು ಹೆಣ್ಣು ಮಕ್ಕಳಲ್ಲಿ ೧೮ ವರ್ಷ ತುಂಬುವುದರೊಳಗೆ ಮದುವೆಯಾಗುವ ಹೆಣ್ಣು ಮಕ್ಕಳ ಪ್ರಮಾಣ: ೨೦೧೫–೧೬ (ಎನ್‌ಎಫ್‌ಎಚ್‌ಎಸ್ ೪) | ಶೇ. ೨೧.೪೦ | ಶೇ. ೨೪.೯೦ | ಶೇ. ೨೬.೮೦ |
| ಜನಸಂಖ್ಯೆಯ ಬೆಳವಣಿಗೆ ಪ್ರಮಾಣ: ಜನಗಣತಿ: ೨೦೦೧–೨೦೧೧ | ಶೇ. ೧೫.೬೦ | ಶೇ. ೧೯.೩೦ | ಶೇ. ೧೭.೭ |
| ಮಹಿಳೆಯರಲ್ಲಿ(೧೫ ರಿಂದ ೪೯ ವರ್ಷ ವಯೋಮಾನ) ಅನೀಮಿಯ : ೨೦೧೫–೧೬ (ಎನ್‌ಎಫ್‌ಎಚ್‌ಎಸ್ ೪) | ಶೇ. ೪೪.೮೦ | ಶೇ. ೫೪.೯೦ | ಶೇ. ೫೩.೦೦ |
| ಮಕ್ಕಳಲ್ಲಿ (೬ ರಿಂದ ೫೯ ತಿಂಗಳ ವಯೋಮಾನ) ಅನೀಮಿಯ: ೨೦೧೫–೧೬ (ಎನ್‌ಎಫ್‌ಎಚ್‌ಎಸ್ ೪) | ಶೇ. ೬೦.೯೦ | ಶೇ. ೬೨.೬೦ | ಶೇ. ೫೮.೫೦ |
| ಮಹಿಳಾ ಸಾಗುವಳಿಗಾರರು: ಜನಗಣತಿ–೨೦೧೧ | ಶೇ. ೨೪.೩೨ | ಶೇ. ೧೪.೧೪ | ಶೇ. ೨೩.೮೧ |
| ಮನೆ ಮತ್ತು / ಭೂಮಿ ಮಾಲೀಕತ್ವವನ್ನು ಜಂಟಿಯಾಗಿ ಅಥವಾ ಒಂಟಿಯಾಗಿ ಪಡೆದಿರುವ ಮಹಿಳೆಯರ ಪ್ರಮಾಣ:೨೦೧೫–೧೬ (ಎನ್‌ಎಫ್‌ಎಚ್‌ಎಸ್ ೪) | ಶೇ. ೩೮.೪ | ಶೇ. ೨೭.೨ | ಶೇ. ೫೧.೮ |

ಈ ಎರಡು ಸೂಚಿಗಳಲ್ಲಿಯೂ ಗುಜರಾತಿನ ಸಾಧನೆಯು ಅತ್ಯಂತ ಕೆಳಮಟ್ಟದಲ್ಲಿದೆ. ಒಬ್ಬ ಮಹಿಳೆಯು ತನ್ನ ಸಂತಾನೋತ್ಪತ್ತಿ ವಯೋಮಾನದಲ್ಲಿ (೧೫ರಿಂದ ೪೯ ವರ್ಷಗಳು) ಹಡೆಯುವ ಒಟ್ಟು ಮಕ್ಕಳ ಸಂಖ್ಯೆಯನ್ನು ಒಟ್ಟು ಸಂತಾನೋತ್ಪತ್ತಿ ಪ್ರಮಾಣ ಎಂದು ಕರೆಯುತ್ತಾರೆ.

**ಕಾಣೆಯಾದ ಮಹಿಳೆಯರು : ಅಮರ್ತ್ಯ ಸೇನ್ ರೂಪಿಸಿದ ಪರಿಭಾವನೆ**

ಮಹಿಳಾ ಅಭಿವೃದ್ಧಿ ಅಧ್ಯಯನಗಳಲ್ಲಿ ಅಮರ್ತ್ಯ ಸೇನ್‌ರದ್ದು ಮುಂಚೂಣಿಯಲ್ಲಿರುವ ಹೆಸರು. ಸ್ತ್ರೀವಾದಿ ಅರ್ಥಶಾಸ್ತ್ರಜ್ಞ ಎಂದು ಅವರನ್ನು ಕರೆಯಲಾಗಿದೆ. ಈ ಅಧ್ಯಯನಗಳಲ್ಲಿ ಅವರು ರೂಪಿಸಿರುವ ಒಂದು ಪರಿಭಾವನೆ 'ಕಾಣೆಯಾದ ಮಹಿಳೆಯರು.' ವೈಜ್ಞಾನಿಕವಾಗಿ ಒಂದು ದೇಶದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರ ಸಂಖ್ಯೆಯು ಪುರುಷರ ಸಂಖ್ಯೆಗಿಂತ ಅಧಿಕವಿರಬೇಕು. ಅಂದರೆ ಲಿಂಗ ಅನುಪಾತವು ಸಾವಿರಕ್ಕಿಂತ ಅಧಿಕವಿರಬೇಕು. ಲಿಂಗ ಅನುಪಾತ ಅನ್ನುವುದು ಸಾವಿರ ಪುರುಷರ ಎದುರಿಗೆ ಇರುವ ಮಹಿಳೆಯರ ಸಂಖ್ಯೆಯನ್ನು ಸೂಚಿಸುತ್ತದೆ. ಆದರೆ ಭಾರತದಲ್ಲಿ ಕೇರಳ, ಗೋವಾ ಮುಂತಾದ ಕೆಲವು ರಾಜ್ಯಗಳನ್ನು ಬಿಟ್ಟರೆ ಉಳಿದ ರಾಜ್ಯಗಳಲ್ಲಿ ಲಿಂಗ ಅನುಪಾತ ಸಾವಿರಕ್ಕಿಂತ ಕಡಿಮೆಯಿದೆ. ಅದರಲ್ಲೂ ಉತ್ತರ ಭಾರತದ ರಾಜ್ಯಗಳಲ್ಲಿ ಇದು ಆತಂಕಕಾರಿಮಟ್ಟದಲ್ಲಿ ಕುಸಿದಿದೆ. ನಮ್ಮ ಅನುಕೂಲಕ್ಕಾಗಿ ಆದರ್ಶ ಲಿಂಗ ಅನುಪಾತ ಸಾವಿರ ಪುರುಷರ ಎದುರಿಗೆ ಸಾವಿರ ಮಹಿಳೆಯರು ಎಂದು ಇಟ್ಟುಕೊಂಡರೂ ಗುಜರಾತಿನ ಸ್ಥಿತಿಯು ಭಯ ಹುಟ್ಟಿಸುವ ರೀತಿಯಲ್ಲಿದೆ. ಅದಕ್ಕೆ ಹೋಲಿಸಿದರೆ ಕರ್ನಾಟಕದ ಸ್ಥಿತಿಯು ಸಾಧಾರಣ ಅನ್ನುವ ಮಟ್ಟದಲ್ಲಿದೆ. ವರ್ತಮಾನದ ಸ್ಥಿತಿಯನ್ನು ಸೂಚಿಸುವ ಮಕ್ಕಳ ಲಿಂಗ ಅನುಪಾತ ಗುಜರಾತಿನಲ್ಲಿ ನಿಜಕ್ಕೂ ಚಿಂತೆಗೆ ಕಾರಣವಾದ ಸಂಗತಿಯಾಗಿದೆ.

ಗುಜರಾತಿನಲ್ಲಿ ಒಬ್ಬ ಮಹಿಳೆಯು ತನ್ನ ಸಂತಾನೋತ್ಪತ್ತಿ ಕಾಲಾವಧಿಯಲ್ಲಿ ಇಬ್ಬರು ಮಕ್ಕಳಿಗೆ ಜನ್ಮ ನೀಡಿದರೆ ಕರ್ನಾಟಕದಲ್ಲಿ ಅದರ ಪ್ರಮಾಣ ಒಂದಕ್ಕಿಂತ ಕಡಿಮೆ. ಜನಸಂಖ್ಯೆಯ ಬೆಳವಣಿಗೆಯನ್ನು ಅಳೆಯುವ ಒಂದು ಉತ್ತಮ ಮಾಪನ ಇದಾಗಿದೆ. ಈ ಸೂಚಿಯಲ್ಲಿ ಗುಜರಾತಿನ ಸ್ಥಿತಿಯು ಕರ್ನಾಟಕದ ಸ್ಥಿತಿಗಿಂತ ಕೆಳಮಟ್ಟದಲ್ಲಿದೆ. ಅದೇ ರೀತಿಯಲ್ಲಿ ಜನಸಂಖ್ಯೆಯ ದಶಕವಾರು ಬೆಳವಣಿಗೆಯಲ್ಲಿಯೂ ಅದರ ಸಾಧನೆ ಉತ್ತಮವಾಗಿಲ್ಲ. ವಾರ್ಷಿಕ ಅಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೨೦೦೧ರಿಂದ ೨೦೧೧ರ ದಶಕದಲ್ಲಿ ಶೇ. ೧.೯೩ರಷ್ಟಿದ್ದರೆ ಕರ್ನಾಟಕದಲ್ಲಿ ಅದರ ಪ್ರಮಾಣ ಶೇ. ೧.೫೬ರಷ್ಟಿದೆ.

**ಅಪೌಷ್ಟಿಕತೆಯ ಅಟ್ಟಹಾಸ**

ಮಹಿಳೆಯರ ಆರೋಗ್ಯದ ಸೂಚಿಯೆಂದರೆ ಅವರಲ್ಲಿನ ಮತ್ತು ಮಕ್ಕಳಲ್ಲಿನ ಅನೀಮಿಯ ಪ್ರಮಾಣ. ಗುಜರಾತಿನಲ್ಲಿ ೧೫ರಿಂದ ೪೯ ವಯೋಮಾನದ ಮಹಿಳೆಯರಲ್ಲಿ ಅನೀಮಿಯ ಎದುರಿಸುತ್ತಿರುವ ಮಹಿಳೆಯರ ಪ್ರಮಾಣ ೨೦೧೫–೧೬ರಲ್ಲಿ ಶೇ. ೫೪.೯೦ರಷ್ಟಿದ್ದರೆ ಕರ್ನಾಟಕದಲ್ಲಿ ಅದರ ಪ್ರಮಾಣ ಶೇ. ೪೪.೮೦. ಅದೇ ರೀತಿಯಲ್ಲಿ ೬ರಿಂದ ೫೯ ತಿಂಗಳು ವಯೋಮಾನದ ಮಕ್ಕಳಲ್ಲಿ ಅನೀಮಿಯ ಗುಜರಾತಿನಲ್ಲಿ ಅಧಿಕ ಪ್ರಮಾಣದಲ್ಲಿದೆ. ಈ ಅಪೌಷ್ಟಿಕತೆಯು ಶ್ರಮಶಕ್ತಿಯ ದುಡಿಮೆಯ ಮೇಲೆ ದುಷ್ಪರಿಣಾಮ ಬೀರುತ್ತದೆ. ಅನೀಮಿಯದ ಕಾರಣವಾಗಿ ನಮ್ಮ ದೇಶದಲ್ಲಿ ೧೫ರಿಂದ ೩೦ರ ವಯೋಮಾನದ ಮಹಿಳೆಯರಲ್ಲಿ ಮರಣದ ಪ್ರಮಾಣ ಪುರುಷ ಮರಣದ ಪ್ರಮಾಣಕ್ಕಿಂತ ಅಧಿಕವಾಗಿದೆ. ಅಧಿಕ ಸಂತಾನೋತ್ಪತ್ತಿ ಪ್ರಮಾಣ, ಅಧಿಕ ಅನೀಮಿಯ ಮತ್ತು ಅಧಿಕ ಲಿಂಗ ಸಂಬಂಧಿ ಸಾಕ್ಷರತಾ ಅಸಮಾನತೆಯಿಂದಾಗಿ ಮಹಿಳೆಯರ ಆರೋಗ್ಯ ಸ್ಥಿತಿಯು ಅತ್ಯಂತ ಕೆಳಮಟ್ಟದಲ್ಲಿರುವುದು ಕಂಡು ಬರುತ್ತದೆ. ಇವೆಲ್ಲವನ್ನೂ ಅವರು ಮಹಿಳೆಯರು ಅನ್ನುವ ಕಾರಣಕ್ಕೆ ಅನುಭವಿಸುತ್ತಿದ್ದಾರೆ ಅನ್ನುವುದು ಆತಂಕಕ್ಕೆ ಕಾರಣವಾಗಿದೆ.

ಮತ್ತೊಂದು ಮಹಿಳೆಯರಲ್ಲಿ ಸ್ವಾಯತ್ತತೆಯ ಸೂಚಿಯೆಂದರೆ ಆಸ್ತಿಯ ಮಾಲಿಕತ್ವದ ಪ್ರಮಾಣ. ಕರ್ನಾಟಕದಲ್ಲಿ ಒಟ್ಟು ಸಾಗುವಳಿಗಾರರಲ್ಲಿ ಮಹಿಳೆಯರ ಪ್ರಮಾಣ ೨೦೧೧ರಲ್ಲಿ ಶೇ. ೨೪.೩೨ರಷ್ಟಿದ್ದರೆ ಗುಜರಾತಿನಲ್ಲಿ ಅದರ ಪ್ರಮಾಣ ಕೇವಲ ಶೇ. ೧೪.೧೪. ಅಖಿಲ ಭಾರತಮಟ್ಟದಲ್ಲಿ ಇದು ಉತ್ತಮ ಸ್ಥಿತಿಯಲ್ಲಿದೆ. ಅದೇ ರೀತಿಯಲ್ಲಿ ಮನೆ ಮತ್ತು / ಭೂಮಿಯ ಮಾಲಿಕತ್ವವನ್ನು ಜಂಟಿಯಾಗಿ ಅಥವಾ ಒಂಟಿಯಾಗಿ ಪಡೆದಿರುವ ಮಹಿಳೆಯರ ಪ್ರಮಾಣ ಗುಜರಾತಿನಲ್ಲಿ ಎನ್‌ಎಫ್‌ಎಚ್‌ಎಸ್ ೪ (೨೦೧೫–೧೬)ರ ಪ್ರಕಾರ ಶೇ. ೨೭.೨ರಷ್ಟಿದ್ದರೆ ಕರ್ನಾಟಕದಲ್ಲಿ ಅವರ ಪ್ರಮಾಣ ಶೇ. ೫೧.೮ರಷ್ಟಿದೆ. ಅಖಿಲ ಭಾರತ ಮಟ್ಟದಲ್ಲಿ ಅದು ಶೇ. ೩೮.೪ರಷ್ಟಿದೆ. ಇದನ್ನು ಮಹಿಳಾ ಸ್ವಾಯತ್ತತೆಯ ಪರಮೋಚ್ಚ ಸೂಚಿಯನ್ನಾಗಿ ಪರಿಗಣಿಸಬಹುದು. ಆದರೆ ಗುಜರಾತಿನಲ್ಲಿ ಮಹಿಳೆಯರು ಅನೇಕ ಬಗೆಯ ಲಿಂಗ ತಾರತಮ್ಯದ ಸಂಕೋಲೆಯಲ್ಲಿ ಸಿಲುಕಿದ್ದಾರೆ.

ಕೊನೆಯದಾಗಿ, ಇವೆಲ್ಲದರ ಆಧಾರದ ಮೇಲೆ ಗುಜರಾತ್ ರಾಜ್ಯವು ಮಹಿಳಾ ಅಭಿವೃದ್ಧಿಗೆ ಸಂಬಂಧಿಸಿದಂತೆ ಕರ್ನಾಟಕ, ಕೇರಳ, ತಮಿಳುನಾಡು ರಾಜ್ಯಗಳಿಂದ ಕಲಿಯಬೇಕಾದ ಪಾಠಗಳು ಬಹಳಷ್ಟಿವೆ. ಲಿಂಗ ಸಮಾನತೆಯಲ್ಲಿ ಕೇರಳ, ತಮಿಳುನಾಡು ಮತ್ತು ಕರ್ನಾಟಕಗಳ ಸಾಧನೆ ಅನುಕರಣೀಯವಾಗಿದೆ. ಕೋಷ್ಟಕದಲ್ಲಿನ ಸೂಚಿಗಳ ಮೌಲ್ಯಗಳ ತುಲನಾತ್ಮಕ ಅಧ್ಯಯನದ ಆಧಾರದಲ್ಲಿ ಗುಜರಾತ್ ಒಂದು ಪುರುಷಶಾಹಿ ರಾಜ್ಯ ಎಂದು ಕರೆಯಬಹುದು. ಈ ದಿಶೆಯಲ್ಲಿ ಕರ್ನಾಟಕದ ಸಾಧನೆ ಅತ್ಯುತ್ತಮವೆಂದು ಹೇಳಲು ಬರುವುದಿಲ್ಲ. ಆದರೆ ಅಲ್ಲಿ ಮಹಿಳೆಯರ ಅಭಿವೃದ್ಧಿ ಸ್ಥಿತಿಗತಿಯು ಅನಗತ್ಯವಾಗಿ ಮತ್ತು ಸುಳ್ಳು ಸುಳ್ಳೇ ವೈಭವೀಕರಣಕ್ಕೆ ಒಳಗಾಗಿರುವ ಗುಜರಾತ್ ಅಭಿವೃದ್ಧಿ ಮಾದರಿಯಲ್ಲಿನ ಮಹಿಳೆಯರ ಸ್ಥಿತಿಗತಿಗಿಂತ ಉತ್ತಮವಾಗಿದೆ. ಅಭಿವೃದ್ಧಿಯನ್ನು ವರಮಾನದ ಆಧಾರದ ಮೇಲೆ ಅಳೆಯುವ ಕ್ರಮ ರೂಢಿಯಲ್ಲಿದೆ. ಆದರೆ ವರಮಾನವೇ ಜನರ ಬದುಕಿನ ಮೊತ್ತವಲ್ಲ. ಮಹಿಳೆಯರ ಸ್ವಾತಂತ್ರ್ಯ, ಅವರ ಸ್ವಾಯತ್ತತೆ, ಲಿಂಗ ಸಮಾನತೆಗಳು ಅಭಿವೃದ್ಧಿಯ ಸೂಚಿಗಳಾಗಿವೆ. ಅಮರ್ತ್ಯ ಸೇನ್ ಹೇಳುವಂತೆ ಅಭಿವೃದ್ಧಿ ಅನ್ನುವುದು ಆರ್ಥಿಕ ಸಮೃದ್ಧತೆಗೆ ಪ್ರತಿಯಾಗಿ ಮಹಿಳೆಯರನ್ನು ಒಳಗೊಂಡು ಜನರ ಬದುಕಿನ ಸಮೃದ್ಧತೆಗೆ ಸಂಬಂಧಿಸಿದ ಸಂಗತಿಯಾಗಿದೆ. ಗುಜರಾತಿನಲ್ಲಿ ಸುಮಾರು ೨೯೦ ಲಕ್ಷ ಮಹಿಳೆಯರ ಬದುಕು ದುಸ್ಥಿತಿಯಲ್ಲಿದೆ. ಆರ್ಥಿಕವಾಗಿ ಅದು ಸಬಲವಾಗಿರಬಹುದು. ಆದರೆ ಮಹಿಳೆಯರ ಬದುಕು ಅನೇಕ ಅಸ್ವಾತಂತ್ರ್ಯಗಳ ಕೂಪವಾಗಿದೆ. ಗುಜರಾತ್ ಅಭಿವೃದ್ಧಿ ಮಾದರಿಯೆಂದು ಯಾವುದನ್ನು ಕರೆಯುತ್ತಿದ್ದಾರೋ ಅದರ ದೊಡ್ಡ ಮಿತಿಗಳೆಂದರೆ ಅಲ್ಲಿನ ಮಹಿಳೆಯರು ಎದುರಿಸುತ್ತಿರುವ ತಾರತಮ್ಯ, ಆರೋಗ್ಯ ದುಃಸ್ಥಿತಿ, ಅಸ್ವಾತಂತ್ರ್ಯ ಮತ್ತು ಆಸ್ತಿ ಮಾಲಿಕತ್ವದಿಂದ ವಂಚಿತವಾಗಿರುವ ಸ್ಥಿತಿ ಮುಂತಾದವು. ಮಹಿಳೆಯರ ಬದುಕಿನ ಸ್ಥಿತಿಗತಿಯನ್ನು ಕಡೆಗಣಿಸಿ ಅಭಿವೃದ್ಧಿಯನ್ನು ಅಳೆಯುವುದು ಅಥವಾ ಪರಿಭಾವಿಸಿಕೊಳ್ಳುವುದು ತಪ್ಪು ಅನ್ನುವುದು ಇಂದು ಸಿದ್ಧವಾಗಿರುವ ಒಂದು ಸಂಗತಿಯಾಗಿದೆ. ಗುಜರಾತ್ ಅಭಿವೃದ್ಧಿ ಮಾದರಿಯಲ್ಲಿ ಮಹಿಳೆಯರ ಪಾತ್ರಕ್ಕೆ ಅವಕಾಶವಿಲ್ಲವಾಗಿದೆ. ತುಲನಾತ್ಮಕವಾಗಿ ಪರಿಶೀಲಿಸಿದಾಗ ಕರ್ನಾಟಕದಲ್ಲಿನ ೩೦೧.೨೮ ಲಕ್ಷ ಮಹಿಳೆಯರ ಸ್ಥಿತಿಗತಿಯು ಗುಜರಾತಿನ ೨೮೯.೪೮ ಲಕ್ಷ ಮಹಿಳೆಯರ ಸ್ಥಿತಿಗತಿಗಿಂತ ಉತ್ತಮವಾಗಿರುವುದು ಸ್ಪಷ್ಟವಾಗಿದೆ. ಕರ್ನಾಟಕ ಅಭಿವೃದ್ಧಿ ಮಾದರಿಯಲ್ಲಿ ಮಹಿಳೆಯರು ನ್ಯಾಯಯುತವಾಗಿ ಯಾವ ಸ್ಥಾನ ಪಡೆಯಬೇಕಾಗಿತ್ತೊ ಅದನ್ನು ಪಡೆದುಕೊಳ್ಳಲು ಸಾಧ್ಯವಾಗದಿದ್ದರೂ ಅವರ ಸ್ಥಿತಿಗತಿಯು ಉತ್ತಮವಾಗಿದೆ. ಈ ದೃಷ್ಟಿಯಲ್ಲಿ ಕರ್ನಾಟಕದ ಸಾಧನೆ ಗುಜರಾತಿನ ಸಾಧನೆಗಿಂತ ಉತ್ತಮವಾಗಿದೆ. ಈ ವಿಷಯದಲ್ಲಿ ಕರ್ನಾಟಕದಿಂದ ಗುಜರಾತ್ ಪಾಠ ಕಲಿಯಬೇಕಾಗಿದೆ.

**ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ಸಮಾಲೋಚಕ, ರಾಜ್ಯ ಹಣಕಾಸು ಆಯೋಗ, ಬೆಂಗಳೂರು.

# ಬರಹಗಾರ್ತಿಯಾಗಿ ಆಕಾಶವಾಣಿಯ ಎಚ್. ಎಸ್. ಪಾರ್ವತಿ





ಎರಡು ದಶಕಗಳ ಹಿಂದಿನ ಮಾತು. ಆಕಾಶವಾಣಿಯ 'ಕೇಳಿ ಗಿಳಿಗಳೇ', 'ಕಥಾತರಂಗ', 'ನಾವು ನಮ್ಮವರು' ಕಾರ್ಯಕ್ರಮಗಳ ಮೂಲಕ ಎಚ್. ಎಸ್. ಪಾರ್ವತಿ ಅಂದು ಮನೆಮಾತಾಗಿದ್ದರು. ಬಾನುಲಿಯೊಂದಿಗಿನ ಅವರ ನಂಟು ಸುಮಾರು ೩೨ ವರ್ಷಗಳದ್ದು. 'ಆಕಾಶವಾಣಿಯ ಪಾರ್ವತಿ' ಎಂದೇ ಗುರುತಿಸಿಕೊಳ್ಳುವಷ್ಟರಮಟ್ಟಿಗೆ ಆಕಾಶವಾಣಿಯಲ್ಲಿ ಅವರು ಪ್ರಸಿದ್ಧರಾಗಿದ್ದರು.

ಅಂದು ಹೀಗಿರಲಿಲ್ಲ. ಇಂದಿನ ಮನೋರಂಜನಾ ಮಾಧ್ಯಮದ ಬೃಹತ್ ಸಾಧನವಾದ ಟಿ.ವಿ.ಗಳೇ ಇರದಿದ್ದ ಮನೆಗಳಲ್ಲಿ ರೇಡಿಯೋಗಳದ್ದೇ ದರ್ಬಾರು. ಕೇಳುಗರ ಪಾಲಿಗೆ ವಿವಿಧ ಕಾರ್ಯಕ್ರಮಗಳನ್ನು ಹೊತ್ತು ತರುವ ಆಕಾಶವಾಣಿಯೆ ಅಂದಿನ ಸ್ಟಾರ್ ಮಾಧ್ಯಮ, ಧ್ವನಿಯ ಮೂಲಕವೇ ಸದಭಿರುಚಿಯ ಕಾರ್ಯಕ್ರಮಗಳನ್ನು ನೀಡುವಲ್ಲಿ, ಜ್ಞಾನದ ದಿಗಂತವನ್ನು ವಿಸ್ತರಿಸುವಲ್ಲಿ ಆಕಾಶವಾಣಿ ಅಂದಿನಿಂದ ಇಂದಿನವರೆಗೂ ಸಫಲವಾಗಿದೆ. ಅದರಲ್ಲೂ ಇಂದಿನ ಪೈಪೋಟಿಯ ಅಬ್ಬರದ ಟಿ.ವಿ. ಹಾಗೂ ವಿವಿಧ ಶ್ರವ್ಯ ಮಾಧ್ಯಮಗಳ ನಡುವೆಯೂ ಉತ್ತಮ ಕಾರ್ಯಕ್ರಮಗಳ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಇಂತಹ ಆಕಾಶವಾಣಿಯ ವಿವಿಧ ವಿಭಾಗಗಳಲ್ಲಿ ೩೦ ವರ್ಷಗಳಿಗೂ ಅಧಿಕ ಕಾಲ ಸೇವೆ ಸಲ್ಲಿಸಿ ಬಾನುಲಿಯ ಜನಪ್ರಿಯ ತಾರೆಯಾಗಿದ್ದವರು ಎಚ್. ಎಸ್. ಪಾರ್ವತಿ.

ಆಕಾಶವಾಣಿಯ ನೌಕರಿ ಪಾರ್ವತಿಯವರ ಕನಸಿನ ಉದ್ಯೋಗವಾಗಿತ್ತು. ಅವರ ದೊಡ್ಡಪ್ಪನ ಮಗ ಎಚ್. ಕೆ. ರಂಗನಾಥರವರು ಆಕಾಶವಾಣಿಯಲ್ಲಿ ಕೆಲಸಕ್ಕೆ ಸೇರಿದ ಸಂದರ್ಭ ಪಾರ್ವತಿಯವರಲ್ಲೂ ಅದರ ಬಗ್ಗೆ ಆಸಕ್ತಿ ಮೂಡಿತ್ತು. ಟಿ.ವಿ. ಮಾಧ್ಯಮದಂತೆ ಮೇಕಪ್‌ನ ಅವಶ್ಯಕತೆಯಾಗಲಿ, ಪ್ರಸಾರವಾಗುವ ಭಾಷಣ, ಕಥೆ, ನಾಟಕಗಳನ್ನು ಉರು ಹೊಡೆಯುವುದಾಗಲಿ ಬೇಕಿಲ್ಲದ ಬಾನುಲಿಯಲ್ಲಿ ಕೆಲಸಕ್ಕೆ ಸೇರಬೇಕೆಂದು ಪಾರ್ವತಿಯವರು ಕನಸು ಹೊತ್ತರು. ಆದರೆ ಕಾಲೇಜಿನ ಶಿಕ್ಷಣವಿಲ್ಲದ ತನಗೆ ಆಕಾಶವಾಣಿಯಲ್ಲಿ ನೌಕರಿ ದೊರೆಯಲು ಸಾಧ್ಯವಿಲ್ಲವೆಂಬ ನಿರಾಶೆಯಲ್ಲಿದ್ದ ಅವರಿಗೆ ತಾವು ಕಲಿತ ಹಿಂದಿ ಭಾಷೆಯಿಂದಲೇ ಕನಸಿನ ಉದ್ಯೋಗ ದೊರಕಿತು. ಅದು 'ಭಾಷಾಂತರಕಾರ್ತಿ'ಯಾಗಿ.

ಬುದ್ಧನ ೨೫೦೦ ವರ್ಷಗಳ ಜಯಂತಿಯ ಸಂದರ್ಭದಲ್ಲಿ ಬುದ್ಧನಿಗೆ ಸಂಬಂಧಿಸಿದ ಹಿಂದಿ ಪ್ರಸಾರ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸುವಂತೆ ಆಕಾಶವಾಣಿಯಿಂದ ಕರೆ ಬಂದಾಗ ಪಾರ್ವತಿಯವರು ಒಪ್ಪಿ ಉದ್ಯೋಗಕ್ಕೆ ಸೇರಿದರು. ೧೯೫೮ರಲ್ಲಿ ಆಕಾಶವಾಣಿಯ ಖಾಯಂ ನೌಕರರಾಗಿ ಕಾಪೀಯಿಸ್ಟ್ ಹುದ್ದೆಗೆ ಸೇರಿ ನಂತರ ಸುಮಾರು ಮೂರು ದಶಕಗಳ ಕಾಲ ಧ್ವನಿದಾನ, ಪಾತ್ರ ನಿರ್ವಹಣೆ, ರೂಪಕಗಳ ನಿರ್ಮಾಣ, ನಿರೂಪಣೆ, ಭಾಷಾಂತರ, ಕಾರ್ಯಕ್ರಮ ನಿರ್ವಹಣೆ, ಕಾರ್ಯಕ್ರಮ ಸಂಯೋಜನೆ – ಹೀಗೆ ಬೇರೆ ಬೇರೆ ಹುದ್ದೆಗಳಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದಾರೆ.

ಪಾರ್ವತಿಯವರು ಅಂದು ಆಕಾಶವಾಣಿಯ

**ದಿವ್ಯ ಎಸ್.**

ತಾಯಿಯಾಗಿ,
ಹೆಂಡತಿಯಾಗಿ, ಪ್ರೇಯಸಿಯಾಗಿ,
ಮಗಳಾಗಿ, ಸಹೋದರಿಯಾಗಿ, ಉದ್ಯೋಗಸ್ಥ ಮಹಿಳೆಯಾಗಿ
ಕೌಟುಂಬಿಕ ಹಾಗೂ ಸಾಮಾಜಿಕ ವಲಯದಲ್ಲಿ ಮಹಿಳೆ ಎದುರಿಸುವ ವಿವಿಧ ತಲ್ಲಣಗಳನ್ನು
ಅತ್ಯಂತ ಸಮರ್ಥವಾಗಿ ತೆರೆದಿಡುವ ಮೂಲಕ ಸ್ತ್ರೀ ಬದುಕಿನ ಬಹುಸ್ತರಗಳನ್ನು ಇವರ ಕಥನ ಸಾಹಿತ್ಯ ಚಿತ್ರಿಸುತ್ತದೆ.

'ಇದು ಬರಿ ಬೆಳಗಲ್ಲ' ಕಾದಂಬರಿಯಲ್ಲಿ ಆರ್ಥಿಕವಾಗಿ ಸ್ವಾವಲಂಬಿಯಾಗಬಯಸುವ ಹೆಣ್ಣು ತನ್ನ ಬದುಕಿನಲ್ಲಿ ಎದುರಿಸಬೇಕಾದ ಅನೇಕ ಒತ್ತಡಗಳನ್ನು ಹೇಳಿದರೆ, 'ಒಂದು ಸಂವತ್ಸರ ಚಕ್ರ' ಕಾದಂಬರಿಯು ಹೆಣ್ಣಿನ ಅಸ್ಮಿತೆಯನ್ನು ವಿಚಾರಕ್ಕೆ ಹಚ್ಚುತ್ತದೆ. ಕಾದಂಬರಿಯ ನಾಯಕಿ ಇಲ್ಲಿ ಒಂದು ಸಮಾಜದ ಮಹಿಳಾ ಪ್ರತಿನಿಧಿಯಂತೆ ಕಂಡುಬರುತ್ತಾಳೆ. ತನ್ನ ಸುತ್ತಲಿನ ಪರಿಸರದೊಂದಿಗೆ ಇಲ್ಲಿ ಅವಳ ಆಲೋಚನೆಗಳು ಕೂಡ ಬೆಳೆಯುತ್ತಾ ಬದಲಾಗುತ್ತಾ ಹೋಗುತ್ತವೆ. ಪುರುಷ ಪ್ರಧಾನ ಸಮಾಜದಲ್ಲಿನ ಹೆಣ್ಣಿನ ಅಸ್ತಿತ್ವದ ಪ್ರಶ್ನೆ ಅವಳನ್ನು ಕಾಡುತ್ತದೆ. ಕಾದಂಬರಿ ಸ್ತ್ರೀಯರ ಹಲವಾರು ಸಮಸ್ಯೆಗಳ ಚಿತ್ರಣದೊಂದಿಗೆ ಸ್ತ್ರೀ ಬದುಕನ್ನು ವಿಶ್ಲೇಷಣೆಗೆ ಒಳಪಡಿಸುತ್ತದೆ.

ಕಾರ್ಯಕ್ರಮಗಳಿಂದ ಶ್ರೋತೃಗಳಿಗೆ ಹೆಚ್ಚು ಚಿರಪರಿಚಿತರಾಗಿದ್ದರು. ಅವರು ಅನುವಾದಿಸಿದ ಹಲವಾರು ನಾಟಕಗಳು, ಕಿರುನಾಟಕಗಳು, ಶಬ್ದ ಚಿತ್ರಗಳು ಬಾನುಲಿಯಲ್ಲಿ ಪ್ರಸಾರಗೊಂಡವು. ೧೯೭೦ರ ದಶಕದಲ್ಲಿ ಬೆಂಗಳೂರಿನ ಆಕಾಶವಾಣಿಯ ಕೇಂದ್ರದಿಂದ ಆರಂಭಗೊಂಡು ೧೦ ವರ್ಷಗಳ ಕಾಲ ಪ್ರಸಾರಗೊಂಡ 'ಕಥಾತರಂಗ' ಪಾರ್ವತಿಯವರ ಯಶಸ್ವೀ ಕಾರ್ಯಕ್ರಮ. ಕನ್ನಡದ ಖ್ಯಾತ ಸಾಹಿತಿಗಳ ಸಣ್ಣಕಥೆಗಳನ್ನು ಶ್ರೋತೃಗಳಿಗೆ ಪರಿಚಯಿಸುವ ಉದ್ದೇಶದಿಂದ ರೂಪುಗೊಂಡ ಕಾರ್ಯಕ್ರಮವಿದು. ಕನ್ನಡದ ೬೦ಕ್ಕೂ ಹೆಚ್ಚು ಸಾಹಿತಿಗಳ ಸಣ್ಣಕಥೆಗಳಲ್ಲದೆ ಅನ್ಯಭಾಷೆಯ ಕಥೆಗಳನ್ನು ಬಾನುಲಿಗೆ ಅಳವಡಿಸಿದ ಕೀರ್ತಿ ಪಾರ್ವತಿಯವರದ್ದು. ಅಂತೆಯೇ ಮಕ್ಕಳಿಗಾಗಿ ಒಂದು ವರ್ಷ ಮೂಡಿಬಂದ 'ಕೇಳಿ ಗಿಳಿಗಳೇ' ಕೂಡ ಪಾರ್ವತಿಯವರ ಮತ್ತೊಂದು ಜನಪ್ರಿಯ ಕಾರ್ಯಕ್ರಮವಾಗಿತ್ತು. ಅಲ್ಲದೆ ಸರ್ವಜ್ಞನ ತ್ರಿಪದಿಗಳು ಹಾಗೂ ಕನ್ನಡ ಕವಿಗಳ ಬಗ್ಗೆ ಮೂಡಿಬಂದ 'ಚಿಂತನ' ಕೂಡ ಜನಮೆಚ್ಚುಗೆಯನ್ನು ಗಳಿಸಿತ್ತು. 'ನಾವು–ನಮ್ಮವರು' ಶ್ರೋತೃಗಳ ಪತ್ರಗಳಿಗೆ ಉತ್ತರಿಸುವ ಸಲುವಾಗಿ ಮೂಡಿಬಂದ ಕಾರ್ಯಕ್ರಮ. ಎ. ಎಸ್. ಮೂರ್ತಿ ಅವರೊಂದಿಗೆ ಪಾರ್ವತಿಯವರು ನಡೆಸಿಕೊಟ್ಟ ಈ ಕಾರ್ಯಕ್ರಮದಲ್ಲಿ ಕೊಂಚ ಬದಲಾವಣೆಯಾದರೂ ಶ್ರೋತೃಗಳಿಂದ ನೂರಾರು ಪತ್ರಗಳು ಬರುವಷ್ಟರಮಟ್ಟಿಗೆ ಅಂದಿನ ದಿನಗಳಲ್ಲಿ ಈ ಕಾರ್ಯಕ್ರಮವು ಜನಪ್ರಿಯತೆಯನ್ನು ಗಳಿಸಿತ್ತು.

ಪಾರ್ವತಿಯವರದು ಬಹುಮುಖೀ ಪ್ರತಿಭೆ. ಆಕಾಶವಾಣಿಯ ವಿವಿಧ ವಿಭಾಗಗಳ ಸಮರ್ಥ ನಿರ್ವಹಣೆಯ ಜೊತೆಗೆ ಸಾಹಿತ್ಯದೊಂದಿಗಿನ ಅವರ ನಂಟು ಕೂಡ ಅಗಾಧವಾದದ್ದು. ಉದ್ಯೋಗ ದೊಂದಿಗೆ ಸಾಹಿತ್ಯವಲಯದಲ್ಲೂ ಅಪಾರ ಸೇವೆಗೈದ 'ಆಕಾಶವಾಣಿಯ ಪಾರ್ವತಿ'ಯವರು ಕನ್ನಡ ಮಹಿಳಾ ಸಾಹಿತ್ಯದ ಹಿರಿಯ ಲೇಖಕಿ ಹಾಗೂ ಸಂಘಟಕಿ ಕೂಡ.

ಪಾರ್ವತಿಯವರದು ಸಾಹಿತ್ಯಿಕ ವಾತಾವರಣವುಳ್ಳ ಕುಟುಂಬವಾಗಿತ್ತು. ತಂದೆಗೆ ಪುಸ್ತಕ ಓದುವುದರಲ್ಲಿ ಅಪಾರ ಆಸಕ್ತಿ. ಆ ಆಸಕ್ತಿಯ ಫಲವಾಗಿ ಮನೆಯಲ್ಲಿ ಒಂದು ಸಣ್ಣ ಪುಸ್ತಕ ಭಂಡಾರವೇ ಇದ್ದಿತು. ಅಲ್ಲದೆ ಹಬ್ಬಹರಿದಿನಗಳಲ್ಲಿ ಮನೆಯಲ್ಲಿಯೇ ಗದುಗಿನ ಭಾರತ, ಜೈಮಿನಿ ಭಾರತ, ಹರಿಶ್ಚಂದ್ರ ಕಾವ್ಯಗಳನ್ನು ಓದುವುದು; ದೇವರನಾಮ, ವಚನಗಳನ್ನು ಹಾಡುವ ರೂಢಿ ಬೆಳೆದು ಬಂದಿತ್ತು. ಇವೆಲ್ಲವೂ ಪಾರ್ವತಿ ಅವರಲ್ಲಿ ಸಾಹಿತ್ಯಾಸಕ್ತಿಯನ್ನು ಹುಟ್ಟುಹಾಕಿತ್ತು.

ಪಾರ್ವತಿಯವರಿಗೆ ಹೆಚ್ಚಿನ ಓದಿನ ಆಸಕ್ತಿಯಿದ್ದರೂ ಮನೆಯ ಆರ್ಥಿಕ ಸ್ಥಿತಿಯ ಕಾರಣವಾಗಿ ಕಾಲೇಜಿನ ಶಿಕ್ಷಣ ದೊರಕಲಿಲ್ಲ. ಆದರೆ ಹಿಂದಿ ಪರೀಕ್ಷೆಗಳನ್ನು ತೆಗೆದುಕೊಂಡು ಪ್ರವೀಣ್ ಮತ್ತು ಪ್ರಚಾರಕ್ ಡಿಗ್ರಿಗಳನ್ನು ಪಡೆದುಕೊಂಡರು. ಹೀಗೊಮ್ಮೆ ಅವರು ತಮ್ಮ ಪಠ್ಯಪುಸ್ತಕದ ಹಿಂದಿ ಕಥೆಯೊಂದನ್ನು ಕನ್ನಡಕ್ಕೆ ಅನುವಾದಿಸಿಟ್ಟಿದ್ದನ್ನು ಕಂಡಂತಹ ಪ್ರಗತಿಶೀಲ ಸಾಹಿತಿ ನಿರಂಜನರು ಆ



ಅನುವಾದವನ್ನು ಮೆಚ್ಚಿ ಪ್ರಸಿದ್ಧ ಹಿಂದಿ–ಉರ್ದು ಸಾಹಿತಿಯಾದ ಕೃಷ್ಣಚಂದ್ ಅವರ 'ಪರಾಜಯ' ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸುವಂತೆ ಪಾರ್ವತಿ ಅವರನ್ನು ಪ್ರೋತ್ಸಾಹಿಸಿ, ಅದನ್ನು ಧಾರಾವಾಹಿಯಾಗಿ ಪ್ರಕಟಿಸಿ, ಕನ್ನಡಕ್ಕೆ ಸಾಹಿತ್ಯ ಲೋಕಕ್ಕೆ ಅವರನ್ನು ಪರಿಚಯಿಸಿದರು ಹಾಗೂ ಪಾರ್ವತಿಯವರ ಸಾಹಿತ್ಯ ಲೋಕದ ಪಯಣಕ್ಕೆ ಪ್ರೇರಕ ಶಕ್ತಿಯಾದರು.

ಪಾರ್ವತಿಯವರು ಹುಟ್ಟಿ, ಬೆಳೆದ ಸಂದರ್ಭವು ಸಮಾಜದಲ್ಲಿ ಅನೇಕ ವಿಧದ ಕಟ್ಟುಪಾಡುಗಳು ಸ್ತ್ರೀಯರಿಗಷ್ಟೇ ಮೀಸಲಿರಿಸಿದ್ದ ಕಾಲವಾಗಿತ್ತು. ಸಮಾಜ ಇರುವುದೇ ಹೀಗೆಂದು ಇರುವ ಸ್ಥಿತಿಯನ್ನು ಒಪ್ಪಿ ಬದುಕುತ್ತಿದ್ದ ಕುಟುಂಬಗಳೇ ಅಂದು ಹೆಚ್ಚಿದ್ದವು. ಇಂತಹ ಸ್ತ್ರೀಯರ ಸಂಪ್ರದಾಯಸ್ಥ ಸಂಕೋಲೆಗಳಿಗೆ ಪಾರ್ವತಿಯವರಲ್ಲಿ ವಿರೋಧವಿತ್ತು. ಗಂಡು–ಹೆಣ್ಣನ್ನು ಭೇದ ಮಾಡಿ ನೋಡುವ ನಮ್ಮ ಸಮಾಜದ ವ್ಯವಸ್ಥೆ ಬಾಲ್ಯದಲ್ಲಿಯೇ ಇವರಲ್ಲಿ ಪ್ರತಿಭಟನೆಯ ಕೂಗನ್ನು ಎಬ್ಬಿಸುತ್ತಿತ್ತು. ಗಂಡು–ಹೆಣ್ಣು ಮಕ್ಕಳಲ್ಲಿ ವ್ಯತ್ಯಾಸ ಮಾಡಿ ನೋಡುವುದು, ತಂದೆ–ತಾಯಂದಿರಿಗೆ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸುವುದರಲ್ಲಿ ಇದ್ದ ನಿರುತ್ಸಾಹ ಪಾರ್ವತಿಯವರಲ್ಲಿ ಬೇಸರವನ್ನು ಉಂಟು ಮಾಡಿತ್ತು. ಮದುವೆಯಾಗಲಿಲ್ಲವೆಂದು ಆತ್ಮಹತ್ಯೆ ಮಾಡಿಕೊಳ್ಳುವ ಹುಡುಗಿಯರು, ಬಾಲವಿಧವೆಯರ ಗೋಳು, ಮಡಿ ಅಜ್ಜಿಯರ ಕಷ್ಟ, ಎರಡನೇ ಮೂರನೇ ಸಂಬಂಧವಾದರೂ ಸರಿ ಹೆಣ್ಣಿಗೆ ಮದುವೆ ಯಾದರೆ ಸಾಕೆಂಬ ಧೋರಣೆ, ಮದುವೆಯಾದ ಮೇಲೂ ಅತ್ತೆ ಮನೆಯಲ್ಲಿ ನರಳುವ ಹೆಣ್ಣುಮಕ್ಕಳು, ಅನಾಥವಾಗಿ ಕಸದ ತೊಟ್ಟಿಯಲ್ಲಿ ಬೀಳುವ ನವಜಾತ ಶಿಶುಗಳು, ಎಲ್ಲದಕ್ಕೂ ಹೆಣ್ಣನ್ನೇ ಹೊಣೆಯೆಂದು ದೂರುವ ಸಮಾಜ, ಅಲ್ಲದೆ ಸಾವಿರಾರು ನಿರ್ಬಂಧಗಳ ನಡುವೆ ನರಳುವ ಸ್ತ್ರೀಯರ ಇಂತಹ ಸ್ಥಿತಿಗಳನ್ನು ಕಂಡು ಇವುಗಳ ವಿರುದ್ಧ ಸಾಹಿತ್ಯದ ಮೂಲಕ ಹೋರಾಡಬೇಕೆಂದು ಬರವಣಿಗೆಯನ್ನು ಆರಂಭಿಸಿದ ಪಾರ್ವತಿಯವರಿಗೆ ನಿರಂಜನರ ಪ್ರೋತ್ಸಾಹ ಬರೆಯುವ ಉತ್ಸಾಹವನ್ನು ಹೆಚ್ಚಿಸಿತು. ಜೊತೆಗೆ ಇವರು ಸಾಹಿತ್ಯವನ್ನು ಪ್ರವೇಶಿಸಿದ ಸಂದರ್ಭ ಪ್ರಗತಿಶೀಲ ಚಳವಳಿಯ ಕಾಲವಾದ್ದರಿಂದ ಪ್ರತಿಭಟಿಸುವ ಮನೋಧರ್ಮವಿದ್ದ ಇವರಿಗೆ ಈ ಚಳವಳಿಯ ಸಿದ್ಧಾಂತಗಳು ಬಲವಾಗಿ ಸೆಳೆದವು. ಅದಕ್ಕಾಗಿಯೇ ಸಾಹಿತ್ಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿ ಅನ್ಯಾಯವನ್ನು ಪ್ರಶ್ನಿಸುವ, ಶೋಷಣೆಯ ವಿರುದ್ಧ ದನಿ ಎತ್ತುವ ದಿಟ್ಟ ಬರವಣಿಗೆಯನ್ನು ಆರಂಭಿಸಿದರು. ಬಹುವಾಗಿ 'ಸ್ತ್ರೀ'ಯನ್ನು ತಮ್ಮ ಸಾಹಿತ್ಯದ ಕೇಂದ್ರಬಿಂದುವಾಗಿಸಿ ಮಹಿಳಾ ಸಮಸ್ಯೆಗಳನ್ನು ಪ್ರಗತಿಪರ ಚಿಂತನೆಗಳ ಮೂಲಕ ಅವಲೋಕಿಸಿದರು. ಸಣ್ಣಕಥೆ, ಕಾದಂಬರಿ, ವಿಮರ್ಶೆ, ಸಂಪಾದನೆ, ನಾಟಕಗಳು, ವ್ಯಕ್ತಿಚಿತ್ರ, ಜೀವನ ಚರಿತ್ರೆ ಹೀಗೆ ಒಂದಾದ ನಂತರ ಮತ್ತೊಂದರಂತೆ ಇವರ ಲೇಖನಿಯಿಂದ ಬರಹಗಳು ಮೂಡತೊಡಗಿದವು. ಹೊಸಗನ್ನಡದ ವಿಚಾರವಂತ ಮಹಿಳಾ ಸಾಹಿತಿ ಯಾಗಿ ಪಾರ್ವತಿಯವರು ಹೊರಹೊಮ್ಮಿದರು. ಜೊತೆಗೆ ಆಕಾಶವಾಣಿಯಲ್ಲಿ ಸಹ ಇವರ ಸಾಹಿತ್ಯಕ್ಕೆ ಇಂಬು ಕೊಡುವಂತಹ ವಾತಾವರಣವಿದ್ದಿತು. ಬಾನುಲಿಯಿಂದ ನೂರಾರು ಸಾಹಿತಿಗಳ ಹಾಗೂ ಕಲಾವಿದರ ಪರಿಚಯ ಸಹ ಇವರಿಗೆ ದೊರಕಿತು. "ಬರವಣಿಗೆಯಲ್ಲೇ ಶಿಸ್ತು ಕಲಿಸಿದ್ದು ಆಕಾಶವಾಣಿ. ಅನಾವಶ್ಯಕವಾಗಿ ಲೇಖನ ಅಥವಾ ಬರಹಗಳು ಉದ್ದವಾಗದಂತೆ, ವೇಳಾ ಪರಿಮಿತಿಯ ತಂತ್ರಗಾರಿಕೆಯನ್ನು ಕಲಿಸಿದ್ದು ಈ ಬಾನುಲಿ ಯಾದ್ದರಿಂದ ಅದು ನನ್ನ ಎರಡನೇ ಮನೆಯೇ ಆಗಿತ್ತು" ಎಂಬುದಾಗಿ ಸ್ವತಃ ಪಾರ್ವತಿಯವರೆ ನೆನೆಯುತ್ತಾರೆ. (ಗೌರಿಸುಂದರ್ (ಸಂ.), ಸೃಜನಶೀಲ ಲೇಖಕಿ ಎಚ್. ಎಸ್. ಪಾರ್ವತಿ, ಸುಂದರ ಪ್ರಕಾಶನ, ಬೆಂಗಳೂರು, ೨೦೧೦, ಪು. ೧೦೨).

೧೮ನೇ ವಯಸ್ಸಿನಲ್ಲೇ ಬರವಣಿಗೆಯನ್ನು ಆರಂಭಿಸಿದ ಪಾರ್ವತಿಯವರು ಕನ್ನಡ ಮಹಿಳಾ ಸಾಹಿತ್ಯಲೋಕಕ್ಕೆ ಕೊಟ್ಟ ಕೊಡುಗೆ ಅಪಾರವಾದುದು. "ಪಾರ್ವತಿಯವರ ಬದುಕೆಂದರೆ ಅದು ಸಾಹಿತ್ಯದ ಬದುಕು. ಅವರು ಕಣ್ಣು ತೆರೆದು ನೋಡಿದಾಗ ಅವರಿಗೆ ಕಂಡದ್ದು ಸಾಹಿತ್ಯ ಪ್ರಪಂಚ. ಅವರ ಬದುಕಿನ ಬೆಳವಣಿಗೆ ಎಂದರೆ ಅದು ಸಾಹಿತ್ಯದೊಂದಿಗಿನ ಬೆಳವಣಿಗೆಯೇ. ಹಾಗಾಗಿ

ಅವರ ಬದುಕು ಎಂದರೆ ಕನ್ನಡದ, ಸ್ತ್ರೀ ಸಾಹಿತ್ಯದ ಎಪ್ಪತ್ತರ ನಂತರದ ಸಾಹಿತ್ಯ ಚರಿತ್ರೆ ಎನ್ನಬಹುದು" (ಇಂದಿರಾ ಶಿವಣ್ಣ (ಸಂ.), ಕರ್ನಾಟಕದ ಅನನ್ಯ ಸಾಧಕಿಯರು, ಕಾರ್ತಿಕ್ ಎಂಟರ್‌ಪ್ರೈಸಸ್, ಬೆಂಗಳೂರು, ೨೦೧೦, ಪು. ೮೨) ಎಂಬಂತಹ ಭಾಗ್ಯ ಜಯಸುದರ್ಶನ ಅವರ ಮಾತುಗಳು ಸಾಹಿತ್ಯದ ಜೊತೆಗಿನ ಪಾರ್ವತಿಯವರ ನಂಟನ್ನು ಎತ್ತಿ ಹಿಡಿಯುತ್ತವೆ. ಪಾರ್ವತಿಯವರ ಲೇಖನಿಯಿಂದ ರಚಿತವಾದ ಒಟ್ಟು ಕೃತಿಗಳ ಸಂಖ್ಯೆ ೬೫. ಹೆಣ್ಣು ಹೃದಯ, ಬದಲಾದ ಪ್ರತಿಬಿಂಬ, ಸ್ವರ–ಅಪಸ್ವರ, ನೆನಪು ಸಾಯಲಿಲ್ಲ, ಸುಳಿ, ಒಂಟಿಮೋಡ, ಮಹಾಭಾರತದ ಉಪಕಥೆಗಳೆಂಬ ೭ ಕಥಾಸಂಕಲನಗಳು; ನೇಸರ ನೆಳಲು, ಜೀವನ ಜಾಲ, ಜಬಾಲಾ, ಗೂಡಿನಿಂದ ಗಗನಕ್ಕೆ, ಒಂದು ಸಂವತ್ಸರ ಚಕ್ರ, ಮಡಿಲು, ನಂದನಂದನ, ಯುಗಪುರುಷ, ಇದು ಬರಿ ಬೆಳಗಲ್ಲ, ಹಾವು ಏಣಿಯಾಟ, ಕಲೆಗೆ ಜಾತಿ ಹಂಗಿಲ್ಲ ಎಂಬ ೧೧ ಕಾದಂಬರಿಗಳು; ಪರಾಜಯ, ಪಂಜಾಬಿ ಲೋಕ ಕಥೆಗಳು, ಬಿಳಿಯ ರಕ್ತ, ಮಾಸಿದ ಸೆರಗು, ದರ್ಬಾರಿ ರಾಗ, ಬಂಟಿ, ಮಂದಹಾಸ, ಫಣೀಶ್ವರನಾಥ ರೇಣು, ನನಗ ಚಂಡಿರಬೇಕು, ರಣಹದ್ದುಗಳು, ಉದಯಹೆಡೆಗೆ, ತ್ಯಾಗಪತ್ರ, ದುರ್ಗೇಶ ನಂದಿನಿ, ಮುಚ್ಚಿದ ಬಾಗಿಲು, ಬಲಿದಾನ, ಗಂಗಾತಾಯಿಗಳೆಂಬ ಅನುವಾದಿತ ಕೃತಿಗಳು; ಚಿಂತನ–ಮಂಥನ, ಓದಿನಾ ಒಳಗು, ಮಹಾದೃಷ್ಟಿ, ನವೋದಯ ಕಾವ್ಯದಲ್ಲಿ ಪ್ರಕೃತಿ, ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ, ನೋವ ನುಂಗಿ ನಕ್ಕವರು, ಇಪ್ಪತ್ತನೆಯ ಶತಮಾನದ ಮಹಿಳೆಯರ ಕೊಡುಗೆ, ಸಾಹಿತ್ಯ ಲಹರಿ ಎಂಬ ಪ್ರಬಂಧ ಸಂಕಲನಗಳು; ಆರ್. ಕಲ್ಯಾಣಮ್ಮ, ತಿರುಮಲೆ ರಾಜಮ್ಮ, ಶಾರದಾದೇವಿ, ಪ್ರೇಮಚಂದ್, ಮೀರಾಬಾಯಿ, ಅಮೃತಾ ಪ್ರೀತಂ, ನಾಗರತ್ನಮ್ಮ, ಹನುಮಾನ್ ಪ್ರಸಾದ್ ಪೋದ್ದಾರ್ ಮೊದಲಾದ ಜೀವನ ಚರಿತ್ರೆಗಳು; ಭಾರತಿ, ಜಿ. ನಾರಾಯಣ, ಸುರಗಿ, ಸುನಂದಾಭಿನಂದನ ಎಂಬ ಸಂಭಾವನಾ ಗ್ರಂಥಗಳು; 'ಹತ್ತಿರದವರು' ಎಂಬ ಹರಟೆ ಸಂಕಲನ; ಬಾನುಲಿ ನಾಟಕಗಳು, ನೆನಪಿನಂಗಳದಿಂದ ಈ ಮೊದಲಾದ ವಿವಿಧ ಪ್ರಕಾರದ ಕೃತಿಗಳು ಇವರಿಂದ ರಚನೆಗೊಂಡಿವೆ.

ಪಾರ್ವತಿ ಅವರ ಅನುಭವ, ಅಧ್ಯಯನ ಹಾಗೂ ವಿಚಾರಧಾರೆಗಳ ಫಲವೇ ಈ ಕೃತಿಗಳು. ಸರಳ–ಸುಂದರ ನಿರೂಪಣೆಯೇ ಇವರ ಬರಹದ ಶೈಲಿ. ಯಾವುದೇ ಕೃತಿಯನ್ನು ರಚಿಸುವಾಗ ಕೃತಿಯ ವಸ್ತುವಿನ ಬಗ್ಗೆ ದೀರ್ಘವಾಗಿ ಚಿಂತಿಸಿ, ಅಧ್ಯಯನಕ್ಕೊಳಪಡಿಸಿ ಪರಿಷ್ಕಾರ ಮಾಡಿಯೇ ಕೃತಿಗಳನ್ನು ಪ್ರಕಟಿಸುವಂತಹ ಪರಿಪೂರ್ಣ ಲೇಖಕಿ ಇವರು. ತ್ರಿವೇಣಿ, ವಾಣಿ, ಅನುಪಮಾ ನಿರಂಜನರಂತಹ ಸಾಹಿತಿಗಳು ಅದಾಗಲೇ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಪ್ರಸಿದ್ಧರಾಗಿದ್ದ ಸಮಯದಲ್ಲಿ ಹೊಸ ದಿಕ್ಕಿನ ಲೇಖಕಿಯಾಗಿ ಸಾಹಿತ್ಯ ಲೋಕಕ್ಕೆ ಕಾಲಿರಿಸಿದ ಪಾರ್ವತಿಯವರು ತಮ್ಮದೇ ವಿಶಿಷ್ಟತೆಯನ್ನು ಕಾಯ್ದುಕೊಂಡರು. ಸ್ತ್ರೀ ಪರವಾದ ದೃಷ್ಟಿಯ ಮೂಲಕ ವಿವಿಧ ಪ್ರಕಾರಗಳಲ್ಲಿ ರಚನೆಗೊಂಡ ಇವರ ಎಲ್ಲ ಕೃತಿಗಳು ಕನ್ನಡ ಮಹಿಳಾ ಸಾಹಿತ್ಯಕ್ಕೆ ಅನನ್ಯ ಕೊಡುಗೆಗಳಾಗಿವೆ.

'ಸ್ತ್ರೀ' ಪಾರ್ವತಿಯವರ ಬರವಣಿಗೆಯ ಕೇಂದ್ರಬಿಂದು. ಸಾಂಪ್ರದಾಯಿಕ ಸಿದ್ಧಸೂತ್ರಗಳ ಚೌಕಟ್ಟಿನೊಳಗೆ ಬಂಧಿಸಲ್ಪಟ್ಟ ಹೆಣ್ಣನ್ನು ಆ ಬಂಧನದಿಂದ ಹೊರತಂದು ಅವಳ ಅಸ್ಮಿತೆಯನ್ನು ತಮ್ಮ ಕಥೆ–ಕಾದಂಬರಿಗಳಲ್ಲಿ ಕಾಣಿಸಿದ್ದಾರೆ. ಅವಿವಾಹಿತಳಾಗಿಯೇ ಬದುಕನ್ನು ನಿರ್ವಹಿಸುವ, ಶೋಷಿತಳಾಗಿ ಬದುಕುವುದಕ್ಕಿಂತಲೂ ಗಂಡನನ್ನು ತಿರಸ್ಕರಿಸಿ ಸ್ವತಂತ್ರವಾಗಿ ಬದುಕುವ, ಕೌಟುಂಬಿಕ–ಸಾಮಾಜಿಕ–ಔದ್ಯೋಗಿಕ ವಲಯದಲ್ಲಿ ತನ್ನ ಮೇಲಾಗುವ ಶೋಷಣೆಯನ್ನು ಪ್ರಶ್ನಿಸುವ, ತನ್ನದೇ ಸ್ವ–ಬದುಕನ್ನು ಕಟ್ಟಿಕೊಳ್ಳುವ ದಿಟ್ಟ ಪಾತ್ರ ಚಿತ್ರಣ ಇವರದ್ದು. 'ಸುಳಿ' ಕಥಾಸಂಕಲನದ 'ಅ(ರ್ಧ)ಜ್ಞಾನ' ಕಥೆಯಲ್ಲಿ ಕನ್ಯತ್ವದ ಬಗೆಗೆ ಗಂಡನ ತಪ್ಪು ತಿಳುವಳಿಕೆಯ ಕಾರಣವಾಗಿ ಅವನಿಂದ ಕಥಾನಾಯಕಿ ಕಲ್ಯಾಣಿ ನಿರಾಕರಣೆಗೆ ಗುರಿಯಾಗುತ್ತಾಳೆ. ಆದರೆ ಮುಂದೆ ಅವನ ತಪ್ಪಿನ ಅರಿವಾಗಿ ತನ್ನನ್ನು ಸ್ವೀಕರಿಸಲು ಬಂದ ಗಂಡನನ್ನು ಕಲ್ಯಾಣಿಯೇ ನಿರಾಕರಿಸುತ್ತಾಳೆ. "ಗಂಡನಿಗೆ ಬೇಡ ಅನ್ನಿಸಿದಾಗ ಹೋಗೋದಿಕ್ಕೆ, ಬೇಕು ಅನ್ನಿಸಿದಾಗ ವಾಪಸ್ಸು ಬರೋದಿಕ್ಕೆ ಹೆಣ್ಣುಮಕ್ಕಳು ಕೀಲುಗೊಂಬೆಗಳೇನು? ಅವರಿಗೂ ಒಂದು ಮನಸ್ಸು ಅನ್ನೋದು ಇರುತ್ತೆ ತಾನೇ? ..." (ಪಾರ್ವತಿ ಎಚ್. ಎಸ್. ಸುಳಿ, ಶ್ರೀ ಲಕ್ಷ್ಮೀ ವೆಂಕಟೇಶ್ವರ ಪ್ರಕಾಶನ, ಬೆಂಗಳೂರು, ೨೦೦೨, ಪು. ೩೦) ಎಂಬ ಮಾತುಗಳು ತಪ್ಪು ಕಲ್ಪನೆಯಿಂದ ತನ್ನ ಶೀಲತೆಯನ್ನು ಅನುಮಾನಿಸಿದ ಗಂಡನ ಅವಿವೇಕತನದ ವಿರುದ್ಧದ ಪ್ರತಿಭಟನೆಯಾಗಿದೆ. ಅಂತೆಯೇ 'ಬದಲಾದ ಪ್ರತಿಬಿಂಬ' ಕಥೆಯಲ್ಲಿನ ನಾಯಕಿ 'ಸುಮನಾ'ಳಿಗೆ ವಿವಾಹವಾಗಲು ಆಕೆಯ ತವರಿನ ಆಸರೆಯಾಗಿದ್ದ ಮನೆಯನ್ನು ತಮ್ಮ ಹೆಸರಿಗೆ ಬರೆಯಬೇಕೆಂದು ವರನ ಮನೆಯವರು ಬೇಡಿಕೆಯಿಡುತ್ತಾರೆ. ತನ್ನನ್ನು ಪ್ರೀತಿಸಿದ ಮಾಧವನೂ ಕೂಡ ತಾಯಿಯ ಮಾತಿಗೆ ಸಮ್ಮತಿಸುತ್ತಾನೆ. ಹೃದಯಕ್ಕಿಂತ ಆಸ್ತಿ–ಪಾಸ್ತಿಗೆ ಬೆಲೆ ಕೊಡುವವರ ಸಹವಾಸ ತನಗೆ ಬೇಡವೆಂದು ಮದುವೆಯನ್ನೇ ನಿರಾಕರಿಸಿದ 'ಸುಮನಾ' ಓದನ್ನು ಮುಂದುವರಿಸಿ ನೌಕರಿ ಹಿಡಿಯುವ ಅವಳ ದಿಟ್ಟತನವನ್ನು ಮೆರೆಯುತ್ತಾಳೆ. ಹಾಗೆಯೇ ಇವರ 'ಜಬಾಲಾ' ಕಾದಂಬರಿ ತನ್ನಲ್ಲಿ ದೋಷವಿಲ್ಲದಿದ್ದರೂ 'ಬಂಜೆ' ಎಂಬ ನಿಂದನೆಗೆ ಗುರಿಯಾಗಲು ಸಿದ್ಧವಿರದೆ ಬೇರೊಬ್ಬ ಪುರುಷನಿಂದ ಮಗುವನ್ನು ಪಡೆದು ಪುರುಷ ಪ್ರಧಾನ ಸಮಾಜದ ಅಪವಾದಕ್ಕೆ, ಹೀಯಾಳಿಕೆಗೆ ಉತ್ತರ ನೀಡುವ ಹೆಣ್ಣೊಬ್ಬಳ ದಿಟ್ಟ ಕಥೆಯನ್ನೊಳಗೊಂಡಿದೆ.

ತಾಯಿಯಾಗಿ, ಹೆಂಡತಿಯಾಗಿ, ಪ್ರೇಯಸಿಯಾಗಿ, ಮಗಳಾಗಿ, ಸಹೋದರಿಯಾಗಿ, ಉದ್ಯೋಗಸ್ಥ ಮಹಿಳೆಯಾಗಿ ಕೌಟುಂಬಿಕ ಹಾಗೂ ಸಾಮಾಜಿಕ ವಲಯದಲ್ಲಿ ಮಹಿಳೆ ಎದುರಿಸುವ ವಿವಿಧ ತಲ್ಲಣಗಳನ್ನು ಅತ್ಯಂತ ಸಮರ್ಥವಾಗಿ ತೆರೆದಿಡುವ ಮೂಲಕ ಸ್ತ್ರೀ ಬದುಕಿನ ಬಹುಸ್ತರಗಳನ್ನು ಇವರ ಕಥನ ಸಾಹಿತ್ಯ ಚಿತ್ರಿಸುತ್ತದೆ. 'ಇದು ಬರಿ ಬೆಳಗಲ್ಲ' ಕಾದಂಬರಿಯಲ್ಲಿ ಆರ್ಥಿಕವಾಗಿ ಸ್ವಾವಲಂಬಿಯಾಗಬಯಸುವ ಹೆಣ್ಣು





## ವೇದನೆ

ಹಾರುವ ಹಕ್ಕಿಯನು ಪಂಜರದೊಳಿಟ್ಟು
ಹಣ್ಣು ಕೊಟ್ಟರಿ, ಕಾಳು ಕೊಟ್ಟರಿ
ಹೊಟ್ಟೆ ತುಂಬುವ ವಸ್ತುಗಳಿವು
ಮನವ ತುಂಬುವುವಲ್ಲ.

ರೆಕ್ಕೆ ಇದ್ದೂ ಹಾರಲಿಲ್ಲ
ಬದುಕು ಇದ್ದೂ ಬೆಳೆಯಲಿಲ್ಲ
ಇಂಥ ಸ್ಥಿತಿ ಎನಗಷ್ಟೆ ಸಾಕು
ಹೊಸ ಎತ್ತರಕೆ ಸ್ತ್ರೀ ಬೆಳೆಯಬೇಕು

ರೆಕ್ಕೆ ಬಲಿತಿವೆ ಹೊರಗೆ
ಆತ್ಮವಿಶ್ವಾಸ ಬಲಿಯಬೇಕಾಗಿದೆ ಒಳಗೆ
ಇಡುವೆ ಒಂದು ದಿನ ನನ್ನದೇ ಹೆಜ್ಜೆ
ಸ್ತ್ರೀ ಸಂವೇದನೆಗೆ ಕಟ್ಟಿದಂತೆ ಎಚ್ಚರದ ಗೆಜ್ಜೆ

**ವಿದ್ಯಾ ನರಗುಂದ**
ಮು. ಪೋಸ್ಟ್ – ತಾಂಬಾ, ಇಂಡಿ ತಾಲ್ಲೂಕು
ವಿಜಯಪುರ ಜಿಲ್ಲೆ – ೫೮೬ ೨೧೫

ತನ್ನ ಬದುಕಿನಲ್ಲಿ ಎದುರಿಸಬೇಕಾದ ಅನೇಕ ಒತ್ತಡಗಳನ್ನು ಹೇಳಿದರೆ, 'ಒಂದು ಸಂವತ್ಸರ ಚಕ್ರ' ಕಾದಂಬರಿಯು ಹೆಣ್ಣಿನ ಅಸ್ಮಿತೆಯನ್ನು ವಿಚಾರಕ್ಕೆ ಹಚ್ಚುತ್ತದೆ. ಕಾದಂಬರಿಯ ನಾಯಕಿ ಇಲ್ಲಿ ಒಂದು ಸಮಾಜದ ಮಹಿಳಾ ಪ್ರತಿನಿಧಿಯಂತೆ ಕಂಡು ಬರುತ್ತಾಳೆ. ತನ್ನ ಸುತ್ತಲಿನ ಪರಿಸರದೊಂದಿಗೆ ಇಲ್ಲಿ ಅವಳ ಆಲೋಚನೆಗಳು ಕೂಡ ಬೆಳೆಯುತ್ತಾ ಬದಲಾಗುತ್ತಾ ಹೋಗುತ್ತವೆ. ಪುರುಷ ಪ್ರಧಾನ ಸಮಾಜದಲ್ಲಿನ ಹೆಣ್ಣಿನ ಅಸ್ತಿತ್ವದ ಪ್ರಶ್ನೆ ಅವಳನ್ನು ಕಾಡುತ್ತದೆ. ಕಾದಂಬರಿ ಸ್ತ್ರೀಯರ ಹಲವಾರು ಸಮಸ್ಯೆಗಳ ಚಿತ್ರಣದೊಂದಿಗೆ ಸ್ತ್ರೀ ಬದುಕನ್ನು ವಿಶ್ಲೇಷಣೆಗೆ ಒಳಪಡಿಸುತ್ತದೆ.

ಪಾರ್ವತಿಯವರ 'ಬಯಕೆಯ ಬಲೆ', 'ಗಂಡಾಗಿ ಕಾಡಿತ್ತು ಮಾಯೆ', 'ಕರುಳು ಸೆಳೆತ', 'ನೆನಪು ಸಾಯಲಿಲ್ಲ', 'ಒಂಟಿಮೋಡ', 'ಕಲ್ಲಿನ ಹುಡುಗಿ', 'ಹೆಣ್ಣು ಹೃದಯ', 'ಮೋಡ ಚದುರಿತು', 'ನಾನು ಇವಳು' ಮೊದಲಾದ ಕಥೆಗಳಲ್ಲಿ ಪ್ರೇಮ-ವಿವಾಹ-ದಾಂಪತ್ಯದಲ್ಲಿನ ಸ್ತ್ರೀ ಬದುಕಿನ ಸ್ವರೂಪವಿದೆ. ವಿವಾಹಿತೆ ಹಾಗೂ ಅವಿವಾಹಿತೆಯ ಸಮಸ್ಯೆಯ ಚಿತ್ರಣವಿದೆ. ಉದ್ಯೋಗಸ್ಥ ಮಹಿಳೆಯ ತಾಕಲಾಟ ಗಳಿವೆ ಹಾಗೂ ಸಮಾಜದೊಳಗಿನ ಹೆಣ್ಣಿನ ತಲ್ಲಣ ಗಳೊಂದಿಗೆ ಆಕೆಯ ಆದರ್ಶ ಬದುಕಿನ ಅಸ್ತಿತ್ವವೂ ಇದೆ. ಇದರೊಂದಿಗೆ ಆಧುನಿಕ ಸ್ತ್ರೀಯಷ್ಟೇ ಅಲ್ಲದೆ ಅಂಬೆ, ದಮಯಂತಿ, ಕೈಕೇಯಿಯಂತಹ ಪುರಾಣದ ಸ್ತ್ರೀಯರ ಬದುಕು ಕೂಡ ಇವರ ಕಥೆಗಳಿಗೆ ವಸ್ತುಗಳಾಗಿವೆ.

ಪಾರ್ವತಿಯವರು ವೈಚಾರಿಕ ಪ್ರಜ್ಞೆಯುಳ್ಳ ಬರಹಗಾರ್ತಿ. 'ವಿಚಾರವಂತಿಕೆ' ಇವರ ಕೃತಿಗಳಲ್ಲಿ ಎದ್ದುಕಾಣುವ ಅಂಶ. ಹಾಗಾಗಿ ಇವರ 'ನಂದನಂದನ', 'ಯುಗಪುರುಷ' ಕಾದಂಬರಿಗಳಲ್ಲಿ ಪುರಾಣದ ಕೃಷ್ಣಕಥೆ ವೈಚಾರಿಕ ದೃಷ್ಟಿಕೋನದಲ್ಲಿ ಹೊಸ ಸ್ವರೂಪ ಪಡೆದಿವೆ. ಇದಲ್ಲದೆ ವರ್ಗ ಮತ್ತು ವರ್ಣ ಸಮಸ್ಯೆಯ ವಿವಿಧ ಮುಖಗಳನ್ನು ಇವರ ಕಥೆ-ಕಾದಂಬರಿಗಳಲ್ಲಿ ಕಾಣಬಹುದು. 'ಹಾವು ಏಣಿಯಾಟ', 'ಕಲೆಗೆ ಜಾತಿಯ ಹಂಗಿಲ್ಲ' ಕಾದಂಬರಿಗಳು; 'ರೇಷ್ಮೆ ಸೀರೆ', 'ಸಿಕ್ಕರೂ ಸಿಗಲಿಲ್ಲ', 'ಸುಳಿ' ಮೊದಲಾದ ಅನೇಕ ಕಥೆಗಳು ಸಮಾಜದಲ್ಲಿನ ಮೌಢ್ಯತೆ, ವರ್ಗ ಹಾಗೂ ಜಾತಿಪದ್ಧತಿಯ ಸಮಸ್ಯೆಗಳಿಂದಾಗುವ ಕೇಡನ್ನು ಧ್ವನಿಸುತ್ತವೆ.

"ಯಾವುದಾದರೂ ಪುಸ್ತಕವನ್ನು ಓದಿದಾಗ ಕೇವಲ ಮನೋರಂಜನೆ ಸಿಕ್ಕರೆ ಅದು ಸಾಹಿತಿಯ ಸೋಲು" (ಡಾ॥ ವಿಜಯಾ ದಬ್ಬೆ (ಸಂ.), ಲೇಖ-ಲೋಕ, ಕರ್ನಾಟಕ ಲೇಖಕಿಯರ ಸಂಘ (ರಿ.), ಬೆಂಗಳೂರು, ದ್ವಿತೀಯ ಮುದ್ರಣ, ೨೦೧೦, ಪು. ೩) ಎಂಬ ಅಭಿಪ್ರಾಯವುಳ್ಳ ಪಾರ್ವತಿಯವರ ಕೃತಿಗಳು ಕೇವಲ ಮನೋರಂಜನೆಯ ದೃಷ್ಟಿಯಿಂದ ಮಾತ್ರವೆ ರಚನೆಗೊಂಡಿಲ್ಲ. ಅಲ್ಲೊಂದು ಸಾಮಾಜಿಕ ಬದ್ಧತೆ ಇದೆ. ಮಹಿಳಾ ಜಾಗೃತಿಯಿದೆ. ಮಹಿಳೆಯನ್ನು ಕಡೆಗಣಿಸುವ ಪುರುಷ ಪ್ರಧಾನ ಸಮಾಜದ ವಿರುದ್ಧದ ಆಕ್ರೋಶವಿದೆ. ಸಾಮಾಜಿಕ ಅಸಮಾನತೆಯ ವಿರುದ್ಧದ ಪ್ರತಿಭಟನೆಯಿದೆ. ಯಾವುದನ್ನು ಕುರುಡಾಗಿ ನಂಬದ ವೈಚಾರಿಕ ನಿಲುವಿದೆ. ಒಟ್ಟಾರೆ, ತಮ್ಮ ಮೇಲಾಗುವ ಯಾವುದೇ ಅನ್ಯಾಯಗಳಿಗೆ ಪ್ರತಿಕ್ರಿಯಿಸುವ ಮಾದರಿಗಳಿವೆ.

ಪಾರ್ವತಿಯವರು ಸಾಹಿತ್ಯ ಪ್ರವೇಶಿಸಿದ್ದೇ ಹಿಂದಿ ಕಾದಂಬರಿಯೊಂದನ್ನು ಕನ್ನಡಕ್ಕೆ ಅನುವಾದಿಸುವ ಮೂಲಕ. ನಂತರ ಆಕಾಶವಾಣಿಯಲ್ಲಿ ದೊರೆತ ಭಾಷಾಂತರಕಾರ್ತಿ ನೌಕರಿಯಿಂದ ಹಿಂದಿ ಸಾಹಿತ್ಯದ ನಿಕಟ ಪರಿಚಯ ಕೂಡ ಇವರಿಗೆ ದೊರಕಿತು. ಹಾಗಾಗಿ ಜೈನೇಂದ್ರಕುಮಾರ್, ರಾಜೇಂದ್ರ ಯಾದವ್, ಮನ್ನೂ ಭಂಡಾರಿ, ಜ್ಯೋತಿರ್ಮಯಿ ರಾಯ್‌ರವರ ಕಥೆ, ಕಾದಂಬರಿ ಮತ್ತು ಜೀವನಚರಿತ್ರೆಗಳಂತಹ ಹಲವಾರು ಹಿಂದಿ ಕೃತಿಗಳು ಇವರಿಂದ ಕನ್ನಡಕ್ಕೆ ಭಾಷಾಂತರ ಗೊಂಡಿವೆ. ಅಲ್ಲದೆ ಬಾನುಲಿಗೆಂದೇ ಹಲವಾರು ನಾಟಕಗಳನ್ನು ಅನುವಾದಿಸಿ, ಪ್ರಸಾರಪಡಿಸಿದ್ದಾರೆ. ಜೊತೆಗೆ ಕಾರಂತರ 'ಮೂಕಜ್ಜಿಯ ಕನಸುಗಳು', 'ಸರಸಮ್ಮನ ಸಮಾಧಿ', ಭೈರಪ್ಪನವರ 'ನಾಯಿ ನೆರಳು' ಕೃತಿಗಳನ್ನು ಹಿಂದಿಗೆ ಅನುವಾದಿಸುವ ಮೂಲಕ ಕನ್ನಡ ಹಾಗೂ ಹಿಂದಿ ಸಾಹಿತ್ಯದ ಕೊಂಡಿಯಂತಿದ್ದಾರೆ ಇವರು.

ಪಾರ್ವತಿಯವರು ಒಬ್ಬ ಪ್ರಜ್ಞಾವಂತ ಲೇಖಕಿ ಅಷ್ಟೇ ಅಲ್ಲ, 'ಸಂಘಟನಾ ಶಕ್ತಿ' ಕೂಡ. ಮಹಿಳಾ ಹಾಗೂ ಕನ್ನಡ ಪರ ಹೋರಾಟ, ಚಳವಳಿ, ಸಂಘಟನೆ ಗಳಲ್ಲಿ ಅವರ ಪಾತ್ರ ಸಾಕಷ್ಟಿದೆ. ಮಹಿಳೆಯರ ಬರವಣಿಗೆ ಗಳಿಗೂ ಮನ್ನಣೆ ದೊರಕಲೆಂಬ ಉದ್ದೇಶದಿಂದ ಸ್ಥಾಪನೆಯಾದ 'ಕರ್ನಾಟಕ ಲೇಖಕಿಯರ ಸಂಘ' ಕ್ಕೊಂದು ಭದ್ರ ಬುನಾದಿಯನ್ನು ಹಾಕಿಕೊಟ್ಟ ಕೀರ್ತಿ ಸಹ ಇವರದು. ಹೀಗೆ ಸಾಹಿತ್ಯ - ಸಂಘಟನೆಗಳಲ್ಲಿ ನಿರಂತರವಾಗಿ ತಮ್ಮನ್ನು ತೊಡಗಿಸಿ ಕೊಂಡು ಅಪಾರವಾದ ಕಾಣಿಕೆಯನ್ನಿತ್ತ ಪಾರ್ವತಿ ಯವರಿಗೆ ಮಲ್ಲಿಕಾ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಗೊರೂರು ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ, ಅನುಪಮಾ ಪ್ರಶಸ್ತಿಯಂತಹ ಹಲವಾರು ಪ್ರಶಸ್ತಿಗಳು ಸಂದಿವೆ.

ವಿವಾಹಿತ ಮಹಿಳೆಗೆ ಗಂಡ, ಮನೆ, ಮಕ್ಕಳು, ಸಂಸಾರದ ಪೋಷಣೆ, ನಿರ್ವಹಣೆಗಳೆಂಬ ಅವಳದ್ದೇ ಆದ ಕೌಟುಂಬಿಕ ಜವಾಬ್ದಾರಿಗಳಿವೆ. ಈ ಜವಾಬ್ದಾರಿಗಳ ನಡುವೆ ಅದರಲ್ಲೂ ಉದ್ಯೋಗಸ್ಥ ಮಹಿಳೆಯಾಗಿ ಜೊತೆಗೆ ತನ್ನ ಆಸಕ್ತಿ ಕ್ಷೇತ್ರದಲ್ಲೂ ದಿಟ್ಟ ಹೆಜ್ಜೆ ಮೂಡಿಸಿ ಎಲ್ಲವನ್ನೂ ಸಂಭಾಳಿಸಿಕೊಂಡು ಹೋಗುವ 'ಮಹಿಳೆ' ನಿಜವಾಗಿಯೂ 'ಸಾಧಕಿ'ಯೆ. ಇಂತಹ ಅದೆಷ್ಟೋ ಮಹಿಳಾ ಸಾಧಕಿಯರನ್ನು ನಾವು ಕಂಡಿದ್ದೇವೆ. ಅಂತಹವರಲ್ಲಿ ಪಾರ್ವತಿಯವರೂ ಒಬ್ಬರು. ಕುಟುಂಬ ಹಾಗೂ ಉದ್ಯೋಗದ ಜವಾಬ್ದಾರಿಯ ನಡುವೆಯೂ ಸಾಹಿತ್ಯ, ಸಂಘಟನೆ, ಹೋರಾಟಗಳಲ್ಲಿ ಕ್ರಿಯಾಶೀಲರಾಗಿ ದುಡಿದ ಇವರ ಫಲ ಅಗಾಧವಾದದ್ದು. ಇಂತಹ ಅಪೂರ್ವ ವ್ಯಕ್ತಿತ್ವದ ಹಿರಿಯ ಚೇತನರಾದ ಪಾರ್ವತಿಯವರು ಇಂದು ನಮ್ಮೊಡನಿಲ್ಲ. ಆದರೂ ಅವರು ಕನ್ನಡ ಮಹಿಳಾ ಸಾಹಿತ್ಯಲೋಕಕ್ಕೆ, ಮಹಿಳಾಪರ ಹೋರಾಟಗಳಿಗೆ ಕೊಟ್ಟ ಕೊಡುಗೆ ಎಂದಿಗೂ ಶಾಶ್ವತ.


ದಿವ್ಯ ಎಸ್.
ಸಂಶೋಧಕರು, ಕನ್ನಡ ವಿಭಾಗ, ಮಹಾರಾಜ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು


## ಮಾತಾಡಿಬಿಡು ಈಗಲಾದರೂ

ಮೌನದ ಅಂಗಳದಲ್ಲಿ ಬಿಕ್ಕದಿರು ಮನ ತೆರದು ಮಾತಾಡಿಬಿಡು ಈಗಲಾದರೂ
ಎಲ್ಲದಕ್ಕೂ ನಶೀಬೆ ಎಂದ್ಹೇಳದಿರು ನಡೆದು ಬಿಡು ಈಗಲಾದರೂ

ಕಂಗಳಲ್ಲಿ ನೂರು ನೂರು ಕನಸುಗಳಿವೆ ಯಾಕೆ ಕೊಲ್ಲುತ್ತಿ ಸುಮ್ಮ ಸುಮ್ಮನೆ
ಅರಳುವ ಮೊಗ್ಗಿನಲ್ಲಿ ಜೀವವಿದೆ ಹೂವಾಗಿ ಪರಿಮಳ ಬೀರಲಿಬಿಡು ಈಗಲಾದರೂ

ನಿನ್ನೆ ಮೊನ್ನೆಯ ಗಲತ್‌ಗಳಿಗೆ ಯಾಕೆ ಮಾಫಿ ಎಂದ್ಹೇಳುವಿ ಕರುಣೆಯಿಂದ
ಒಳ ಮನೆಯ ಕದ ಮುಚ್ಚಿ ಅಳಬೇಡ ಕುಣಿದು ಕುಪ್ಪಳಿಸಿಬಿಡು ಈಗಲಾದರೂ

ದಿನ ದಿನವೂ ಅದೇ ಹಾಡು ಅದೇ ರಾಗ ಯಾಕೆ ಹೊಸತು ಮಹಾಕಾವ್ಯ ಬರೆ
ಭೂಮಿ ನಗುತ್ತಿದೆ ಮುಗಿಲ ಚುಕ್ಕಿ ಮಿಂಚುತ್ತಿದೆ ನಕ್ಕು ಬಿಡು ಈಗಲಾದರೂ

ಎದೆಯ ಒಳಗಿನ ನೋವಿಗೆ ಅಂಜಿ ಅಳುಕಿ ಯಾಕೆ ಸಾಯುತ್ತಿ
ಬಂದಿದ್ದು ಬರಲಿ ಬಿಡು ಲೋಕದ ಮಾತಿಗೇಕೆ ಭಯ ಹಕ್ಕಿಯಂತೆ ಹಾರಿ ಬಿಡು ಈಗಲಾದರೂ


ಡಾ॥ ಜಯದೇವಿ ಗಾಯಕವಾಡ
ನಂ. ೫೮/೭೩, ಹೌಸಿಂಗ್ ಸೊಸೈಟಿ, ಕಲ್ಲೂರ ರಸ್ತೆ ಕಾಲೋನಿ
ಹುಮನಾಬಾದ- ೫೮೫ ೩೩೦, ಬೀದರ ಜಿಲ್ಲೆ

ತಿಂಗಳ ಕಥೆ

ಮೂಲ : **ಟಾಲ್‌ಸ್ಟಾಯ್**   ಕನ್ನಡಕ್ಕೆ : **ಪ್ರೊ॥ ಬಿ. ಕೆ. ಹನುಮಂತಯ್ಯ**

**“ನನ್ನ** ಮಗಳಾಗಿ ಅವಳು ಉಳಿದಿಲ್ಲ. ಅವಳು ಇಲ್ಲವೇ ಇಲ್ಲ. ಆದರೂ ಅವಳನ್ನು ಅಪರಿಚಿತರ ದಯಾದೃಷ್ಟಿಗೆ ಬಿಡಲಾರೆ. ಅವಳಿಗೆ ಇಷ್ಟ ಬಂದ ರೀತಿ ಇರಲು ತಕ್ಕ ಏರ್ಪಾಟು ಮಾಡುತ್ತೇನೆ. ಆದರೆ ಅವಳ ಬಗ್ಗೆ ಏನೂ ತಿಳಿಯಲು ಇಚ್ಛಿಸುವುದಿಲ್ಲ. ಅವಳು ಹೀಗಾಗುವಳೆಂದು ಯಾರು ನಂಬಿಯಾರು... ಈ ಆಘಾತ, ....ಆಘಾತ.” ಆತ ತನ್ನ ಭುಜವನ್ನು ಕೊಡವಿದ, ತಲೆಯನ್ನೂ ಕೊಡವಿದ, ಕಣ್ಣನ್ನು ಎತ್ತಿದ – ಮೇಲಿನ ಮಾತನ್ನು ಪ್ರಿನ್ಸ್ ಮೈಖೇಲ್ ಐವಾನೋವಿಚ್ ಮಧ್ಯ ರಷ್ಯಾ ಒಂದು ಪ್ರಾಂತ್ಯದ ತನ್ನ ತಮ್ಮ ಪೀಟರ್‌ಗೆ ಹೇಳಿದ. ಪ್ರಿನ್ಸ್ ಪೀಟರ್ ಐವತ್ತು ವರ್ಷ. ಮೈಖೇಲ್‌ಗಿಂತ ಹತ್ತು ವರ್ಷ ಕಿರಿಯವ.

ತನ್ನ ಮಗಳು ವರ್ಷದ ಹಿಂದೆ ಮನೆತೊರೆದವಳು ತನ್ನ ಮಗುವಿನೊಂದಿಗೆ ಒಂದು ಚಿಕ್ಕನಗರದಲ್ಲಿ ಇರುವುದನ್ನು ತಿಳಿದು ತಾನು ಪೀಟರ್ಸ್‌ಬರ್ಗ್‌ನಿಂದ ಆ ನಗರಕ್ಕೆ ಬಂದಿದ್ದ. ಅಲ್ಲಿ ಆತ ಮೇಲಿನಂತೆ ತಮ್ಮನ ಬಳಿ ಹೇಳಿದ. ಪ್ರಿನ್ಸ್ ಮೈಖೇಲ್ ಎತ್ತರವಾದ, ಬಿಳಿ ಕೂದಲಿನ ಸ್ಫುರದ್ರೂಪಿ. ತನ್ನ ಸಂಸಾರದಲ್ಲಿ ಯಾವಾಗಲೂ ತನ್ನ ಜೊತೆಯಲ್ಲಿ ಎಲ್ಲ ವಿಷಯಗಳಿಗೂ ಜಗಳ ತೆಗೆಯುತ್ತಿದ್ದ ಕೀಳುಮಟ್ಟದ ಹೆಂಡತಿ, ದುಂದುವೆಚ್ಚ ಮಾಡುತ್ತಿದ್ದ ನಿಷ್ಪ್ರಯೋಜಕ ಮಗ ಹಾಗೂ ಇಬ್ಬರು ಹೆಣ್ಣುಮಕ್ಕಳಲ್ಲಿ ಹಿರಿಯಳು ಒಳ್ಳೆ ಸಂಬಂಧದಲ್ಲಿ ಮದುವೆಯಾಗಿ ಪೀಟರ್ಸ್ ಬರ್ಗ್‌ನಲ್ಲಿ ನೆಲಸಿದ್ದಳು. ಚಿಕ್ಕವಳು ಲೀಸ ತಂದೆಯ ಆಪ್ತಳು ಮತ್ತು ಆಶಾಕಿರಣವಾಗಿದ್ದಳು. ಇವಳು ವರ್ಷದ ಕೆಳಗೆ ಮನೆಬಿಟ್ಟು ಹೋದವಳು. ಕೆಲವು ದಿನಗಳ ನಂತರ ಆಕೆ ತನ್ನ ಮಗುವಿನೊಂದಿಗೆ ಈ ಚಿಕ್ಕನಗರದಲ್ಲಿ ಇರುವುದನ್ನು ಕಂಡುಕೊಂಡರು.

ಪ್ರಿನ್ಸ್ ಪೀಟರ್ ಅಣ್ಣನನ್ನು ಲೀಸ ಯಾವ ಸಂದರ್ಭದಲ್ಲಿ ಮನೆ ತೊರೆದು ಹೋದಳು ಮತ್ತು ಅವಳ ಮಗುವಿನ ತಂದೆ ಯಾರು ಎಂದು ಕೇಳಲು ಇಚ್ಛಿಸಿದ. ಆದರೆ ಅದನ್ನು ಕೇಳಲು ಮನಸ್ಸು ಮಾಡಲು ಸಾಧ್ಯವಾಗಲಿಲ್ಲ. ಆ ದಿನವೇ ಬೆಳಗ್ಗೆ ತನ್ನ ಹೆಂಡತಿ ಭಾವನನ್ನು ಸಮಾಧಾನಪಡಿಸಲು ಪ್ರಯತ್ನಿಸಿದಾಗ ಅಣ್ಣನ ಮುಖದಲ್ಲಿ ನೋವಿನ ಛಾಯೆಯನ್ನು ಕಂಡಿದ್ದ.

ಸಾಯಂಕಾಲ ತಮ್ಮ ಕಾರ್ಡ್ಸ್ ಆಟಕ್ಕೆ ಏರ್ಪಡಿಸಿದ್ದ. ಅದಾದ ನಂತರ ಅಣ್ಣ ತನಗಾಗಿ ಸಜ್ಜಾಗಿದ್ದ ರೂಮಿಗೆ ಹೋಗಿ ತನ್ನ ಕೃತಕ ಹಲ್ಲನ್ನು ತೆಗೆಯುವಷ್ಟರಲ್ಲಿ ಯಾರೊ ಎರಡು ಬೆರಳುಗಳಲ್ಲಿ ಬಾಗಿಲು ತಟ್ಟಿದಂತಾಯ್ತು. ಯಾರು? ಎಂದರು. “ನಾನು ಮೈಖೇಲ್” ಎಂದು ಉತ್ತರ ಬಂತು. ತನ್ನ ನಾದಿನಿಯ ಶಬ್ದವನ್ನು ಗುರುತಿಸಿದ. ಕಿರಿಕಿರಿಗೊಂಡ, ಡೆಂಚರ್ ಹಾಕಿಕೊಂಡು ಈಕೆಗೆ ಏನು ಬೇಕೋ ಎಂದುಕೊಂಡು, ಗಟ್ಟಿಯಾಗಿ “ಒಳಗೆ ಬನ್ನಿ” ಎಂದ.

# ನನ್ನ ಕನಸು




**ಪೀಟರ್ಸ್‌ಬರ್ಗ್‌ಗೆ ಬಂದು ಜೀವನವನ್ನು ಮುಂದುವರಿಸಿದಳು. ಕಾಯಿಲೆಬಿದ್ದಳು. ವೈದ್ಯರ ಸಹಾಯ ದುರ್ಲಭವಾಯ್ತು. ಜೀವತೆಗೆದುಕೊಳ್ಳಲು ನಿರ್ಧರಿಸಿದಳು. ಹೇಗೆ ಎಂದು ಯೋಚಿಸಿದಳು. ತನ್ನ ಸಾವು ಸ್ವಾಭಾವಿಕವಾದದ್ದು ಎಂದು ತಿಳಿಯುವಂತೆ ಆಗಲು ಯೋಚಿಸಿದಳು. ಒಂದು ಔಷಧದ ಅಂಗಡಿಯಿಂದ ವಿಷವನ್ನು ಕೊಂಡು ತಂದಳು. ಒಂದು ಲೋಟಕ್ಕೆ ಸುರಿದು – ಇನ್ನೇನು ಅದನ್ನು ಸೇವಿಸಬೇಕು ಅನ್ನುವಷ್ಟರಲ್ಲಿ ಅಕ್ಕನ ಐದು ವರ್ಷದ ಮಗು ಗಕ್ಕನೆ ಬಂದು ಒಂದು ಆಟದ ಬೊಂಬೆಯನ್ನು ತನ್ನ ಕೈಗಿತ್ತು ನೋಡಲು ಹೇಳಿದ. ಮಗುವನ್ನು ಮುದ್ದಿಸಿ ಕಣ್ಣೀರು ಸುರಿಸಿ ನಿಟ್ಟುಸಿರುಬಿಟ್ಟಳು.**

ತನ್ನ ನಾದಿನಿ ತುಂಬ ಮೃದು ಸ್ವಭಾವದ, ತನ್ನ ಗಂಡನ ಎಲ್ಲ ಸೂಚನೆಗಳನ್ನೂ ವಿಧೇಯತೆಯಿಂದ ಪಾಲಿಸುತ್ತಿದ್ದ ಹೆಣ್ಣುಮಗಳು. ಕೆಲವರಿಗೆ ಆಕೆ ಒಂದು ರೀತಿಯ 'ಸಿ ಬೈಟು' ಎಂದು ಅನಿಸುತ್ತಿತ್ತು. ಕೆಲವರು ತುಂಬ ದಡ್ಡಿ ಎಂದು ಕರೆಯಲು ಹಿಂಜರಿಯುತ್ತಿರಲಿಲ್ಲ. ನೋಡಲು ಅಂದವಾಗಿದ್ದರೂ ತನ್ನ ಉಡುಪನ್ನು ಬೇಕಾಬಿಟ್ಟಿಯಾಗಿ ಧರಿಸುತ್ತಿದ್ದಳು. ನೋಡಲು ಸರಿ ಕಾಣುತ್ತಿರಲಿಲ್ಲ. ಮರೆಯುವ ಗುಣ. ಆದರೆ ಆಕೆಯು ಅಪರೂಪದ ಮತ್ತು ಸಿರಿವಂತರಿಗೆ ಮತ್ತು ಗೌರವಾನ್ವಿತ ಸ್ಥಾನದಲ್ಲಿರುವವರಿಗೆ ತಕ್ಕುದಲ್ಲದ ಅಭಿಪ್ರಾಯಗಳನ್ನು ಹೊಂದಿದ್ದಳು. ತನ್ನ ಈ ರೀತಿಯ ಅಭಿಪ್ರಾಯಗಳನ್ನು ಇದ್ದಕ್ಕಿದ್ದಂತೆಯೇ ಎಲ್ಲರೂ ಆಶ್ಚರ್ಯಚಕಿತರಾಗುವಂತೆ ವ್ಯಕ್ತಪಡಿಸುತ್ತಿದ್ದಳು. ತನ್ನ ಗಂಡನೂ ಹಾಗೂ ಆಕೆಯ ಸ್ನೇಹಿತರೂ ಇದನ್ನು ಅನುಭವಿಸಿದ್ದರು.

ಆಕೆಗೆ ಒಂದು ಕುರ್ಚಿ ತಂದು ಕುಳಿತುಕೊಳ್ಳಲು ಹೇಳಿದರು. ಕುಳಿತು, "ನಾನು ನಿಮಗೆ ಅನುಚಿತವಾದದ್ದೇನೂ ಹೇಳುವುದಿಲ್ಲ. ಲೀಸ ಬಗ್ಗೆ ಮಾತನಾಡಲು ಬಂದೆ" ಎಂದಳು. ಮೈಖೇಲ್ ನಿಟ್ಟುಸಿರುಬಿಟ್ಟು – ಆ ಶಬ್ದ ನೋವುಂಟುಮಾಡಿತು. ಆದರೂ ತನ್ನ ನೋವನ್ನು ನುಂಗಿ ಬೇಸರದ ನಗು ಸೂಚಿಸಿ, "ನಮ್ಮ ಸಂಭಾಷಣೆ ಒಂದು ವಿಷಯದ ಬಗ್ಗೆ ಮಾತ್ರ ಸಾಧ್ಯ. ಅದರ ಬಗ್ಗೆ ನೀವು ಚರ್ಚಿಸಲು ಇಷ್ಟಪಡುತ್ತೀರಿ" ಎಂದ. ಆಕೆಯ ಕಡೆ ನೋಡದೆ, "ಆ ವಿಷಯವನ್ನು ಪ್ರಸ್ತಾಪಿಸದೆ ಮಾತನಾಡಿ" ಎಂದ. ಆಕೆ ಆತನನ್ನು ಸೌಮ್ಯದಿಂದ ನೋಡುತ್ತ ದಯೆತೋರಲು ಕೋರುವಂತೆ ತನ್ನ ಮಾತನ್ನು ಮುಂದುವರಿಸಿದಳು. ಆತನಿಗಿಂತಲೂ ಹೆಚ್ಚು ನಿಟ್ಟುಸಿರು ಬಿಟ್ಟು, "ಮೈಖೇಲ್, ಅವಳ ಮೇಲೆ ಕನಿಕರ ಇರಲಿ. ಅವಳು ಇತರರಂತೆ ಮಾನವಳು" ಎಂದ.

# ಓ ಚಂದ್ರಮಾ ನೀನಿಂದು ಮೂಡಬೇಡ!

ಕಾವ್ಯಲೋಕ

ಓ ಚಂದ್ರಮಾ
ನಿನ್ನ ದರ್ಶನ ಭಾಗ್ಯದಿಂದಲೇ
ನಾಳೆ ರಂಜಾನ್ ಹಬ್ಬ ಆಚರಿಸಲು
ಕಾದು ಕುಳಿತ ಕೋಟಿಕೋಟಿ ಕಣ್ಣುಗಳ ನಡುವೆ
ನನ್ನ ಮಕ್ಕಳ ಎಳೆಯ ಕಣ್ಣುಗಳೂ
ಕೋಟಿ ಕನಸುಗಳ ಹೊತ್ತು ಕಾದಿವೆ

ಯಾರಿಂದಲೋ ಬೇಡಿತಂದ ಮೆಹಂದಿ
ಪುಟ್ಟ ಕೈಗಳ ತುಂಬ ಚಿತ್ತಾರ ಬಿಡಿಸಿಕೊಳ್ಳಲು ಹಾತೊರೆಯುತ್ತಿದೆ
ಹಬ್ಬದಡುಗೆ ಬಟ್ಟೆಬರೆ ಏನೇನೋ
ಕನಸು ಹೊತ್ತ ಮನಸುಗಳಿವೆ ಮನೆತುಂಬ
ಬರಿಗೈಯಲ್ಲಿ ಮನೆಗೆ ಹೋದರೆ
ಎಲ್ಲರೂ ನನ್ನನ್ನೇ ದಿಟ್ಟಿಸಿ ನೋಡುತ್ತಾರೆ
ಅವರಿಗೆ ಏನು ಉತ್ತರಕೊಡಲಿ?
ಓ ಚಂದ್ರಮಾ ನೀನಿಂದು ಮೂಡಬೇಡ!

ಪ್ರೀತಿ ದ್ವೇಷವಾಗಿ ಪಲ್ಲಟಗೊಂಡ
ನನ್ನವಳ ಸಿಡುಕು ನುಡಿ ಕಿಡಿಗಳು
ಎದೆಯಲ್ಲಿ ಜ್ವಾಲಾಮುಖಿ ಎಬ್ಬಿಸುತ್ತವೆ
ಸುಖವಾಗಿ ಬೆಳೆದವಳ ಉರಿಕಂಗಳಿಂದ
ನೀರು ಉಕ್ಕಿದಾಗಲೆಲ್ಲ ಎದೆ ಹಿಂಡಿದಂತಾಗುತ್ತದೆ

ಯಾರೋ ಕೊಟ್ಟ ಒಂದು ಹಳೆಯ ಸೀರೆ
ಮನೆಗೆ ತೆಗೆದುಕೊಂಡು ಹೋಗುವುದಾದರು ಹೇಗೆ?
ಅಮ್ಮನಿಗೋ? ಹೆಂಡತಿಗೋ?
ಯಾರಕಣ್ಣು ಮೊದಲು ಬೀಳುವುದೋ!
ಹೆಣ್ಣುಜೀವ ಹಬ್ಬದ ಸಂಭ್ರಮಕ್ಕೆ ಕಾತರಿಸುತ್ತಿದೆ
ಓ ಚಂದ್ರಮಾ ನೀನಿಂದು ಮೂಡಬೇಡ!

ಅಕ್ಕಪಕ್ಕದ ಮನೆಯಿಂದ ಬಿರಿಯಾನಿಯ ಘಮಲು
ಮೂಗಿಗೆ ಬಂದು ಬಡಿಯುತ್ತಿದ್ದರೆ ಜೊಲ್ಲು ಸೂಸುವ
ಬಣ್ಣ ಬಣ್ಣದ ಉಡುಗೆ ತೊಡುಗೆ ತೊಟ್ಟ
ಮಕ್ಕಳನ್ನು ಕಂಡು ಕಣ್ಣೀರಿಡುವ
ಕರುಳ ಕುಡಿಗಳೆದುರು ಮನಸ್ಸು ಮುರಿದು ಬೀಳುತ್ತದೆ
ಓ ಚಂದ್ರಮಾ ನೀನಿಂದು ಮೂಡಬೇಡ!

"ಎಲ್ಲರಿಗೂ ಒಂದು ತಿಂಗಳು ಮಾತ್ರ ರಂಜಾನ್ ಉಪವಾಸ
ನಮಗೇಕೆ ವರ್ಷವಿಡೀ ಉಪವಾಸ
ದಿನವೂ ನಮಗೆ ಹಬ್ಬನಾ?..."
ಮಗಳ ಪ್ರಶ್ನೆಗೆ ಉತ್ತರಿಸಲಾಗದೆ ತತ್ತರಿಸಿಹೋದೆ

ಎಂದೂ ಏನನ್ನೂ ಕೇಳದ ಅಮ್ಮ
ಇಂದು ಹಬ್ಬಕ್ಕೆ ಶ್ಯಾವಿಗೆ ಪಾಯಸ ಕೇಳಿದ್ದಾಳೆ
ನನ್ನವಳಿಗೆ ಕೆಂಪು ಬಣ್ಣದ ಗಾಜಿನಬಳೆ ಬೇಕಂತೆ
ಪಕ್ಕದ ಮನೆಯ ಹುಡುಗಿ ತೊಟ್ಟಿರುವ
'ಘಲ್‌ಘಲ್' ಶಬ್ದ ಮಾಡುವ
ಕಾಲಿನಗೆಜ್ಜೆ ಬೇಕಂತೆ ಮಗಳಿಗೆ
ನೆಟ್ಟಗೆ ನಡೆಯಲು ಬಾರದಿದ್ದರೂ
ಮಗನ ಆ ಪುಟ್ಟ ಕೋಮಲ ಕಾಲುಗಳಿಗೆ ಷೂಗಳು ಬೇಕಂತೆ
ಬೇಡಿಕೆಯ ಪಟ್ಟಿ ಪಠಿಸುತ್ತ ಕೂತಿದ್ದೇನೆ
ನನ್ನ ಬೇಡಿಕೆ ಯಾರ ಬಳಿ ಕೇಳಲಿ?
ಓ ಚಂದ್ರಮಾ ನೀನಿಂದು ಮೂಡಬೇಡ!

ಹಬ್ಬದ ಸಂಭ್ರಮದ ಆಸೆ ಹೊತ್ತ ಕಣ್ಣುಗಳು
ದಾರಿಕಾದು ಕುಳಿತಿವೆ
ದೇವರು ಧರ್ಮ ಹಬ್ಬ ಆಚರಣೆ
ಏನೂ ಅರ್ಥವಾಗದ ಇವರಿಗೆ
ನಾನು ಹೇಗೆ ಅರ್ಥವಾಗುತ್ತೇನೆ
ಓ ಚಂದ್ರಮಾ ನೀನಿಂದು ಮೂಡಲೇಬೇಡ
ನನ್ನ ಪಾಲಿಗೆ ನೀನಿಂದು ದಯಾಮಯನಾಗು
ಮತ್ತೆ ನಾಳೆ? ನಾಳೆಯದು ನಾಳೆಗೆ!
ಇವತ್ತಿನ ಹೊತ್ತು ಕಳೆದರೆ ಸಾಕು ನನಗೆ.

**ಕಾ. ಹು. ಚಾನ್‌ಪಾಷ**
ನಂ. ೧೫, ಭಾರತ್ ಪಾಲಿಟೆಕ್ನಿಕ್ ಎದುರು, ಕೆ.ಜಿ.ಎಫ್. ಮುಖ್ಯರಸ್ತೆ, ಬಂಗಾರಪೇಟೆ, ಕೋಲಾರಜಿಲ್ಲೆ – ೫೬೩ ೧೬೨

ಆತ ನೋವು ತುಂಬಿದ ನಗುವಿನೊಂದಿಗೆ, "ಅದನ್ನು ನಾನು ಅನುಮಾನಿಸಲಿಲ್ಲ" ಎಂದ. ಆಕೆ "ಅವಳು ನಿನ್ನ ಮಗಳು" "ಆಗಿದ್ದಳು, ಅವಳ ಬಗ್ಗೆ ಈಗ ಮಾತೇಕೆ? ಎಂದ. ಪ್ರಿಯ ಮೈಖೇಲ್, ನೀವು ಅವಳನ್ನು ನೋಡುವುದಿಲ್ಲವೇ? ನಾನು ಒಂದು ಮಾತನ್ನು ಹೇಳಲು ಬಯಸುತ್ತೇನೆ. ಯಾರನ್ನು ದೂಷಿಸಬೇಕೆಂದರೆ..." ಪ್ರಿನ್ಸ್ ಮೈಖೇಲ್ ಮುಖ ಕೆಂಪು ಮಾಡಿಕೊಂಡು ಅಸಭ್ಯತೆ ಕಾಣಿಸಿತು. "ದಯಮಾಡಿ ಮಾತು ನಿಲ್ಲಿಸೋಣ. ನಾನು ಸಾಕಷ್ಟು ನೋವುಂಡಿದ್ದೇನೆ, ನಾನು ಬಂದಿದ್ದೇನೆ. ಏನೆಂದರೆ ಅವಳು ಇನ್ನೊಬ್ಬರ ಹಂಗಿನಲ್ಲಿ ಇರದಂತೆ ಸ್ವತಂತ್ರವಾಗಿ ಇರುವಂತೆ ಏರ್ಪಾಟು ಮಾಡುವುದು. ಅವಳು ಇನ್ನು ಮೇಲೆ ನನ್ನ ಸಂಪರ್ಕ ಮಾಡದೆ ಇರಲಿ. ತನಗೆ ಇಷ್ಟ ಬಂದ ರೀತಿಯಲ್ಲಿ ಜೀವನ ಸಾಗಿಸಲಿ. ನಾನು ಮತ್ತು ನನ್ನ ಬಳಗ ಅವಳ ಬಗ್ಗೆ ಏನೂ ತಿಳಿಯುವುದು ಬೇಡ. ಅಷ್ಟು ಮಾತ್ರ ನಾನು ಮಾಡಬಲ್ಲೆ" ಎಂದ. ಆಕೆ, "ಮೈಖೇಲ್, ನೀವು ಏನೂ ಹೇಳುತ್ತಿಲ್ಲ. ಆದರೆ ನಾನು, ಅವಳೂ ಸಹ..." ಅದಕ್ಕೆ ಆತ "ಅನುಮಾನವಿಲ್ಲ ನಾದಿನಿ, ದಯಮಾಡಿ ಆ ವಿಷಯದ ಚರ್ಚೆ ನಿಲ್ಲಿಸಿ. ನಾನು ಸಾಕಷ್ಟು ನೋವು ಅನುಭವಿಸಿದ್ದೇನೆ" ಎಂದ.



ಅಲೆಕ್ಸಾಂಡ್ರ ಎರಡು ನಿಮಿಷ ಮಾತು ನಿಲ್ಲಿಸಿ, "ನಿಮ್ಮ ಪತ್ನಿ, ಮಾಷ, ನಿಮ್ಮಂತೆಯೇ ಯೋಚಿಸುತ್ತಾಳೆಯೇ?" ಎಂದಳು. "ನಿಜಕ್ಕೂ ಅಹುದು" ಎಂದ ಮೈಖೇಲ್. ಆಕೆ ಬಾಯಿಂದ ಅರ್ಥ ರಹಿತ ಶಬ್ದ ಹೊರಟಿತ್ತು. ನೀನು ಇನ್ನು ಹೋಗಬಹುದು ಎಂದ ಪ್ರಿನ್ಸ್ ಮೈಖೇಲ್. ಆಕೆ ಕದಲಲಿಲ್ಲ, ಒಂದು ನಿಮಿಷ ತಡೆದು, "ನೀವು ಮಗಳಿಗಾಗಿ ಹಣ ನೀಡಲು ಆಕೆಯನ್ನು ನೋಡಿಕೊಳ್ಳುವ ಹೆಂಗಸಿನ ಮನೆಗೆ ಹೋಗುವಿರೆಂದು ನಿಮ್ಮ ತಮ್ಮ ಹೇಳಿದರು. ಆಕೆಯ ಮನೆಯ ವಿಳಾಸ ತಿಳಿದಿದೆಯೇ?" ಎಂದಳು ಆಕೆ. ಮೈಖೇಲ್ ತುಂಬ ಕೋಪಗೊಂಡು, "ಗೊತ್ತಿದೆ, ಏಕೆ ನನ್ನನ್ನು ನೋಡುತ್ತಿರುವಿರಿ. ಇದು ಅತಿಥಿ ಸತ್ಕಾರಕ್ಕೆ ಮಾಡುವ ಅಪಚಾರ" ಎಂದ. ಅಲೆಕ್ಸಾಂಡ್ರ ಕಣ್ಣೀರು ಹಾಕುತ್ತಾ, "ಆ ಹುಡುಗಿ ತುಂಬ ಸಂಕಷ್ಟದಲ್ಲಿದ್ದಾಳೆ, ಅಂತಹ ಒಳ್ಳೆಯವಳು. ನೀವು ಹಣವನ್ನು ಆ ಹೆಂಗಸಿನ ಕೈಗೆ ಕೊಡಬೇಡಿ. ನೀವೇ ಹೋಗಿ ಮಗಳನ್ನು ನೋಡಿ. ಮಗಳು ಎಂತಹ ಪರಿಸ್ಥಿತಿಯಲ್ಲಿದ್ದಾಳೆ ಎನ್ನುವುದನ್ನು ಕಣ್ಣಾರೆ ನೋಡಿ ಬೇಡವೆಂದರೆ ಬೇಡ, ಅವನಿಲ್ಲ ಅವಳೊಬ್ಬಳೆ ಇರುವುದು" ಎಂದಳು. ಮೈಖೇಲ್ ಎದ್ದು ನಿಂತು ನಾದಿನಿ ಮಾತು ಮುಗಿಸಲು ಕಾದ. ಆಕೆ ಹೊರಡಲು ತಯಾರಾಗಿ ತನ್ನ ಕೈ ಕುಲಕಲು ಚಾಚಿ ಹೊರಡುವ ಮುನ್ನ ಕೊನೆಯದಾಗಿ, "ಮೈಖೇಲ್, ನೀವು ತಪ್ಪು ಮಾಡುತ್ತಿದ್ದೀರಿ" ಎಂದು ಹೇಳಿ ಹೊರನಡೆದಳು. ಆಕೆ ಹೋದ ನಂತರ ಸುಮಾರು ಹೊತ್ತು ರೂಮಿನಲ್ಲಿ ಹಾಸಿದ ಕಾರ್ಪೆಟ್ ಮೇಲೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಶತಪಥ ಹೆಜ್ಜೆ ಹಾಕಿದ. ಸಿಡುಕಿನಿಂದ ನಡುಗಿದ. ಹೋ! ಹೋ! ಎಂದು ಬೊಬ್ಬೆ ಇಟ್ಟ. ಆ ಕೂಗಿಗೆ ತಾನು ಹೆದರಿದ. ಸುಮ್ಮನಾದ. ತನ್ನ ಘನತೆಗೆ ಆದ ಅವಮಾನವನ್ನು ಸಹಿಸಲಾರದೆ ಬಾಧೆಪಟ್ಟ. ತನ್ನ ಮಗಳು ತನ್ನ ತಾಯಿಯ ಮನೆಯಲ್ಲಿ, ಹೆಸರಾಂತ ಅವದೋಷಿಯ ಬೋರಿಸೌವ್ನ, ಇವರ ಮನೆಗೆ ಮಹಾರಾಣಿಯೂ ಸಹ ಬಂದು ಹೋಗುವ ಪರಿಪಾಟ ಇದ್ದ ಮನೆತನದಲ್ಲಿ ಬೆಳೆದ ತನ್ನ ಮಗಳು – ತಾನು ಯಾರಿಗೂ ಹೆದರದ, ತಲೆತಗ್ಗಿಸದ ಹಳೆಯ ಪೀಳಿಗೆಯ ಸಿಪಾಯಿಯಾಗಿ ಜೀವನ ನಡೆಸಿದ ಗೌರವಾನ್ವಿತನಾದ ಸ್ವಪ್ರತಿಷ್ಠೆಯ ವ್ಯಕ್ತಿಯಾಗಿದ್ದುಕೊಂಡು, ಒಬ್ಬ ಫ್ರೆಂಚ್ ಮಹಿಳೆಯಿಂದ ಒಬ್ಬ ಮಗನನ್ನು ಹೊಂದಿದ್ದು, ಅವನನ್ನು ಪರದೇಶದಲ್ಲಿ ಇರಲು ಏರ್ಪಡಿಸಿದ್ದವನು. ತನ್ನ ಸ್ವಪ್ರತಿಷ್ಠೆಗೆ ಕುಂದು ಬರದಂತೆ ಜೀವನ ನಡೆಸುತ್ತಿರುವವನಾಗಿದ್ದವನ ಮಗಳು, ಎಲ್ಲ ಅಪೇಕ್ಷೆಗಳನ್ನು ಪೂರೈಸಿ, ಒಳ್ಳೆಯ ಶಿಕ್ಷಣ ಕೊಡಿಸಿ – ರಷ್ಯದ ಪ್ರತಿಷ್ಠಿತ ಮನೆತನದ ಸಂಬಂಧ ಕುದುರಿಸಲು – ಯೋಗ್ಯಳನ್ನಾಗಿ ಮಾಡಿದ್ದರೂ, ತಂದೆಮಗಳಿಗೆ ಏನೆಲ್ಲ ಕೊಡಲು ಸಾಧ್ಯವೊ ಅವೆಲ್ಲವನ್ನೂ ಕೊಟ್ಟು, ಎಲ್ಲಕ್ಕಿಂತ ಮಿಗಿಲಾಗಿ ಅಪಾರ ಪ್ರೀತಿಯಿಂದ ಬೆಳೆಸಿದ ಮಗಳು, ತಾನು ಮೆಚ್ಚಿದ್ದ ಹಾಗೂ ಕಣ್ಮಣಿ ಎಂದು ಪರಿಗಣಿಸಿದ್ದ ಮಗಳು ತಂದೆಗೆ ಕೊಟ್ಟ ಕೊಡುಗೆ ತನಗೆ ಅವಮಾನ ತರುವಂತಹ ಕೃತ್ಯವೆಸಗಿ ಜನರ ಕಣ್ಣಲ್ಲಿ ತಾನು ತಲೆ ಎತ್ತದಂತೆ ಮಾಡಿದರೆ ಸಹಿಸಲು ಸಾಧ್ಯವೆ !

ಅವಳ ಬೆಳವಣಿಗೆಯ ಆರಂಭದಿಂದಲೂ, ಚಿಕ್ಕ ಹುಡುಗಿಯಾಗಿ ತನ್ನ ಕಣ್ಮಣಿಯಾಗಿದ್ದುದು ಜ್ಞಾಪಕಕ್ಕೆ ಬಂದು, ತನ್ನ ಆನಂದದ ಕೇಂದ್ರ ಬಿಂದುವಾಗಿದ್ದ ಮುದ್ದು ಮಗಳು – ಏಳೆಂಟು ವರ್ಷದ ಪೋರಿ ತನ್ನ ಕಣ್ಮುಂದೆ ಸುಳಿದಂತಾಗಿ, ಅವಳ ಬುದ್ಧಿಮತ್ತೆ, ಜಾಣ್ಮೆ ಹೊಳೆಯುತ್ತಿದ್ದ ಕಪ್ಪುಕಣ್ಣು, ನೀಳವಾಗಿ ಬೆಳೆದ ಗುಂಗುರು ಕೂದಲು ನೋಡುವವರನ್ನು ಮಂತ್ರ ಮುಗ್ಧರನಾಗಿಸುತ್ತಿದ್ದುದು ಕಣ್ಮುಂದೆ ಸುಳಿಯಿತು. ಅವಳು ತನ್ನ ಮೊಳಕಾಲಿನ ಮೇಲೆ ನೆಗೆದು ಕುಳಿತು ತನ್ನನ್ನು ತಬ್ಬುತ್ತಿದ್ದುದು, ಕತ್ತನ್ನು ಬಳಸಿ ಕಚಗುಳಿ ಇಡುತ್ತಿದ್ದುದು, ಅವಳ ಉತ್ಸಾಹ ತುಂಬಿದ ನಗು, ತನ್ನ ತುಟಿಗಳಿಗೆ ಮುತ್ತಿಡುತ್ತಿದ್ದ ರೀತಿ – ಎಲ್ಲವೂ ಕಣ್ಮುಂದೆ ಬಂದುಹೋದವು. ಆ ದಿನಗಳನ್ನು ನೆನೆದರೆ – ಬೆಳೆದ ಈ ಮಗಳ ಸ್ಥಿತಿಯನ್ನು ನೋಡಲು ಅಸಹ್ಯವೆನಿಸಿತು.

ಮಗಳು ಬೆಳೆದು ಮೈತುಂಬಿಕೊಂಡು ಪ್ರಬುದ್ಧ ಮಹಿಳೆ ಆಗಿದ್ದು ತಂದೆಯ ಮನಸ್ಸಿಗೆ ಮರುಕಳಿಸಿತು. ಮಗಳ ಈ ಬೆಳವಣಿಗೆ ಆತನಿಗೆ ಆತಂಕವನ್ನು ಉಂಟುಮಾಡಿತ್ತು. ಏಕೆಂದರೆ ಗಂಡಸರು ಆಕೆಯನ್ನು ಕುತೂಹಲದಿಂದ ನೋಡಲಾರಂಭಿಸಿದ್ದರು. ಆತನ ಮಗಳು ಬ್ಯಾಲೆಯಲ್ಲಿ ನರ್ತಿಸಲು ತಯಾರಾಗಿ ಮುಂದೆ ಬಂದಾಗ ತನ್ನ ಪ್ರೀತಿಯ ಮಗಳ ಮೇಲಿನ ವೈಯಕ್ತಿಕ ಪ್ರೀತಿಯನ್ನು ಬೇರೆಯವರು ಅಪಹರಿಸಿಯಾರು ಎನ್ನುವ ಭಾವನೆ ಪ್ರಬಲವಾಗಿತ್ತು. ಕಾರಣ ಮಗಳು ನೋಡಲು ಅಷ್ಟು ಸುಂದರಿಯಾಗಿದ್ದಳು. ತರುಣರು ಮಗಳನ್ನು ನೋಟದಿಂದಲೇ ಅಪಹರಿಸುವರೋ ಎನ್ನುವಂತೆ ತಂದೆಯ ಆತಂಕವನ್ನು ಹೆಚ್ಚಿಸಿತು. ಹೆಣ್ಣು ಪರಿಶುದ್ಧವಾಗಿರಬೇಕೆನ್ನುವ ಹಳೆಯ ಕಾಲದ ಭಾವನೆ ಈತನಲ್ಲಿ ಸುಪ್ತವಾಗಿತ್ತು. ಅಲ್ಲದೆ, ಹೆಂಗಸು ಇದಕ್ಕೆ ವಿರುದ್ಧವಾಗಿದ್ದು ಅವಮಾನದ ಕಲ್ಪನೆಯೇ ಇಲ್ಲದೆ ವರ್ತಿಸುವುದು ತನ್ನ ಗಮನಕ್ಕೆ ಬಂದಿತ್ತು. ಇಂತಹ ಭಾವನೆ ಇರುವಾಗ ಮಗಳು ಒಳ್ಳೆಯ ಸಂಬಂಧಗಳು ಒದಗಿ ಬಂದಾಗ ಅವನ್ನು ತಳ್ಳಿ ಹಾಕಿದ್ದಳು. ಆಕೆ ಹೆಚ್ಚು ಹೆಚ್ಚು ತನಗೆ ತೃಪ್ತಿ ತರುವ ಹಾಗೂ ತನ್ನನ್ನು ಮೆಚ್ಚಿಕೊಳ್ಳುವ ಶ್ರೋತೃಗಳು ಸೇರುವ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಳು.

ಈ ರೀತಿ ಕೀರ್ತಿ ತರುವ ಕಾರ್ಯಕ್ರಮಗಳು ಬಹಳ ದಿನ ನಡೆಯಲಿಲ್ಲ. ಒಂದು ವರ್ಷ ಕಳೆಯಿತು. ಹಾಗೆ ಎರಡು ಮೂರು ವರ್ಷಗಳು ಉರುಳಿದವು. ಎಲ್ಲ ಕಡೆ ಆಕೆ ಗುರುತಿಸಲ್ಪಟ್ಟಳು, ಸೌಂದರ್ಯವತಿ ಎನಿಸಿಕೊಂಡಳು. ಆದರೆ ಯೌವನದ ಮೊದಲ ಮೆಟ್ಟಿಲು ಕಳೆಯಿತು, ಬಾಲ್ ರೂಮಿನ ಅವಿಭಾಜ್ಯ ಅಂಗವಾಗಿದ್ದಳು. ಆಕೆ ಮದುವೆಯ ಮಾತನ್ನು ಹಿಂದಿಕ್ಕಿ ನಿತ್ಯಸುಮಂಗಲಿಯಾಗಿ ಉಳಿಯುವ ಸಾಧ್ಯತೆ ಕಾಣಿಸಿತು. ಪ್ರಿನ್ಸ್ ಮೈಖೇಲ್ ಅವಳ ಮದುವೆ ಮಾಡಲು ಚಡಪಡಿಸಿದ. ಆದರೆ ಈಕೆ ತಿರಸ್ಕರಿಸಿದಂತೆ

ಸಂಬಂಧ ಕೂಡಿಬರಲಿಲ್ಲ. ಆದರೂ ಗೌರವಯುತ ಸಂಬಂಧ ಸಾಧ್ಯವಿತ್ತು.

ಆದರೆ ಮಗಳು ಒಣಜಂಬದಿಂದ, ಅಷ್ಟೇ ಗರ್ವದಿಂದ ಆ ಸಂಬಂಧಗಳನ್ನು ತಿರಸ್ಕರಿಸಿದಳು. ಇದನ್ನು ನೆನೆಸಿಕೊಂಡು ತಂದೆಗೆ ಅವಳ ಮೇಲೆ ತುಂಬ ಕೋಪ ಬಂತು. ಒಳ್ಳೆಯ ಸಂಬಂಧಗಳನ್ನು ಮಗಳು ತಳ್ಳಿಹಾಕಿದ್ದನ್ನು ನೆನೆದು, ಇಂಥ ಅವಮಾನಕರವಾದ ಅವಳ ಈಗಿನ ಪರಿಸ್ಥಿತಿಯನ್ನು ಗಮನಿಸಿ "ಅಯ್ಯೋ ಎಂತಹ ಅವಮಾನ" ಎಂದುಕೊಂಡು "ಹೋ ಹೋ" ಎಂದು ಕನಲತೊಡಗಿದ.

ಯೋಚನೆಯನ್ನು ನಿಲ್ಲಿಸಿ, ಒಂದು ಸಿಗರೇಟ್ ಹಚ್ಚಿ ಬೇರೆ ವಿಷಯಗಳ ಕಡೆ ಗಮನ ಹರಿಸಲು ಪ್ರಯತ್ನಿಸಿದ. ಅವಳ ಜೀವನಕ್ಕೆ ಬೇಕಾದಷ್ಟು ಹಣ ಕಳುಹಿಸಲು ನಿರ್ಧರಿಸಿ ಅವಳನ್ನು ಭೇಟಿಯಾಗುವುದನ್ನು ತಳ್ಳಿಹಾಕಿದ. ಆದರೆ ಹಿಂದಿನ ಅನುಭವಗಳು ಅವನ ಬೆನ್ನು ಹತ್ತಿದವು. ಬಹಳ ದಿನಗಳ ಹಿಂದಲ್ಲ. ಅವಳು ಆಗ ಇಪ್ಪತ್ತು ತುಂಬಿದವಳು. ತಾನು ಹದಿನಾಲ್ಕು ವರ್ಷದ ಹುಡುಗನೊಡನೆ ಚಕ್ಕಂದಕ್ಕೆ ಮೊದಲು ಮಾಡಿದ್ದಳು. ಆತ ಸೇವಾ ಕಂಪನಿಯ ಯೋಧನಾಗಿದ್ದ. ಇವಳು ಆ ಹುಡುಗನನ್ನು ಅರ್ಧ ಹುಚ್ಚು ಹಿಡಿಯುವಂತೆ ಮಾಡಿದ್ದಳು. ಇವಳ ಮೋಹದಲ್ಲಿ ಸಿಕ್ಕಿ ಕಣ್ಣೀರು ಹಾಕುತ್ತಿದ್ದ. ತಂದೆ ಇದನ್ನು ಕೊನೆಗಾಣಿಸಲು ಆ ಹುಡುಗನನ್ನು ಅಲ್ಲಿಂದ ದೂರ ಹೋಗುವಂತೆ ಮಾಡಿದ್ದಕ್ಕಾಗಿ ಮಗಳು ತಂದೆಯನ್ನು ಸ್ವೇಚ್ಛೆಯಾಗಿ ನಿಂದಿಸಿ ಅವಮಾನಿಸಿದ್ದಳು. ಅವಳು ತನ್ನನ್ನು ಅವಮಾನಕ್ಕೆ ಈಡು ಮಾಡಿದೆ ಎಂದು ದೂಷಿಸಿದ್ದಳು. ಅಂದಿನಿಂದ ತಂದೆ ಮಗಳು ವೈರಿಗಳಂತೆ ದೂರ ಸರಿದರು. ತಂದೆ ನಾನು ಮಾಡಿದ್ದು ಸರಿ ಎಂದುಕೊಂಡ. ಮಗಳು ನಾಚಿಕೆಯಿಲ್ಲದ ಹೆಂಗಸು ಎಂದುಕೊಂಡ.



ಇದಾದ ನಂತರ ತನಗೆ ಸಹಿಸಲಾಗದ ಮಗಳ ಪತ್ರ ಮಾಸ್ಕೊದಿಂದ ಬಂದು ಇಬ್ಬರ ಮಧ್ಯೆ ಬಂಧುತ್ವದ ಸಾವಿನ ಪೆಟ್ಟಿಗೆಗೆ ಕೊನೆಯ ಮೊಳೆಯನ್ನು ಬಡಿದಂತಾಯಿತು. ಪತ್ರದಲ್ಲಿ ಆಕೆ ಮನೆಗೆ ಹಿಂತಿರುಗಲಾರೆನೆಂದೂ, ತನ್ನ ಜೀವನ ಯಾತನಾಮಯವಾಗಿದೆ ಎಂದೂ, ತಾನು ಬೀದಿ ಪಾಲಾದ ಹೆಣ್ಣೆಂದೂ ಬರೆದು ತನ್ನನ್ನು ಮರೆಯಬೇಕೆಂದೂ ಕ್ಷಮಿಸಬೇಕೆಂದೂ ಅಂಗಲಾಚಿಕೊಂಡಿದ್ದಳು.

ಇದರ ಜೊತೆಗೆ ತನ್ನ ಹೆಂಡತಿಯೊಂದಿಗೆ ಆದ ಜಗಳದ ನೆನಪೂ ಬಂದು ನೋವುಂಟುಮಾಡಿತು. ಇಬ್ಬರ ಅನುಮಾನಗಳು ಮತ್ತು ತಮ್ಮ ಅನುಮಾನ ನಿಜವಾಗಿತ್ತು. ನಡೆಯಬಾರದ್ದು ನಡೆದುಹೋಗಿತ್ತು. ಇದು ಆಗಿದ್ದು ಮಗಳನ್ನು ಫಿನ್‌ಲೆಂಡಿಗೆ ಅವಳ ಚಿಕ್ಕಮ್ಮನ ಮನೆಗೆ ಕಳುಹಿಸಿದಾಗ ತಪ್ಪು ಎಸಗಿದವನು ಕೆಲಸಕ್ಕೆ ಬಾರದ ಸ್ವೀಡನ್ನಿನ ಒಬ್ಬ ನಿಷ್ಪ್ರಯೋಜಕ, ಮದುವೆ ಆಗಿದ್ದ ವಿದ್ಯಾರ್ಥಿ.

ಈ ಎಲ್ಲ ವಿವರಗಳು ತಮ್ಮ ಪೀಟರ್ ಮನೆಯ ತನ್ನ ರೂಮಿನಲ್ಲಿ ಶತಪಥ ತುಳಿಯುತ್ತಿರುವಾಗ ತನ್ನ ಮನಸ್ಸಿನಲ್ಲಿ ಮರುಕಳಿಸಿ ಮಗಳನ್ನು ಕುರಿತು ತನಗೆ ಆಗುತ್ತಿದ್ದ ಹೆಮ್ಮೆ ಪ್ರೀತಿಯ ಬಗ್ಗೆ ಮನಸ್ಸು ತಳಮಳಗೊಂಡಿತು. ಮಗಳು ಅಧೋಗತಿಗೆ ಜಾರಿದ್ದು ತನಗೆ ಅರ್ಥವಾಗದ ಸಮಸ್ಯೆಯಾಯಿತು. ಅವಳಿಂದ ತನಗೆ ಅಗುತ್ತಿರುವ ನೋವಿಗಾಗಿ ಅವಳನ್ನು ದ್ವೇಷಿಸತೊಡಗಿದ. ತನ್ನ ನಾದಿನಿಯ ಜೊತೆಯಲ್ಲಿ ನಡೆದ ಚರ್ಚೆ ಮರುಕಳಿಸಿ ಮಗಳನ್ನು ಹೇಗೆ ಕ್ಷಮಿಸಲಿ ಎಂದು ತೊಳಲಾಟದಲ್ಲಿ ಸಿಲುಕಿ, ಇದಕ್ಕೆ ಕಾರಣಕರ್ತನಾದ ಅವನನ್ನು ಜ್ಞಾಪಿಸಿಕೊಂಡ ಕೂಡಲೆ ಅವನ ಅಂಗಾಂಗಗಳು ಕಂಪಿಸಿತೊಡಗಿ, ಹೃದಯದಲ್ಲಿ ಅವನ ಬಗ್ಗೆ ಅಸಹಿಷ್ಣುತೆ ಭುಗಿಲೆದ್ದು ತನ್ನ ಪ್ರತಿಷ್ಠೆಗೆ ದೊಡ್ಡ ಹೊಡೆತ ಬಿದ್ದ ಅನುಭವವಾಯಿತು. ಅಯ್ಯೋ ಎಂದು ಪರಿತಪಿಸಿ ಬೇರೆ ಏನನ್ನಾದರೂ ಯೋಚಿಸಲು ಪ್ರಯತ್ನಿಸಿದ.

ಇಲ್ಲ, ಆಗೊಲ್ಲ, ಅವಳಿಗೆ ಬೇಕಾದ ಹಣವನ್ನು ತಮ್ಮನಾದ ಪೀಟರ್ ಕೈಗಿಟ್ಟು ಪ್ರತಿತಿಂಗಳೂ ಅವಳಿಗೆ ಬೇಕಾಗುವಷ್ಟು ಹಣ ತಲುಪಿಸುವಂತೆ ಮಾಡುತ್ತೇನೆ. ಇಲ್ಲ ನನಗೆ ಮಗಳು ಇಲ್ಲ – ಇಲ್ಲವೇ ಇಲ್ಲ ಎಂದು ಹಲುಬಿದ. ಆದರೆ ಅವನಿಗೆ ಅರ್ಥವಾಗದ ಸ್ವಯಂ ಕನಿಕರ ಅವನನ್ನು ಆವರಿಸಿತು. ಏಕೆಂದರೆ ಮಗಳ ಮೇಲಿನ ಪ್ರೀತಿ ಅಷ್ಟು ಅತೀವವಾಗಿತ್ತು. ಜೊತೆಯಲ್ಲೇ ಅವಳಿಂದ ತನಗಾಗುತ್ತಿರುವ ನೋವು ಅವನನ್ನು ವ್ಯಗ್ರಗೊಳಿಸಿತ್ತು.

ಹಿಂದಿನ ಒಂದು ವರ್ಷ ಲೀಸ ಕಳೆದ ೨೫ವರ್ಷಗಳಲ್ಲಿ ಜೀವನ ನಡೆಸಿದ್ದಕ್ಕಿಂತ ಉತ್ತಮ ಜೀವನ ನಡೆಸಿದ್ದಳು. ಇದ್ದಕ್ಕಿದ್ದಂತೆ ಅವಳಿಗೆ ತನ್ನದು ಯಾಕೊ ಅರ್ಥವಿಲ್ಲದ ಬರಡು ಜೀವನ ಎನ್ನಿಸಿತು. ಅದು ಕೀಳುಮಟ್ಟದ, ಪ್ರಾಣಿಗಳ ರೀತಿಯ ಜೀವನವೆನಿಸಿತು. ಮನೆಯ ಹಾಗೂ ಮೇಲ್ವರ್ಗದ ಜೀವನವೂ ಅರ್ಥ ರಹಿತ ಎನಿಸಿತು. ಅದು ಜೀವನದ ಆಳವಾದ ಅರ್ಥಗರ್ಭಿತವಾದ ಅನುಭವವನ್ನು ಕೊಡಲಾರದ ಮೇಲ್ಮೈ ಉಳ್ಳ ಪ್ರಾಣಿಗಳ ರೀತಿಯ ಜೀವನ ಎನಿಸಿತು. ಒಂದೆರಡು ವರ್ಷಕ್ಕೆ ಸರಿ ಎನಿಸಿದರೂ ಬರೀ ಶಾರೀರಿಕ ಪ್ರದರ್ಶನ, ಕುಡಿತದ, ಸೌಂದರ್ಯ ಪ್ರದರ್ಶನವಲ್ಲದೆ ಬೇರೇನೂ ಅಲ್ಲವೆನಿಸಿತು. ಸಂಗೀತ, ಓದು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ಸಹ ಜೀವನದ ಸಮಸ್ಯೆಗಳ ಬಗ್ಗೆ ಪ್ರಸ್ತಾಪಿಸಬಲ್ಲವೇ ಹೊರತು, ಆ ಸಮಸ್ಯೆಗಳಿಗೆ ಪರಿಹಾರ ಕೊಡಲಾರವು ಎನಿಸಿತು. ಅವಳು ಜೀವ ತೆಗೆದುಕೊಳ್ಳುವಂತಹ ನಿರಾಶೆಗೆ ತುತ್ತಾದಳು.

ಅವಳ ಸ್ನೇಹಿತೆಯರು ಅವಳ ಮನಸ್ಸನ್ನು ದಾನ ಧರ್ಮದ ಕಡೆಗೆ ಗಮನಹರಿಸಲು ಪ್ರಯತ್ನಿಸಿದರು. ಒಂದು ಕಡೆ ಸಮಾಜದಲ್ಲಿನ ಕಡು ಬಡತನ, ಇನ್ನೊಂದು ಕಡೆ ದುಂದು ವೆಚ್ಚದ, ನಿಗಿನಿಗಿಸುವ ವಸ್ತ್ರಾಭರಣಗಳನ್ನು ಧರಿಸಿ, ತಮ್ಮ ಸಿರಿವಂತಿಕೆಯ ಪ್ರದರ್ಶನ – ಹಾಗೂ ಬಲ್ಲಿದರಾದರೂ ಬಡತನದ ಸೋಗು – ಇದೆಲ್ಲದನ್ನೂ ನೋಡಿ ತನ್ನ ಜೀವನ ಅಸಹ್ಯವೆನಿಸಿತು. ಅವಳು ಅರ್ಥಗರ್ಭಿತ ಜೀವನದ ಕಡೆಗೆ ಹೆಜ್ಜೆಹಾಕಲು ಇಷ್ಟಪಟ್ಟಳು. ಆದರೆ ನಿಜವಾದ ಜೀವನ ಇಲ್ಲವೆನಿಸಿತು. ತುಂಬ ಇಷ್ಟಪಟ್ಟ ಜೀವನವನ್ನು ನೆನೆಸಿಕೊಂಡು ಅದರ ಅನುಭವವನ್ನು ನೀಡಿದ ಸೇನೆಯ ಕೆಡೆಟ್ ಆಗಿದ್ದ ಕೊಕೊ ಕುರಿತು ಮೆಲುಕು ಹಾಕಿದಳು. ಅಂಥ ಅನುಭವ ಸಿಕ್ಕಲಾರದು ಎನಿಸಿತು. ಇದೆಲ್ಲವನ್ನೂ ಮೆಲುಕು ಹಾಕುತ್ತಾ ಹೆಚ್ಚು ಖಿನ್ನಳಾದಳು. ಈ ರೀತಿಯ ಮನಃಸ್ಥಿತಿಯಲ್ಲಿ ಫಿನ್‌ಲೆಂಡಿನ ತನ್ನ ಚಿಕ್ಕಮ್ಮನ ಮನೆಗೆ ಹೋದಳು. ಅಲ್ಲಿನ ಪ್ರಕೃತಿ ಸೌಂದರ್ಯ, ಹೊಸ ಜನರು ಅವಳಿಗೆ ಹೊಸ ಅನುಭವವನ್ನು ನೀಡಿತು. ಚಿಕ್ಕಮ್ಮನ ಮನೆಯಲ್ಲಿ ಇನ್ನೊಬ್ಬ ಅತಿಥಿ ಇದ್ದ – ಸ್ವೀಡನ್ನಿನವನು. ಅವನ ಕಡೆಗೆ ತನ್ನ ಗಮನ ಹೋಗಿ – ಅವನ ಆಕರ್ಷಣೆ ಹೆಚ್ಚಾಗಿ ಅವನ ಪ್ರೇಮಪಾಶದಲ್ಲಿ ಸಿಲುಕಿ ತನ್ನನ್ನು ಅವನಿಗೆ ಅರ್ಪಿಸಿಕೊಂಡಳು. ಅವಳು ಇಚ್ಛಿಸಿದ ಜೀವನ ಅವನ ಮೂಲಕ ಸಿಗುವುದೆಂದೆಣಿಸಿದಳು. ತಂದೆ ತನ್ನನ್ನು ತ್ಯಜಿಸಿದ್ದಾನೆ ಎಂಬ ಅರಿವಿನಿಂದ – ಈ ಹೊಸ ಬಂಧನಕ್ಕೆ ಮುಂದಾದಳು. ಇಲ್ಲಿ ಅವಳಿಗೆ ಕಾದಿದ್ದುದು ನಿರಾಸೆ. ಅವನು ಆಗಲೆ ಮದುವೆ ಆಗಿದ್ದ. ಆಶಾಗೋಪುರ ಕಳಚಿಬಿದ್ದಿತ್ತು. ಈಕೆ ಆತನನ್ನು ಎಷ್ಟು ಹಚ್ಚಿಕೊಂಡಿದ್ದಳೆಂದರೆ, ಆತನನ್ನು ಬೇಡಿಕೊಂಡು, "ನನ್ನನ್ನು ಕೈಬಿಡಬೇಡಿ, ನಿಮ್ಮೊಂದಿಗೆ ನಾನು ಎಲ್ಲಿಗೆ ಬೇಕಾದರೂ ಬರಲು ತಯಾರು" ಎಂದು ಬೇಡುತ್ತಿದ್ದಳು. ಪತ್ರ ವ್ಯವಹಾರ

ನಿಂತುಹೋಯಿತು. ಆತನನ್ನು ಮರೆಯಬೇಕಾಯಿತು.

ಪೀಟರ್ಸ್‌ಬರ್ಗ್‌ಗೆ ಬಂದು ಜೀವನವನ್ನು ಮುಂದುವರಿಸಿದಳು. ಕಾಯಿಲೆಬಿದ್ದಳು. ವೈದ್ಯರ ಸಹಾಯ ದುರ್ಲಭವಾಯ್ತು. ಜೀವತೆಗೆದುಕೊಳ್ಳಲು ನಿರ್ಧರಿಸಿದಳು. ಹೇಗೆ ಎಂದು ಯೋಚಿಸಿದಳು. ತನ್ನ ಸಾವು ಸ್ವಾಭಾವಿಕವಾದದ್ದು ಎಂದು ತಿಳಿಯುವಂತೆ ಆಗಲು ಯೋಚಿಸಿದಳು. ಒಂದು ಔಷಧದ ಅಂಗಡಿಯಿಂದ ವಿಷವನ್ನು ಕೊಂಡು ತಂದಳು. ಒಂದು ಲೋಟಕ್ಕೆ ಸುರಿದು – ಇನ್ನೇನು ಅದನ್ನು ಸೇವಿಸಬೇಕು ಅನ್ನುವಷ್ಟರಲ್ಲಿ ಅಕ್ಕನ ಐದು ವರ್ಷದ ಮಗು ಗಕ್ಕನೆ ಬಂದು ಒಂದು ಆಟದ ಬೊಂಬೆಯನ್ನು ತನ್ನ ಕೈಗಿತ್ತು ನೋಡಲು ಹೇಳಿದ. ಮಗುವನ್ನು ಮುದ್ದಿಸಿ ಕಣ್ಣೀರು ಸುರಿಸಿ ನಿಟ್ಟುಸಿರುಬಿಟ್ಟಳು.

ತಾನೂ ಸಹ ಮದುವೆಯಾಗಿ ತಾಯ್ತನದ ಸಂತೋಷದಿಂದ ವಂಚಿತಳಾದದ್ದಕ್ಕೆ ಅತೀವ ದುಃಖವಾಯಿತು. ತನ್ನ ಬಗ್ಗೆ ಇತರರು ಏನು ಹೇಳುವರು ಎನ್ನುವ ಬಗ್ಗೆ ಯೋಚಿಸದೆ ತನ್ನ ಜೀವನದ ಬಗ್ಗೆ ಯೋಚಿಸಿದಳು. ತನಗೂ ಪ್ರಪಂಚಕ್ಕೂ ಏನೂ ಸಂಬಂಧವಿಲ್ಲ ಎನ್ನುವ ಭಾವನೆ ಪ್ರಬಲವಾಗಿ, ಪ್ರಾಣ ತೆಗೆದುಕೊಳ್ಳುವ ಯೋಚನೆ ದೂರ ಮಾಡಿದಳು ವಿಷವನ್ನು ಆಚೆ ಎಸೆದಳು. ತನ್ನ ಆಂತರಿಕ ಜೀವನ ಆರಂಭವಾಯ್ತು. ಪ್ರಾರ್ಥಿಸಿದಳು. ಅದರಿಂದ ಸಮಾಧಾನ ಸಿಗಲಿಲ್ಲ. ತನ್ನ ದುಃಖ ತನಗಾಗಿ ಅಲ್ಲ ತನ್ನ ತಂದೆಗಾಗಿ. ತಿಂಗಳುಗಳು ಉರುಳಿದವು. ಒಂದು ದಿನ ಹಿಂದಿನ ದಿನಗಳ ಜೀವನ ಎದುರಿಗೆ ಬಂದು ಅವನ ನೀಚತನ, ಮೋಸ, ತಾಯಿಯ ಜಗಳಗಂಟಿತನ, ತಂದೆಯ ದುಃಖವನ್ನು ಜ್ಞಾಪಿಸಿಕೊಂಡಳು. ನಗು ಬಂತು. ತಾನು ಅವೆಲ್ಲಕ್ಕೂ ಕೊನೆ ಮಾಡಲು ಹೊರಟಿದ್ದೆನಲ್ಲಾ ಎಂದು ನಡುಗಿದಳು.

ತನ್ನ ಯೋಚನೆ ತನ್ನ ಹೊಟ್ಟೆಯಲ್ಲಿದ್ದ ಮಗುವಿನ ಕಡೆ ತಿರುಗಿತು. ಬೇರೆ ಎಲ್ಲಾದರೂ ಹೋಗಿ ಮಗುವನ್ನು ಹೆತ್ತು ದುರದೃಷ್ಟದ ತಾಯಿಯಾಗಿ ಜೀವನ ಸಾಗಿಸಲು ನಿರ್ಧರಿಸಿ – ದೂರದ ಒಂದು ಪಟ್ಟಣಕ್ಕೆ ಹೋಗಿ ನೆಲೆಸಲು ಏರ್ಪಾಟು ಮಾಡಿಕೊಂಡಳು, ಯಾರಿಗೂ ತಿಳಿಯದಂತೆ ಜೀವಿಸಲು ನಿರ್ಧರಿಸಿದಳು. ದುರದೃಷ್ಟ, ಅದೇ ಪಟ್ಟಣಕ್ಕೆ ಚಿಕ್ಕಪ್ಪನಿಗೆ ವರ್ಗವಾಯಿತು. ನಾಲ್ಕು ತಿಂಗಳು ಒಬ್ಬ ನರ್ಸ್ ಮನೆಯಲ್ಲಿ ವಾಸಕ್ಕಿದ್ದಳು. ಚಿಕ್ಕಪ್ಪ ಅಲ್ಲಿಗೆ ಬರುವ ಸುದ್ದಿ ತಿಳಿದು ಇನ್ನೂ ದೂರದ ಊರಿಗೆ ಹೋಗಲು ಯೋಚಿಸಿದಳು.

ಪ್ರಿನ್ಸ್ ಮೈಖೇಲ್ ಇವಾನೊವಿಚ್ ತಮ್ಮನ ಮನೆಗೆ ಬಂದಿದ್ದವನು ಮಾರನೇ ದಿನ ಬೆಳಗ್ಗೆ ಎದ್ದು ತಮ್ಮನ ರೂಮಿಗೆ ಹೋಗಿ ಮಗಳಿಗೆ ಪ್ರತಿ ತಿಂಗಳೂ ಕೊಡಬೇಕಾದ ಹಣಕ್ಕೆ ಚೆಕ್ ಆತನ ಕೈಗೆ ಇತ್ತ. ಅಂದೇ ಪೀಟರ್ಸ್‌ಬರ್ಗ್‌ಗೆ ರೈಲಿನಲ್ಲಿ ಸಂಜೆ ಹೊರಡುವವನಿದ್ದ. ಬೆಳಗಿನ ತಿಂಡಿಕೊಡಲು ನಾದಿನಿ ಬಂದಳು. ನೋವು ಕೊಡುವ ಮಗಳ ವಿಚಾರವನ್ನು ಮತ್ತೆ ಪ್ರಸ್ತಾಪಿಸಲಿಲ್ಲ. ಬೆಳಗಿನ ವ್ಯಾಯಾಮಕ್ಕಾಗಿ ನಗರದ ಸಾರ್ವಜನಿಕ ಪಾರ್ಕ್‌ಗೆ ಹೋಗುವಂತೆ ತಿಳಿಸಿದಳು – ಅದು ಹತ್ತಿರವಿದ್ದು ಎಲ್ಲಕ್ಕೂ ಅನುಕೂಲವಾಗಿತ್ತು. ಆತ ಹಾಗೆ ಮಾಡಿದ. ಆತನ ಯೋಚನೆ ಹೆಂಗಸರ ದಡ್ಡತನ, ಮೊಂಡುತನ ಹಾಗೂ ನಿರ್ದಯತೆಯ ಕಡೆಗೆ ಹೋಯಿತು. ನಾದಿನಿ ನನ್ನ ಬಗ್ಗೆ ಸ್ವಲ್ಪವೂ ಕನಿಕರವಿಲ್ಲದವಳು ಎನಿಸಿತು. ನನ್ನ ನೋವು ಆಕೆಗೆ ತಿಳಿಯಲಾರದು ಎಂದುಕೊಂಡ. ಮಗಳ ಬಗ್ಗೆ ಯೋಚಿಸಿದ. ಅವಳಿಗೆ ತನಗೆ ಅವಳಿಂದ ಎಷ್ಟು ನೋವಾಗಿದೆ ಎನ್ನುವುದು ತಿಳಿದಿದೆ ಎಂದುಕೊಂಡ. ಇಳಿವಯಸ್ಸಿನಲ್ಲಿ ಎಂತಹ ಆಘಾತ! ಇದರಿಂದ ನನ್ನ ಜೀವನದ ವರ್ಷಗಳು ಕಡಿಮೆಯಾಗುವುದು ನಿಶ್ಚಯ ಎನಿಸಿತು. ಸಾಯುವುದೇ ಮೇಲೆನಿಸಿತು. ಎಲ್ಲವೂ ಬಯಲಾದ ಮೇಲೆ ನಗರದಲ್ಲಿ ನಾನು ತಲೆ ಎತ್ತಲಾರೆ ಎಂದುಕೊಂಡ. ಅತಿಕೋಪಗೊಂಡು




ಅವಳಿಗೆ ಇದನ್ನು ಅರ್ಥಮಾಡಿಸಬೇಕು ಎನಿಸಿತು. ನೋಟ್ ಪುಸ್ತಕದಲ್ಲಿ ಅವಳ ವಿಳಾಸ ಸಿಕ್ಕಿತು. ಅದು ಹತ್ತಿರವೇ ಇತ್ತು. ಪಾರ್ಕ್‌ನಿಂದ ಹೊರಬಿದ್ದು ಒಂದು ಕ್ಯಾಬನ್ನು ಕರೆದು ಅಲ್ಲಿಗೆ ಹೊರಟ. ಮನೆಗೆ ಬಂದು ಬೆಲ್ ಮಾಡಿದ. ಮಿಡ್‌ವೈಫ್ ಮರಿಯ ಬಾಗಿಲು ತೆಗೆದು, "ಇಲ್ಲಿ ವೇರ ಇವಾನೋವಿಚ್ ಇರುವಳೆ?" ಎಂದು ಕೇಳಿದ. ಮಗಳು ಆ ಹೆಸರಿನಲ್ಲಿ ತಂಗಿದ್ದಳು. ಮಿಡ್‌ವೈಫ್, "ಇದ್ದಾಳೆ, ಇಲ್ಲೆ ಅಂಗಡಿಗೆ ಹೋಗಿದ್ದಾಳೆ – ಇನ್ನೇನು ಬರುತ್ತಾಳೆ, ಒಳಗೆ ಬನ್ನಿ" ಎಂದು ಆಹ್ವಾನಿಸಿದಳು. ಚಿಕ್ಕ ಮನೆ. ಒಳಗೆ ಹೋದ. ಅಯ್ಯೋ ಎನಿಸಿತು. ವರಾಂಡ ಪಕ್ಕದ ರೂಂ, ಅಡಿಗೆ ಮನೆ. ಸ್ಕ್ರೀನ್ ಆಚಿನ ರೂಂನಿಂದ ಮಗುವಿನ ಕಿರಿಚಾಟ ಕೇಳಿಸಿತು. ಮಗಳ ಮಗುವೇ ಎನಿಸಿತು. ತಾನು ಅಲ್ಲಿಗೆ ಬಂದದ್ದು ತುಂಬ ಆಕಸ್ಮಿಕ. ಹೋಗುವುದು ಒಳಿತು ಎನ್ನಿಸಿ, ಹೊರಡಲು ಸಿದ್ಧನಾಗಿ ತಿರುಗಿದ. ಅದೇ ಘಳಿಗೆಗೆ ಮಗಳು ಬಂದು, "ಮಗು ತುಂಬ ಅಳುತ್ತಿದ್ದಳೆ?" ಎಂದು ಮರಿಯಳನ್ನು ಕೇಳಿ ಅಲ್ಲಿದ್ದ ತಂದೆಯನ್ನು ಕಂಡಳು. ಕೈಯಲ್ಲಿದ್ದ ಪಾರ್ಸಲ್ ಕೆಳಗೆ ಬಿತ್ತು. "ಅಪ್ಪ" ಎಂದು ಚೀರಿ ಬಿಳಿಚಿಕೊಂಡು ನಡುಗುತ್ತಿದ್ದಳು. ತಂದೆ ನಿಶ್ಚಲನಾಗಿ ಮಗಳನ್ನು ನೋಡಿದ. ಸಣ್ಣಗಾಗಿದ್ದಳು, ಕಣ್ಣು ಅಗಲವಾಗಿತ್ತು. ಕೈಗಳ ಮೂಳೆ ಪ್ರಧಾನವಾಗಿ ಕಾಣಿಸಿತು. ಏನು ಹೇಳಲೂ ತೋಚಲಿಲ್ಲ. ತನ್ನ ನೋವೆಲ್ಲಾ ಇಲ್ಲವಾಯಿತು. ಸ್ವ ಪ್ರತಿಷ್ಠೆಗೆ ಆದ ಆಘಾತವೂ ಕಳಚಿತ್ತು. ಅವಳಿಗಾಗಿ ತುಂಬ ದುಃಖವಾಯಿತು. ಅವಳ ದುಃಖ ಭರಿತ ಮುಖವನ್ನು ನೋಡಿ ಸಹಿಸಲಾರದಾದ. "ಕ್ಷಮಿಸಿ, ತಂದೆ" ಎಂದು ತಂದೆಯನ್ನು ತೋಳುಗಳಿಂದ ಬಂಧಿಸಿದಳು. ತಂದೆಯೂ "ಕ್ಷಮಿಸು ಮಗಳೆ" ಎಂದು ಕಣ್ಣೀರು ಸುರಿಸಿದ. ತಂದೆಗೆ ತನ್ನ ತಪ್ಪು ಅರಿವಾಗಿತ್ತು. ತನ್ನ ಸ್ವ ಪ್ರತಿಷ್ಠೆಯಿಂದಾಗಿ ಮಗಳಿಗೆ ತಾನು ತುಂಬ ಅನ್ಯಾಯ ಮಾಡಿದೆ ಎನ್ನುವ ಅರಿವು ಬಂದು "ಕ್ಷಮಿಸು ಎಂದು ಕೇಳುವ ಅವಶ್ಯಕತೆಯಿಲ್ಲ. ನಾವೇ ನಿನ್ನನ್ನು ಕ್ಷಮಿಸು ಎಂದು ಕೇಳುತ್ತೇನೆ" ಎಂದು ಮಗಳನ್ನು ಹಿಂದಿನಂತೆ ಮುದ್ದಿಸತೊಡಗಿದ. ತಂದೆಗೆ ತನ್ನ ಮಗಳನ್ನು ತೋರಿಸಲಿಲ್ಲ. ಅಲ್ಲದೆ, ಕಳೆದ ಜೀವನದ ಬಗ್ಗೆಯೂ ಮಾತನಾಡಲಿಲ್ಲ. ಏಕೆಂದರೆ ಅದರಿಂದ ತಂದೆಗೆ ನೋವುಂಟುಮಾಡಲು ಇಚ್ಛಿಸಲಿಲ್ಲ. ತಂದೆ ಮಗಳಿಗೆ, "ನೀನು ಬೇರೆ ರೀತಿಯ ಜೀವನ ನಡೆಸಬೇಕು" ಎಂದು ಹೇಳಿದ. ಆ ವೇಳೆಗೆ ಸರಿಯಾಗಿ ಮಗು ಚೀರಲು ಮೊದಲು ಮಾಡಿತು. ತಂದೆ, "ಹಾಲುಣಿಸಲು ಸಮಯ ಎನಿಸುತ್ತಿದೆ ಹೋಗು" ಎಂದ. ಅರೆ ಕ್ಷಣ ಮಗಳು ತಂದೆಯನ್ನು ದೃಷ್ಟಿಸಿ ನೋಡಿ, ತನ್ನನ್ನು ಪ್ರೀತಿಸಿದ ತಂದೆಗೆ, ನಾನು ಈಗ ಪ್ರೀತಿಸುವ ಮಗುವನ್ನು ತೋರಿಸಲೊ ಬೇಡವೊ ಎನ್ನುವ ದ್ವಂದ್ವದಲ್ಲಿದ್ದಳು. ಮಗಳ ತೊಳಲಾಟವನ್ನು ನೋಡಿ ತಂದೆ ತುಂಬ ವ್ಯಥೆಪಟ್ಟ. ತಂದೆ ಬೀಳ್ಕೊಡುವ ಮುನ್ನ, ನಾಳೆ ಎಲ್ಲವನ್ನೂ ಮಾತನಾಡೋಣ" ಎಂದು ಹೇಳಿ ಹೊರಟ.

ತಮ್ಮನ ಮನೆಗೆ ಹಿಂತಿರುಗಿದಾಗ, ನಾದಿನಿ, "ಏನು ಅವಳನ್ನು ಭೇಟಿಯಾದಿರಾ?" ಎಂದು ವಿಚಾರಿಸಿದಳು. ಆತ, "ಸರಿ, ಸರಿ, ನನಗೆ ವಯಸ್ಸಾಯಿತು. ಹೀಗೆಯೇ ಬುದ್ಧಿಹೀನನಾಗಿದ್ದೇನೆ" ಎಂದ. ನಾದಿನಿ ಹೇಳಿದಳು, "ಇಲ್ಲ, ಇಲ್ಲ, ನೀವು ಬುದ್ಧಿವಂತರಾಗಿದ್ದೀರಿ."

**ಟಾಲ್‌ಸ್ಟಾಯ್ ಅವರ ಇಂಗ್ಲಿಷ್ ಕಥೆ :**
**"My Dreams"**

ಕನ್ನಡಕ್ಕೆ : **ಪ್ರೊ॥ ಬಿ. ಕೆ. ಹನುಮಂತಯ್ಯ**
ನಂ. ೯೮, ಬಿ. ಎಸ್. ಕೆ. ೧ನೇ ಹಂತ, ಬೆಂಗಳೂರು – ೫೬೦ ೦೫೦

# ‘ಕಜ್ಜಾಯ’ ಖ್ಯಾತಿಯ ಸೌಜನ್ಯಮುಖಿ ಸುನಂದಾ...

**ಸ. ಉಷಾ**

**ಸುನಂದಾ ಸಾಹಿತ್ಯದ ಉತ್ತಮಿಕೆಯ ಜೊತೆಗೆ ಅವರಿಗೊಂದು ವ್ಯಕ್ತಿತ್ವದ ಉತ್ತಮಿಕೆಯಿತ್ತು. ಅವರ ಅತಿಥಿ ಸತ್ಕಾರ, ಅವರ ಸೌಜನ್ಯ, ಸ್ನೇಹಗಳನ್ನು ಕಾಪಾಡಿಕೊಳ್ಳುವ ವ್ಯಕ್ತಿತ್ವದ ಘನತೆ ಈ ಕಾಲದಲ್ಲಿ ಅಪರೂಪದ್ದು. ನಿತ್ಯೋತ್ಸವದ ಕವಿ ನಿಸಾರ್ ಅಹಮದ್‌ರವರು ‘ಮಾಸ್ತಿ’ ಎಂಬ ಕವಿತೆಯಲ್ಲಿ ಬರೆಯುತ್ತಾರೆ. ರಸ್ತೆಯ ಕೊನೆಯಲ್ಲಿ ಮಾಸ್ತಿ ತಿರುಗಿ ಮರೆಯಾದರು ಸಂದುಹೋದ ಒಂದು ಬಾಳಿನ ರೀತಿಯಂತೆ ಎಂದು. ಬಹುಶಃ ಸುನಂದಾ ಅವರೂ ಹಾಗೆಯೇ. ಈ ಧಾವಂತದ ಬದುಕಿನಲ್ಲಿ ನಮ್ಮ ನಾಗರಿಕತೆ ಕಳಕೊಂಡಿರುವ ಸೌಮನಸ್ಯ, ಸೌಜನ್ಯ, ಸತ್ಕಾರಗಳ ಸಂದುಹೋದ ಯುಗದ ಪ್ರತಿನಿಧಿ ಅವರು.**

“ಧಾರವಾಡದಲ್ಲಿ ಹುಟ್ಟಿ ಬೆಳೆದು ವಿದೇಶಗಳಲ್ಲಿ ಉದ್ಯೋಗ ಮಾಡಿ ಕುಟುಂಬ ನಿರ್ವಹಣೆ ಮಾಡಿ, ಈಗ ಬೆಂಗಳೂರಲ್ಲಿ ಬಂದು ನೆಲೆಸಿ ಧಾರವಾಡದ ಮೃದ್ಗಂಧವನ್ನು ಅಂತರ್ನಿಹಿತವಾಗಿಸಿಕೊಂಡಿರುವ ಅಪರೂಪದ ಲೇಖಕಿ ಸುನಂದಾ ಬಿಂದು ಬೆಳಗಾಂವಕರ. ಅವರ ಸಾಹಿತ್ಯದಲ್ಲಿ ಅನಗತ್ಯ ಆಕ್ರೋಶವಿಲ್ಲ, ಘೋಷಣೆಗಳ ಅಬ್ಬರ ಇಲ್ಲ. ಮಹಿಳಾ ಸಾಹಿತ್ಯಕ್ಕೆ ಅವರು ಪ್ರತ್ಯೇಕತೆಯನ್ನಾಗಲೀ ವಿಶೇಷ ಪ್ರಾಶಸ್ತ್ಯವನ್ನಾಗಲೀ ನೀಡಲು ಬಯಸುವುದಿಲ್ಲ. ಸುನಂದಾರವರು ಅಪ್ಪಟ ಪ್ರಾದೇಶಿಕ ಸಂವೇದನೆಯ ನೆಲೆಯಲ್ಲಿ ವಿಶಾಲ ಪ್ರಪಂಚವನ್ನು ಅಳೆದಿದ್ದಾರೆ. ಧಾರವಾಡ ಅವರ ಜನ್ಮಭೂಮಿ ಮತ್ತು ಕರ್ಮಭೂಮಿ. ಅದರೊಳಗೆ ಒಂದು ಹಿಡಿ ಧಾರವಾಡವಿದೆ. ಅದರ ಮೃದ್ಗಂಧ ಅವರ ಎಲ್ಲ ಸಾಹಿತ್ಯ ಕುಸುಮಗಳಲ್ಲಿ ಹೊರ ಸೂಸಿದೆ. ಅವರ ಬರಹದಲ್ಲಿ ವೈಶಾಲ್ಯ ಆಳಗಳೆರಡೂ ಇವೆ. ಕಪ್ಪು ಲೇಖಕಿಯೊಬ್ಬಳು ಹೇಳುವಂತೆ ಅವರ ಮಹಾಪ್ರಸ್ಥಾನ ಮನೆಯೊಳಗಿನದು. ಅವರು ನಿಗಳದೊಳಗಿನ ನಿರಾಳವನ್ನು ಅರಸಿಕಂಡ ಮುಗ್ಧವಿದುಷಿ.”

ಮೇಲೆ ಉಲ್ಲೇಖಿಸಿರುವ ಈ ಮಾತುಗಳು ನಾನೇ ಒಂದು ಲೇಖನದಲ್ಲಿ ಬರೆದವು. ಬೇರೆ ಬೇರೆ ಸಂದರ್ಭಗಳಲ್ಲಿ ಈ ಮಾತುಗಳನ್ನು ಸುನಂದಾ ಅವರು ತಮ್ಮ ಪುಸ್ತಕಗಳಲ್ಲಿ ಬೆನ್ನುಡಿಯಾಗಿ ಬಳಸಿಕೊಂಡಿದ್ದಾರೆ. ಅವರ “ಕಜ್ಜಾಯ” ಪ್ರಬಂಧಗಳು ಸುಧಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬರತೊಡಗಿದಾಗ ನಾನು ಅಂತಿಮ ಬಿ.ಎ. ವಿದ್ಯಾರ್ಥಿನಿ. ನವ್ಯದ ಅಬ್ಬರದಲ್ಲಿ ಅಳಿದುಹೋಗುತ್ತಿದ್ದ ಲಲಿತ ಪ್ರಬಂಧಕ್ಕೆ ಹೊಸ ತೇಜಸ್ಸು ಕೊಟ್ಟು ರೂಪಿಸಿದ ಕೆಲವೇ ಕನ್ನಡ ಸಾಹಿತಿಗಳಲ್ಲಿ ಸುನಂದಾ ಒಬ್ಬರು. ಕರ್ನಾಟಕದ ಜನ ಮತ್ತು ಜೀವನದಿಂದ ದೂರವಾಗಿ ವಿದೇಶದಲ್ಲಿದ್ದ ಅವರಿಗೆ ತನ್ನೂರನ್ನು ಕುರಿತ ಅವರ ಬರಹ ಒಂದು ಅಡಗುದಾಣವಾಗಿತ್ತು, ತಾಯಿಯ ಮಡಿಲಿನಂತೆ. ೨೦೧೧ರಷ್ಟು ತಡವಾಗಿ ಹೊರಬಂದ “ಕಾಯಕ ಕೈಲಾಸ” ಸಾಮಾಜಿಕ ಕಾದಂಬರಿಯ ಆರಂಭದಲ್ಲಿ ಸುನಂದಾ ಹೀಗೆ ಬರೆಯುತ್ತಾರೆ.

“ನಾನು ಮೂವತ್ತು ವರ್ಷಗಳ ಕಾಲ ಪರದೇಶದಲ್ಲಿದ್ದರೂ ನನ್ನೂರು ಧಾರವಾಡದ ಕೆಂಪು ಜಿಗುಟು ಮಣ್ಣು ಇನ್ನೂ ಹೆಚ್ಚು ಹೆಚ್ಚು ಕೆಂಪಾಗುತ್ತ ಅಂಟಾಗುತ್ತ ಹೋಯಿತೇ ಹೊರತು ನನ್ನನ್ನು ಬಿಡಲೇ ಇಲ್ಲ. ಅದು ನನಗೆ ನನ್ನೂರ ಸೃಷ್ಟಿ ಕೊಟ್ಟ ಭಾಗ್ಯ. ಹುಟ್ಟಿದೂರ ಹುರಿಗಂಟ ನಂಟಿನ ವಾತ್ಸಲ್ಯ ಮಾಯೆ.” ಸುನಂದಾರವರ ಕಜ್ಜಾಯವನ್ನು ಓದಿದಾಗ ನನಗೆ ಆದ ಅನುಭವ ಅತ್ಯಂತ ಆಪ್ತವಾದದ್ದು. ಇಲ್ಲಿನ ಭಾಷೆಯಲ್ಲಿ ಸಣ್ಣಕತೆಗಳ ಅನುಭವದ ಗಾಢತೆ, ಪ್ರಬಂಧದ ಲಾಲಿತ್ಯ, ಭಾವಗೀತೆಯ ಭಾವ ತೀವ್ರತೆ ಈ ಮೂರೂ ಗುಣಗಳು ದಟ್ಟೈಸಿವೆ. ಅದರೊಡನೇ ಹಾಸ್ಯದ ಲಹರಿಯೊಂದು ನವಿರಾದ ಕಸೂತಿಯ ಹಾಗೆ, ಗುಪ್ತಗಾಮಿನಿ ಶಾಲ್ಮಲೆಯ ಹಾಗೆ ಇದರೊಳಗೆ ಹರಿದಿದೆ. ಅತ್ಯಂತ ವೈಯಕ್ತಿಕವಾದ ಅನುಭವಗಳು ಇಲ್ಲಿ ಸಾರ್ವತ್ರಿಕಗೊಂಡು ಸಾರ್ಥಕವಾಗುತ್ತವೆ. “ರುಚಿ”, “ಸ್ಮೃತಿ” ಈ ಎರಡೂ ಪ್ರಬಂಧಗಳನ್ನು ಗಮನಿಸಬಹುದು. ಅಡಿಗೆ – ಊಟ ತಾಯಿಯ ಚಿತ್ರ. ತವರಿಗೆ ಬಂದ ಮಗಳನ್ನು ತಂದೆಯೂ ತಾಯಿಯೂ ಮಾತನಾಡಿಸುವ ಆಪ್ತತೆ. ಪ್ರೀತಿ ಎಷ್ಟೇ ಇದ್ದರೂ ಅದರ ಜೊತೆಗಿದ್ದ ಶಿಸ್ತು ಇವೆಲ್ಲ ರುಚಿಯಲ್ಲಿ ಸಮ್ಮಿಳಿತವಾಗಿವೆ. ಇನ್ನು ಸ್ಮೃತಿ – ಕಾಲೇಜಿನಲ್ಲಿ ಫಿಶ್‌ಪಾಂಡ್ – ಲಗ್ನವಾಗದ ಹೆಣ್ಣು ಮಗಳೊಬ್ಬಳಿಗೆ ಒಗಟು ಹಾಕಿ ಗಂಡನ ಹೆಸರು ಹೇಳಬೇಕೆಂದು ಚೀಟಿ ಬರುತ್ತದೆ. ಆಕೆ ಸಹಪಾಠಿಗಳ ಹಾಸ್ಯ ಚಟಾಕಿಗಳ ನಡುವೆ “ಲಗ್ನವಾಗದೆ ನಾ ಹೇಳಲಿ ಯಾ ಹುಚ್ಚರಾಯನ ಹೆಸರು” ಎಂದುಬಿಡುತ್ತಾಳೆ. ಲಗ್ನದ ದಿನ ಬಂದು ಶುಭಾಶಯಗಳಲ್ಲೆಲ್ಲ ಹುಚ್ಚರಾಯನ ಹೆಸರು ಮೆರೆದಾಡಿದಾಗ ತಂದೆಯ ಆತಂಕ. ಮಗಳು ತಿಳಿಸಿ ಹೇಳಿದಾಗ ಆಕೆಯ ಸಮಯ ಸ್ಫೂರ್ತಿಯ ಬಗ್ಗೆ ಹೆಮ್ಮೆ. ಕೊನೆಗೆ “ನನ್ನವರು ನನ್ನ ಪ್ರೇಮದಲ್ಲಿ ಹುಚ್ಚರೇ ಅಲ್ಲವೇ?” ಎಂಬ ನಿರೂಪಕಿಯ ಮಾತು



ಆ ಪುಟ್ಟ ಪ್ರಬಂಧವನ್ನು ವೈಯಕ್ತಿಕತೆಯಿಂದ ಸಾರ್ವತ್ರಿಕತೆಗೆ ಮತ್ತು ಅತ್ಯಂತ ಖಾಸಗಿ ವೈಯಕ್ತಿಕತೆಗೆ ಒಯ್ದು ಅತ್ಯಂತ ಕಲಾತ್ಮಕವಾಗಿಸಿಬಿಡುತ್ತದೆ.

ಹಾಗೆಂದು ಕಜ್ಜಾಯದಲ್ಲಿ ಮೂಡಿರುವ ಪ್ರಪಂಚ ಸುಖವಾಗಿ ಬೆಳೆದ ಶ್ರೀಮಂತರ ಮನೆ ಹೆಣ್ಣುಮಗಳ ಹಾಲು ಸಕ್ಕರೆಯ ಪ್ರಪಂಚವಲ್ಲ. ತನ್ನ ಮನೆಗೆ ದಿನ ದಿನವೂ ಬಂದು ಹೋಗುವ ಜನರ ಎದೆ ನಡುಗುವ ಸುಖ ದುಃಖಗಳ ಚಿತ್ರಣ, ಗೌರವ–ಮರ್ಯಾದೆ ಎಂಬ ಸಾಂಪ್ರದಾಯಿಕ ಮೌಲ್ಯಗಳನ್ನು ಮೀರಿದ ಮಾನವೀಯ ಮೌಲ್ಯಗಳ ಚಿತ್ರಣವೂ ಅಲ್ಲಿದೆ. 'ಬೆಣ್ಣೆಯ ಗಡಿಗೆ', 'ಹೆಣ್ಣು–ಭೂಮಿ' ಪ್ರಬಂಧಗಳು ಇಂಥವು.




ಕಜ್ಜಾಯವನ್ನು ಸುಧಾದಲ್ಲಿ ಓದಿದ ಓದುಗರು ಆ ನವಿರಾದ ಬರಹಕ್ಕೆ ಮೆಚ್ಚಿದರು. ಮುಂದೆ ಅದೇ ಸುಧಾದಲ್ಲೇ 'ಕೈತುತ್ತು' ಧಾರಾವಾಹಿಯಾಗಿ ಬಂದರೂ ಪ್ರಕಟವಾದ ಪುಸ್ತಕಗಳ ಯಾದಿಯಲ್ಲಿ ಕಜ್ಜಾಯದ ನಂತರ ಇರುವುದು 'ನಾಸು'. 'ನಾಸು' ಸುನಂದಾರವರ ಮೊದಲ ಕಾದಂಬರಿ. ಅವರ ಬರಹದ ಬಗ್ಗೆ ಸುಮ್ಮನೆ ಯೋಚಿಸುವಾಗ ಸಹ ನಾಸುವನ್ನು ಬಿಟ್ಟು ಯೋಚಿಸಲಾಗುವುದಿಲ್ಲ. ನಾಸು ಕಣ್ಣಿಗೆ ಕಟ್ಟುವಂತಹ ಚಿತ್ರವತ್ ವಿವರಗಳಲ್ಲಿ ಭಾವತೀವ್ರತೆಯಲ್ಲಿ ಸೊಕ್ಕಿದೆ. ಇಲ್ಲಿ ಅತ್ಯಂತ ಸೂಕ್ಷ್ಮವಾಗಿ ಲೇಖಕಿ ಎರಡು ಜಗತ್ತುಗಳನ್ನು ಮುಖಾಮುಖಿಯಾಗಿಸುತ್ತಾರೆ. ಒಂದು ಜಗತ್ತು ವಿದ್ಯೆ, ಅಧಿಕಾರ, ಹಣಕ್ಕೆ ಬೆಲೆಕೊಡುವ ಪುರುಷ ಪ್ರಧಾನ ಮೌಲ್ಯಗಳ ಜಗತ್ತು. ವಿದ್ವಾನ್ ಅಗ್ನಿಹೋತ್ರಿ ಅನಂತಾಚಾರ್ಯರು, ರಾಜಜ್ಯೋತಿಷಿ ಹಯಗ್ರೀವಾಚಾರ್ಯರು, ಉಡುಪಿ ಜನಾರ್ದನಾಚಾರ್ಯರು ಈ ಪ್ರಪಂಚದ ವ್ಯಕ್ತಿಗಳು. ಇನ್ನೊಂದು ಜಗತ್ತು ಅಂಬಕ್ಕ, ಅಕ್ಕವ್ವ, ಪದ್ಮಾವತಿ, ಸುಬ್ಬಕ್ಕ, ನಾನಿಯರದು. ಇದು ಪ್ರೇಮ, ಮಾನವೀಯತೆ, ಶುಶ್ರೂಷೆ ಪ್ರಧಾನವಾದ ಜಗತ್ತು. ಸ್ತ್ರೀಜಗತ್ತು ಸಂಭ್ರಮಿಸುವ, ಉಂಡುಟ್ಟು ಮೆರೆಯುವ ಹಬ್ಬ ಹರಿದಿನಗಳು ಸಹಾ ಹೆಣ್ಣಿನ ಪಾಲಿಗೆ ಮಿತಿಮೀರಿದ ದುಡಿತ ಮತ್ತು ದೈಹಿಕ ಹಿಂಸೆಯ ದಿನಗಳಾಗುವ ಚಿತ್ರವನ್ನು ಅತಿಸೂಕ್ಷ್ಮವಾಗಿ ಈ ಕಾದಂಬರಿ ಚಿತ್ರಿಸಿದೆ. ಇದರ ಜೊತೆಗೇ ಅಂಜಿಗೊತ್ತಿಲ್ಲಪ್ಪಟ್ಟ ನಾನಿಯಂಥ ಹೃದಯವಂತನನ್ನೂ ಚಿತ್ರಿಸಿದೆ. 'ನಾಸು' ಎಂಬ ಹೆಸರು ಕಾದಂಬರಿಗೆ ಹೇಗೆ ಅರ್ಥಪೂರ್ಣ ಎಂಬ ಕುತೂಹಲ ಕಾದಂಬರಿಯ ಕೊನೆಯಲ್ಲಿ ಸ್ಫೋಟವಾಗುತ್ತದೆ. ನಾನಿಯ ಬರಹದಲ್ಲಿನ ಒಂದು ಕಾಗುಣಿತದ ತಪ್ಪು. ಅಗ್ನಿಹೋತ್ರಿ ಅನಂತಾಚಾರ್ಯರಿಗೆ ತಾನು ತನ್ನ ಮಗನನ್ನು ಉದ್ದಕ್ಕೂ ನಡೆಸಿಕೊಂಡ ರೀತಿಯನ್ನು ಅನಾವರಣ ಮಾಡುತ್ತದೆ. ಆ ಬರಹದ ರಹಸ್ಯವನ್ನು ಅನಾವರಣ ಮಾಡುವವಳು ಸಹ ಅವನಂತೆ ಬದುಕಿನುದ್ದಕ್ಕೂ ಅಂಜಿಗೊತ್ತಿಲ್ಲಪ್ಪಟ್ಟ ಸದ್ದಿಲ್ಲದ ಕೆಲಸಗಾತಿ ಪದ್ಮಾವತಿಯೇ ಆಗಿದ್ದಾಳೆ. ಅನಂತಾಚಾರ್ಯರು ಒಮ್ಮೆ ತಿರಸ್ಕರಿಸಿ ದೂರ ಹೋಗುವಂತೆ ಮಾಡಿದ ಅಂತಃಕರಣ ಮತ್ತೆ ಹಲುಬಿ ಹಂಬಲಿಸಿದರೂ ಸಿಗದು.

ಸುನಂದಾರವರ ಮುಂದಿನ ಕಾದಂಬರಿ 'ಝುವಾದಿ'. ಇದರಲ್ಲಿ ಸ್ತ್ರೀ ಪುರುಷ ಸಂಬಂಧದ ವಿಶ್ಲೇಷಣೆ–ನಿರೂಪಣೆಯನ್ನು ಸುನಂದಾ ಮಾಡಿದ್ದಾರೆ. ಪುರುಷರೆಲ್ಲ ದುಷ್ಟರು ಶೋಷಕರು, ಸ್ತ್ರೀಯರೆಲ್ಲ ಶೋಷಿತರು ಎಂಬ ಕಪ್ಪು ಬಿಳುಪು ಪಾತ್ರ ಚಿತ್ರಣ ಸುನಂದಾರವರದಲ್ಲಿ ಬದುಕಿನ ಅನಂತ ಮುಖಗಳನ್ನು ಅವರ ಲೇಖನಿ ಸಹನೆಯಿಂದ ಚಿತ್ರಿಸಿದೆ. 'ಝುವಾದಿ'ಯ ವಸ್ತು ಸಹ ಕುಟುಂಬವೇ, ಅನುಕೂಲ ದಾಂಪತ್ಯದಲ್ಲಿ ಉಂಟಾಗುವ ವಿರಸ ಸಂಶಯಿ ಪುರುಷನ ಕುಟುಂಬವೇ ಸಂಶಯಿತ ಮಹಿಳೆಯ ರಕ್ಷಣೆಗೆ ನಿಲ್ಲುವ ಅಪರೂಪದ ಮಾನವೀಯತೆ, ಗಂಡನ ತಿರಸ್ಕಾರ ಪುರಸ್ಕಾರಗಳನ್ನು ಅವನ ಮನಸ್ಥಿತಿಗನುಗುಣವಾಗಿ ಮಹಾ ಪ್ರಸಾದವೆಂಬಂತೆ ಸ್ವೀಕರಿಸದೆ ಅವನನ್ನು ವಿಚಾರಣೆಗೊಳಪಡಿಸುವ ಕೋಮಲ ಆದರೂ ದೃಢ ವ್ಯಕ್ತಿತ್ವದ ಸ್ತ್ರೀಯ ಚಿತ್ರಣ ಈ ಕಾದಂಬರಿಯಲ್ಲಿದೆ. ತನ್ನ ಸ್ವಂತ ಸುಖ ಸುರಕ್ಷೆಗಾಗಿ ತನ್ನ ಅಕ್ಕನ ಮಗನ ಸಂಸಾರದ ಸುಖವನ್ನು ಶಾಶ್ವತವಾಗಿ ನಾಶ ಮಾಡಲು ಹಿಂಜರಿಯದ ಹೆಂಗಸೊಬ್ಬಳ ಚಿತ್ರಣವೂ ಈ ಕಾದಂಬರಿಯಲ್ಲಿದೆ. ದಾಂಪತ್ಯ ನಿಷ್ಠೆಯ ಮೌಲ್ಯವನ್ನೂ ಎತ್ತಿ ಹಿಡಿಯುವ ಈ ಕಾದಂಬರಿಯಲ್ಲಿ ಕನಸು–ವಾಸ್ತವಗಳು ಸರಿಬೆರಕೆಯಾಗಿವೆ. ಅಪರಾಧ ಮತ್ತು ಶಿಕ್ಷೆಯ ಅತಿ ಸೂಕ್ಷ್ಮಚಿತ್ರಣವನ್ನೂ ಈ ಕಾದಂಬರಿ ಮಾಡಿದೆ. ಮಹಾಲಿಂಗನ ತೇರನ್ನು ಎಳೆಯುವ ಎರಡು ಕುದುರೆಗಳು ಸತಿಪತಿಗಳು ಎಂಬ ಹೊಳಹು ಕೂಡ ಕಾದಂಬರಿಯ ನಾಯಕಿ ಸೌದಾಮಿನಿಗೆ ಕನಸಿನಲ್ಲೆಂಬಂತೆ ಅರಿವಾಗುತ್ತದೆ. ಪಾತ್ರಗಳ ಬದುಕಿನ ಆಗುಹೋಗು ಗಳೊಡನೆ ವಿದೇಶದ ಸಿಂಹ ಕುಟುಂಬದ ಆಗು ಹೋಗುಗಳೂ ಇಲ್ಲಿ ಪಾಲು ಪಡೆದಿವೆ.

೨೦೦೯ರಲ್ಲಿ ಪ್ರಕಟವಾದ 'ಕೈತುತ್ತು' ಒಂದು ಕುಟುಂಬದ ಸ್ತ್ರೀಪ್ರಧಾನ ಇತಿಹಾಸ. Her story ಇಂದಿನ ಮಹಿಳಾ ಸಾಹಿತ್ಯದಲ್ಲಿ ಲೇಖಕಿಯರಿಗೆ ತುಂಬ ಬೆಲೆಬಾಳುವ ಒಂದು ಅನುಭವದ ಭಂಡಾರ. ತಮ್ಮ ತಮ್ಮ ತಾಯಿ ಮುತ್ತಜ್ಜಿ ಅಜ್ಜಿಯರ ಸ್ವಾನುಭವದ ಕಥೆಗಳು. ಇವು ಬರಹಕ್ಕೆ ಇಳಿಯದ ಕಥೆಗಳು. ಹಾಗೆ ಎಲ್ಲ ಸಾಹಿತ್ಯವೂ ಎಲ್ಲೋ ಒಂದು ನೆಲೆಯಲ್ಲಿ ಸ್ತ್ರೀ ಪ್ರಧಾನ ಇತಿಹಾಸವೇ ಆಗಿರುತ್ತದೆ. ಲಾರಾ ಇಂಗೆಲ್ಸ್ ವೈಲ್ಡರಳ "ಪುಟ್ಟ ಮನೆ"ಯ ಕಥೆಗಳಲ್ಲಿ ಬರುವ ತಾಯಿ ಅಜ್ಜಿ ಅಕ್ಕಂದಿರು. 'ಶ್ಯಾಮನ ತಾಯಿ'ಯ ತಾಯಿ. ಚಿನುವಾ ಅಚಿಬೆಯ ಕತೆಗಳಲ್ಲಿ ಬರುವ ಮಾಟಗಾತಿ ಅಜ್ಜಿಯರು, ತಾಯಿಯರು. ತಾಯಿ ಅಜ್ಜಿಯರ ಬಗೆಗೆ ಬರೆಯಲು ದೇಶ ಭಾಷೆ ಪಂಥಗಳ ಹಂಗಿಲ್ಲ. ಆದರೆ ಇಂದು ಆ ಕಥೆಯನ್ನು ಕಾಣುವ ಕಣ್ಣು ಹೊಸದಾಗಿದೆ ಅಷ್ಟೇ.

'ಕೈತುತ್ತು' ಆ ಕಾಲದ ಬದುಕಿನ ಚಿತ್ರಣವೂ ಆಗಿದೆ. ಎರಡು ತಲೆಮಾರುಗಳಲ್ಲಿ ಬಂದು ಹೋಗುವ ಪಾತ್ರಗಳ ಮೆರವಣಿಗೆಯೂ ಆಗಿದೆ. ಇಲ್ಲಿನ ಬದುಕು ಕೇವಲ ಬಡವರ ಮನೆಯದೇನಲ್ಲ. ಶ್ರೀಮಂತರ ಮನೆಯದೂ ಅಹುದು. ಭೋಗವಸ್ತುಗಳ ಹೆಚ್ಚಳದ ಸಂಸ್ಕೃತಿ ಇಲ್ಲದ ಕಾಲದ ಚಿತ್ರವದು. ಅಕ್ಕಮ್ಮ ಎಂಬ ಹೆಣ್ಣುಮಗಳು ಮಹಾದೇವಿ ಚೆನ್ನಮಲ್ಲಿಕಾರ್ಜುನನನ್ನು ಒಲಿದಂತೆ ಬಡವಿ ಗಂಗತ್ತೆಯ ಮಗ ರಾಮುವನ್ನು ಒಲಿದಿದ್ದಾಳೆ. ಇಲ್ಲಿ ಸಹ ಎರಡು ಜಗತ್ತುಗಳು ಕಾಣುತ್ತವೆ. ಒಂದು ಚಿಕ್ಕಪ್ಪನ ಅಧಿಕಾರ. ಅವನ ಡಮಣಿಗಾಡಿ ಅವನ ಶಿಸ್ತು – ಊಟಕ್ಕೆ ಬಡಿಸುವಾಗ ಹೆಚ್ಚು ಕಡಿಮೆಯಾದಲ್ಲಿ ಅವನ ಸಿಟ್ಟು – ಇದರ ಜೊತೆ ಜೊತೆಗೇ ರಾಧಾಕಕ್ಕಿಯ ಅಂತಃಕರಣ, ಅವಳ ಹೆಂಗರುಳು, ಚೆಲುವನೂ ವಿದ್ಯಾವಂತನೂ ಆದ ಹುಡುಗನಿಗೆ ಹುಡುಗಿಯನ್ನು ಕೊಡಬೇಕೆನ್ನುವ ವಿಚಾರ ಇನ್ನೊಂದು ಜಗತ್ತಿನದು. ಅದು ಹೆಣ್ಣು ಜಗತ್ತು.

'ಕೊಡುವುದೇನು ಕೊಂಬುದೇನು' – ವ್ಯಕ್ತಿ ಚಿತ್ರಣಗಳನ್ನು ಮಾಲೆಯಂತೆ ಹೆಣೆದ ಪ್ರಬಂಧಗಳ ಸಂಕಲನವಿದು. ಇವುಗಳಲ್ಲಿ ತಾನು ಕಂಡ ವ್ಯಕ್ತಿಗಳ ಕುರಿತ ಬರಹಗಳಿವೆ. ತೀರಾ ಕಿರಿಯವರಿದ್ದಾಗ ಕಂಡದ್ದನ್ನು – ಅರ್ಥಮರ್ಥ ಅರಿತದ್ದನ್ನು ತಾಯಿ ಅಜ್ಜಿಯರಿಂದ ಕೇಳಿ, ತನ್ನದೇ ಕಲೆಯಲ್ಲಿ ಪೂರ್ಣ ಗೊಳಿಸಿದ ಬರಹಗಳಿವೆ. ಇದರಲ್ಲಿ ತನ್ನದಲ್ಲದ ತಪ್ಪಿಗೆ ತಾಯಿಯಿಂದ ಭಿಕ್ಷೆಗೆ ನಿಯುಕ್ತನಾಗಿ ಬೆಲ್ಲಬೇಡುವ ಬೆಲ್ಲದ ಬ್ರಾಹ್ಮಣನಿದ್ದಾನೆ. ಹೆರವರ ಮಕ್ಕಳನ್ನು ಸಾಕುವ ಪ್ರೀತಿಸುವ – ಜಗತ್ತಿನಿಂದ ಅವಮಾನಕ್ಕೊಳಗಾಗಿ ಬದುಕುವ ಶಲ್ಲಕ್ಕ ಇದ್ದಾರೆ. ದೇಹದಂಡನೆಯ ವ್ರತವನ್ನು ಅತ್ಯಂತ ಶ್ರದ್ಧೆಯಿಂದ ನಡೆಸುತ್ತ ಉಳಿದವರಿಗೆಲ್ಲ ಆರೈಕೆ ಪೋಷಣೆ ಮಾಡುವ ವಿಧವೆ ಅತ್ತೆಯರಿದ್ದಾರೆ. ಇದರ ಶೀರ್ಷಿಕೆ ಸಹಾ ಬೇಂದ್ರೆಯವರ ಒಂದು ಕವಿತೆಯಿಂದ ಪಡೆದದ್ದು. ಸುನಂದಾ ಕನ್ನಡ ಕವಿತೆಯ ಆರಾಧಕರು, ಇಂಗ್ಲಿಷ್ ಕವಿತೆಯ ರಸಿಕರು, ಬೇಂದ್ರೆ, ಕೀಟ್ಸ್, ಕೆ. ಎಸ್. ನರಸಿಂಹಸ್ವಾಮಿಯವರ ಕವಿತೆಗಳು ಆಗಾಗ ಅವರ ಬರಹಗಳಲ್ಲಿ ಇಣಿಕಿ ನೋಡುತ್ತವೆ, ಬಹುಸೂಕ್ತವಾಗಿ.

೨೦೧೧ರಲ್ಲಿ ಪ್ರಕಟವಾದ 'ಕಾಯಕ ಕೈಲಾಸ' ೫೨೦ ಪುಟಗಳ ಬೃಹತ್ ಸಾಮಾಜಿಕ ಕಾದಂಬರಿ. ಭಕ್ತಿ ಶ್ರದ್ಧೆಗಳ ಕಥೆ, ಎರಡು ಕುಟುಂಬಗಳ ಕಥೆ. ಎರಡು ಜೀವಗಳ ಭಕ್ತಿ ಶ್ರದ್ಧೆಗಳಿಗೆ ಇಡೀ ಊರು ಒತ್ತಾಸೆಯಾಗಿ ನಿಲ್ಲುವ ಕಥೆ. ಇದರಲ್ಲಿ ವ್ಯವಸ್ಥೆಯ ಕಾಠಿಣ್ಯದಿಂದ ನೋವುಣ್ಣುವ ಪ್ರೇಮಿಗಳಿದ್ದಾರೆ. ತನ್ನ ವಿಫಲ ಪ್ರೇಮದಿಂದ ನೊಂದು ಹಣ್ಣಾಗಿ ಪ್ರೇಮಿಗಳ ರಕ್ಷಣೆಗೆ ನಿಂತ ಹಿರಿಯರಿದ್ದಾರೆ. ಗಂಡ ದೇಶಾಂತರ ಹೋದಮೇಲೆ ಅವನ ಮಡದಿ ಗಂಗವ್ವ

ತನ್ನ ಕೈ ಕೂಸನ್ನು ಕಟ್ಟಿಕೊಂಡು ತನ್ನ ಜೀವನೋಪಾಯಕ್ಕಾಗಿ ಮಾಡುವ ಕರಿದ ಕಡಲೇಬೇಳೆಯ ತಿನಿಸು ಫಲವಂತಿಕೆಯ ಪ್ರಸಾದದ ಘನತೆಯನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಗಂಗವ್ವನ ಭಕ್ತಿ, ಸ್ವಾಮಿಗಳ ಪೂಜೆ, ಸೋಮುವಿನ ವಚನ ಗಾಯನ, ಕವಿತಾ ಸೃಷ್ಟಿ ಪ್ರವಚನಗಳಿಗೆ ಸ್ಥಾನವಿರುವಂತೇ – ಹುಚ್ಚ ಶಂಕ್ರುವಿನ ಪಿಕಲಾಟಗಳಿಗೆ, ಸೀನಿಂಗನ ತತ್ವಜ್ಞಾನಕ್ಕೆ ಸಹ ಸ್ಥಾನವಿದೆ. ಇಲ್ಲಿಯೂ ಎರಡು ಜಗತ್ತುಗಳಿವೆ. ಒಂದು ಜಗತ್ತಿನಲ್ಲಿ ಭಕ್ತಿ ಇದೆ, ಹೃದಯವಿದೆ, ಪೋಷಣೆಯ ಮೌಲ್ಯವಿದೆ. ಇನ್ನೊಂದು ಜಗತ್ತಿನಲ್ಲಿ ಮಹತ್ವಾಕಾಂಕ್ಷೆ ಇದೆ. ಕಾದಂಬರಿ ತರ್ಕವನ್ನು ಮೀರಿದ ಹಲವು ಘಟನೆಗಳನ್ನು ನಿರೂಪಿಸುತ್ತದೆ. ಅವುಗಳನ್ನು ನಂಬುವ ಒಪ್ಪುವ ಜನರು ಕಾದಂಬರಿಯಲ್ಲಿರುವಂತೇ ಧಿಕ್ಕರಿಸುವವರು, ಪ್ರಶ್ನಿಸುವವರೂ ಇದ್ದಾರೆ. ಪವಾಡ ದರ್ಶನಗಳ ದಾರಿ ಹಿಡಿದು ಹೊರಡುವ ಕಥಾನಕ Magical realism ಅನ್ನು ಸ್ಪರ್ಶಿಸುತ್ತದೆ.

ಕಾಕಭುಶಂಡಿ ೨೦೧೭ರಲ್ಲಿ ಪ್ರಕಟವಾದ ಪ್ರಬಂಧಗಳ ಸಂಕಲನ. ಲೇಖಕಿ ಕಿರಿಯಂದಿನಿಂದ ಕಂಡ ಪ್ರಾಣಿಪ್ರಪಂಚ ಇದರಲ್ಲಿ ಅನಾವರಣಗೊಂಡಿದೆ. ಗಿಡದ ಟೊಂಗೆಯ ಮೇಲೆ ಕೂತು ಕರೆಯುವ ಕಾಗೆ, ಆಡುವ ಇಣಚಿ, ದುಷ್ಟಬುದ್ಧಿಯ ಬೆಕ್ಕು, ವಿಶ್ವಾಸಿಕ ನಾಯಿಮರಿ, ಮಂಗ–ಮಂಗಿ, ಹಸು, ಹೋರಿಗಳ ಜೋಡಿ ಎಲ್ಲವೂ ಇದರಲ್ಲಿ ಭಾವನೆಗಳುಳ್ಳ ಪಾತ್ರಗಳಾಗಿ ಮೂಡಿವೆ. ಪ್ರಾಣಿಗಳ ದಾಂಪತ್ಯ ನಿಷ್ಠೆಯಿದೆ. ಲೈಂಗಿಕತೆಯ ಕ್ರೌರ್ಯವಿದೆ. ಅವೂ ಇನ್ನೊಂದು ಬಲಿಷ್ಠ ಪ್ರಾಣಿಯ ಅತ್ಯಾಚಾರಕ್ಕೆ ತುತ್ತಾಗುತ್ತವೆ. ಹೋರಿಯೊಂದು ಇಂಥ ಕೃತ್ಯಕ್ಕಾಗಿ ತನ್ನ ಅಸಹಾಯಕ ಸಂಗಾತಿಯನ್ನೇ ಕ್ರೂರವಾಗಿ ಶಿಕ್ಷಿಸಿದರೆ ಅಸಹಾಯಕ ಮಂಗವೊಂದು ಅಸಹಾಯಕ ಮನುಷ್ಯನಂತೆ ದುಃಖಿಸುತ್ತದೆ ತನ್ನದೇ ಮೂಕಭಾಷೆಯಲ್ಲಿ.

ಸುನಂದಾರ ಬರಹ ಮುಟ್ಟಿದಲ್ಲಿ ಮಿಡಿಯುವಂಥದು. ಆಡುಭಾಷೆಯನ್ನು ತನ್ನೆಲ್ಲ ಜೀವಚೈತನ್ಯದೊಡನೆ ಬಳಸಿಕೊಂಡಿರುವುದು. ತನ್ನ ಅಧ್ಯಾಪನ ವೃತ್ತಿ, ಗ್ರಂಥಪಾಲಕಿಯ ಕೆಲಸ. ವಿದೇಶದ ಅನುಭವಗಳ ಬಗ್ಗೆ ಅವರು ಬರೆಯಲಿಲ್ಲ. ಸುನಂದಾರ ಜೀವನಯಾತ್ರೆ ಮುಗಿಯಿತು. ಅದಕ್ಕಿಂತ ಮುಂಚೆ ಕೆಲಕಾಲ ಅವರು ನೆಲಕಚ್ಚಿದ್ದರು. ನಾನಾಗ ಅವರನ್ನು ಹೋಗಿ ನೋಡಲಿಲ್ಲ. ಗಂಟೆಗಟ್ಟಲೆ ದೂರವಾಣಿಯಲ್ಲಿ ನಾವು ಹರಟದ ವಿಷಯಗಳಿಲ್ಲ. ತಮ್ಮ ಗೆಳತಿಯರನ್ನವರು ದೂರವಾಣಿಯಲ್ಲೇ ಪರಸ್ಪರ ಪರಿಚಯ ಮಾಡಿಸಿಕೊಡುತ್ತಿದ್ದರು. ಈ ಮಾತನ್ನು ಅವರ ಗೆಳತಿ ರೇಖಾ ಕಾಖಂಡಕಿ ಸಹ ಅವರ ಸ್ಮರಣೆಯ ಸಮಾರಂಭದಲ್ಲಿ ಹೇಳಿದರು. ಆ ಸಮಾರಂಭದಲ್ಲಿ ಅದರ ಮೊಮ್ಮಗ ಆರ್ಯಮನ್, ಮೊಮ್ಮಗಳು ಐಶ್ವರ್ಯ ಮತ್ತು ಕಿರಿಯ ಮೊಮ್ಮಗಳು ಅನಘಾ ದುಃಖದಲ್ಲಿ ಬಿಗಿದ ಗಂಟಲಿನಲ್ಲಿ ಕಾರ್ಯಕ್ರಮದ ಅಧ್ವರ್ಯುಗಳಾಗಿ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ನಾನು ಶಾಂತಚಿಂತನಾಗ್ನಿಯ ಆರಾಧಕಳು. ನಾನು ಕಣ್ಣೀರು ಹಾಕಬಾರದೆಂದು ಎದೆ ಬಿಗಿಹಿಡಿದು ಬಹು ಸಂಯಮದಿಂದ ನನ್ನ ನಾಲ್ಕು ಮಾತಾಡಿ ಕುಳಿತೆ. ಕೊನೆಯಲ್ಲಿ ಮಾತಾಡಿದವರು ಮಾಲತಿ ಪಟ್ಟಣಶೆಟ್ಟಿ. ಮಾಲತಿಯವರ ಅಕ್ಕ ಸುಲೋಚನಾ ಕೋಟೂರ್ ರಿಸರ್ವ್ ಬ್ಯಾಂಕಿನ ಅಧಿಕಾರಿಣಿ. ಸುನಾಂದಾರವರ ಜೀವದ ಗೆಳತಿ. ಅವರನ್ನೊಮ್ಮೆ ಭೇಟಿಯೂ ಆಗಿದ್ದೆ ಸುನಂದಾರವರ ಮನೆಯಲ್ಲೇ. ಮಾಲತಿ ಮಾತು ಶುರು ಹಚ್ಚಿದರು. ನನ್ನ ಕಣ್ಣಿನಲ್ಲಿ ಸಣ್ಣ ಸಣ್ಣ ಹನಿಗಳು ಉದುರ ತೊಡಗಿದವು. "ಸುನಂದಾ ತನ್ನೆಲ್ಲ ತವರಿನ ಸಂಬಂಧಗಳನ್ನು ತನ್ನ ಸಾಹಿತ್ಯದಲ್ಲಿ ನೆನೆದಿದ್ದಾರೆ. ತವರಿನ ಮನುಷ್ಯರಷ್ಟೇ ಅಲ್ಲ ಆಕಳು, ಎಮ್ಮೆ, ಎತ್ತು, ಬೆಕ್ಕು, ನಾಯಿ, ಇಣಚಿ, ಮಂಗಗಳನ್ನು ಸಹ ತನ್ನ ಬರವಣಿಗೆಯಲ್ಲಿ ಅಮರವಾಗಿಸಿ ತೌರುಮನೆಯ ಋಣ ತೀರಿಸಿಬಿಟ್ಟಿದ್ದಾರೆ. ನಾನು ಒಬ್ಬರನ್ನು ಕೇಳಿದೆ ಸುನಂದಾ ಹೇಗಿದ್ದಾಳೆ ಎಂದು. ಅವರು ಉತ್ತರಿಸಿದರು ಸುನಂದಾ ಎಲ್ಲಿದ್ದಾಳೆ. ಆಕೆ ಬಿಂದೂನ ಕೂಡ ಹೋಗಿಬಿಟ್ಟಿದ್ದಾಳೆ ಎಂದು. ಮತ್ತೆ ಅಳು ನನಗೆ. ಸುನಂದಾ ಕಾಕ ಭುಶಂಡಿ ಬರೆಯುವವರೆಗೆ ಹೇಗೆ ಜೀವಹಿಡಿದು ಬದುಕಿದರು. ಅವರು ಕಾಯಕ ಕೈಲಾಸದಲ್ಲಿ ಸೋಮುವಿನ ಬಾಯಲ್ಲಿ ಹೇಳಿಸಿದಂತೆ ಸಂಗಾತಿಯನ್ನು ಕಾಣಲು 'ಬೆಳಕಿನ ಮನೆಗೆ ಹೋಗುವ ಮುನ್ನ ಧಾರವಾಡ ಸರಸ್ವತಿಯ ಪಾದಕ್ಕೆ ಕಾಕ ಭುಶಂಡಿ – ಕಾಯಕ ಕೈಲಾಸವೆಂಬ ಹೂಗಳನ್ನು ಅರ್ಪಿಸಲಿಕ್ಕಾಗಿ ಜೀವ ಹಿಡಿದಿದ್ದರೇ. ಒಂದು ವರ್ಷದಲ್ಲಿ ಜೀವದ ಸಂಗಾತಿಯನ್ನು, ಜೀವದ ಗೆಳತಿ ಸುಲೋಚನಾರನ್ನು, ಬೆನ್ನಿಗೆ ಬಿದ್ದ ತಮ್ಮನನ್ನು ಕಳಕೊಂಡ ಸುನಂದಾ ತಮ್ಮ ಅಳಿದ ಸುದ್ದಿ ಕೇಳಿ ಮಲಗಿದ್ದರಂತೆ. ನನ್ನ ಗುರು ಶ್ರೀಮತಿ ರುಕ್ಕಮ್ಮನವರು ಅವರಿಗೆ ಸುಮ್ಮನೆ ಒಂದು ದೂರವಾಣಿ ಕರೆ ಮಾಡಿದ್ದಾರೆ. ಅವರ ಬಳಿ ಇದ್ದವರು ಮಲಗಿದ್ದಾರೆ ಎಂದರಂತೆ. ಸುನಂದಾ ಮೇಡಂ ಅವರ ಧ್ವನಿ ಕೇಳಿ "ಕೊಡಿ ಮಾತಾಡುತ್ತೇನೆ" ಎಂದು ಮಾತನಾಡಿದರಂತೆ.

ಹೀಗಿದ್ದರು ನಮ್ಮ ಸುನಂದಾ. ಸಾಹಿತ್ಯದ ಉತ್ತಮಿಕೆಯ ಜೊತೆಗೆ ಅವರಿಗೊಂದು ವ್ಯಕ್ತಿತ್ವದ ಉತ್ತಮಿಕೆಯಿತ್ತು. ಅವರ ಅತಿಥಿ ಸತ್ಕಾರ, ಅವರ ಸೌಜನ್ಯ, ಸ್ನೇಹಗಳನ್ನು ಕಾಪಾಡಿಕೊಳ್ಳುವ ವ್ಯಕ್ತಿತ್ವದ ಘನತೆ ಈ ಕಾಲದಲ್ಲಿ ಅಪರೂಪದ್ದು. ನಿತ್ಯೋತ್ಸವದ ಕವಿ ನಿಸಾರ್ ಅಹಮದ್‌ರವರು 'ಮಾಸ್ತಿ' ಎಂಬ ಕವಿತೆಯಲ್ಲಿ ಬರೆಯುತ್ತಾರೆ. ರಸ್ತೆಯ ಕೊನೆಯಲ್ಲಿ ಮಾಸ್ತಿ ತಿರುಗಿ ಮರೆಯಾದರು ಸಂದುಹೋದ ಒಂದು ಬಾಳಿನ ರೀತಿಯಂತೆ ಎಂದು. ಬಹುಶಃ ಸುನಂದಾ ಅವರೂ ಹಾಗೆಯೇ. ಈ ಧಾವಂತದ ಬದುಕಿನಲ್ಲಿ ನಮ್ಮ ನಾಗರಿಕತೆ ಕಳಕೊಂಡಿರುವ ಸೌಮನಸ್ಯ, ಸೌಜನ್ಯ, ಸತ್ಕಾರಗಳ ಸಂದುಹೋದ ಯುಗದ ಪ್ರತಿನಿಧಿ ಅವರು.


**ಸ. ಉಷಾ**

ನಲ್ಮೆ, ನಂಜಪ್ಪ ಲೈಫ್‌ಕೇರ್ ಹತ್ತಿರ, ಸಾಗರ ರಸ್ತೆ, ಶಿವಮೊಗ್ಗ


# ದಾಳ

ನಾನೊಂದು ದಾಳ.
ಉರುಳಿಸುತಿರುವರೆಲ್ಲ ಮನ ಬಂದಂತೆ.
ಮನದಾಳದಲಿ ಹುದುಗಿರುವ ನೋವುಗಳ
ಯಾರಿಗೆ ಹೇಳಲಿ? ಯಾರನು ಹಳಿಯಲಿ?

ಬದುಕು ಬಂಡೆಯಂತೆ ಕಂಡರೂ
ಒಳಗಿಣುಕಿದಾಗ ಕರಗಬಹುದೆಂದುಕೊಂಡೆ;
ಬಂಡೆ ಬೆಟ್ಟವಾಗಿ ಮಾರ್ಪಡುವುದೆಂಬ
ಸಣ್ಣ ಕಲ್ಪನೆಯಾದರೂ ನನಗೆ ಬರಬಹುದಿತ್ತು.

ಕೆಸರಿರುವ ಬಾವಿಗೆ ನೂಕಿ ಆಳ ನೋಡೆಂದರು.
ಅದರ ಕಲ್ಮಷ ಕಂಡು ಮೇಲೇರಬಯಸಿದರೆ,
ಇನ್ನೂ ಆಳಕ್ಕೆ ಸಿಲುಕಿದೆನೆ ವಿನಹ
ಕಾಲ್ಕಿತ್ತು ಮೇಲೇರಲಾಗಲಿಲ್ಲ.

ಕುಳಿತು ಕಾಯುತಿರುವೆ ಕಣ್ಣಲ್ಲಿ ಹೊಂಗನಸು ತುಂಬಿ.
ಕೈಹಿಡಿದು ಎತ್ತುವರೆ ಮೇಲಿನ್ನ ಯಾರಾದರೂ?
ನನ್ನವರೆ ನನಗಿಂದು ಕೈ ಕೊಡುವಾಗ
ಇನ್ನೆಲ್ಲಿ ಬಯಸಲಿ ಬಿಡಿ ಬೇರೆಯವರ ಅನುರಾಗ!


**ವಿದ್ಯಾ ನರಗುಂದ**

ಇಂಡಿ ಅಂಚೆ, ವಿಜಾಪುರ ಜಿಲ್ಲೆ







ನಾನು ಓದಿದ ಪುಸ್ತಕ

ಕೃತಿ :
**ವುಮನ್ ಇನ್ ದಿ ಪಾಸ್ಟ್, ಪ್ರೆಸೆಂಟ್ ಆಂಡ್ ಫ್ಯೂಚರ್**

ಪ್ರಕಾಶನ :
**ನ್ಯಾಷನಲ್ ಬುಕ್ ಸೆಂಟರ್**
೪, ಅಶೋಕ ರೋಡ್, ನ್ಯೂ ಡೆಲ್ಲಿ – ೧೧೦೦೦೧

# ಆಗಸ್ಟ್ ಬೆಬೆಲ್‌ರ "ವುಮನ್ ಇನ್ ದಿ ಪಾಸ್ಟ್, ಪ್ರೆಸೆಂಟ್ ಆಂಡ್ ಫ್ಯೂಚರ್"

ಇತಿಹಾಸದಲ್ಲಿ ಅತ್ಯಂತ ಗೊಂದಲಕ್ಕೀಡಾಗಿರುವ ವಿಷಯಗಳಲ್ಲಿ ಮಹಿಳೆಯರ ಸ್ಥಾನಮಾನದ ವಿಷಯವೂ ಒಂದು. ಮಹಿಳೆಯರ ದುರವಸ್ಥೆಯ ಬಗ್ಗೆ ಮಾತನಾಡುವಾಗ ವ್ಯಕ್ತವಾಗುವ ಒಂದು ಸಾಮಾನ್ಯ ತಿಳುವಳಿಕೆಯೆಂದರೆ, ಮಹಿಳೆಯರು ಹಿಂದಿನಿಂದಲೂ ಹೀಗೇ ಬದುಕಿ ಬಂದಿದ್ದಾರೆ, ಮುಂದೆಯೂ ಹೆಚ್ಚು ಕಡಿಮೆ ಹೀಗೇ ಇರುತ್ತಾರೆ, ಮಹಿಳೆಯರ ಈ ಸ್ಥಿತಿ ಸಹಜವೇ, ಇದರ ಬಗ್ಗೆ ನಾವು ಸಹಾನುಭೂತಿ ತೋರಿಸಬಹುದೇ ವಿನಾ ಏನೂ ಮಾಡಲಿಕ್ಕಾಗುವುದಿಲ್ಲ ಎಂಬಂತಹ ವಿಧಿವಾದ ಕಂಡುಬರುತ್ತದೆ. ಬೆಬೆಲ್‌ರವರ ಈ ಪುಸ್ತಕ ಅಂಥ ಅಭಿಪ್ರಾಯಕ್ಕೆ ಕೊಡಲಿ ಪೆಟ್ಟು ಕೊಡುತ್ತದೆ.

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ (೧೮೪೦–೧೯೧೩) ಜರ್ಮನಿಯಲ್ಲಿ ಸಾಧಾರಣ ಕಾರ್ಮಿಕನ ಮಟ್ಟದಿಂದ ದುಡಿಯುವ ವರ್ಗದ ಜನಗಳ ಗೌರವಾನ್ವಿತ ನಾಯಕರಾಗಿ ಬೆಬೆಲ್ ಹೊರಹೊಮ್ಮಿದ್ದರು. ಆ ಹೊತ್ತಿಗಾಗಲೇ ಮಹಿಳೆಯರ ಸ್ಥಾನಮಾನದ ಬಗ್ಗೆ ಸ್ವಿಟ್ಜರ್‌ಲ್ಯಾಂಡಿನ ಬಾಕೊಫೆನ್, ಅಮೆರಿಕಾದ ಲೂಯಿ ಮಾರ್ಗನ್, ಜರ್ಮನಿಯ ಹೆನ್ರಿ ಕ್ಯೂನೊ ಹಾಗೂ ಇನ್ನಿತರರು ಅಪಾರ ಸಂಶೋಧನೆ ಮಾಡಿದ್ದರು. ಈ ಸಂಶೋಧನೆಗಳನ್ನು ಆಧರಿಸಿ, ದ್ವಂದ್ವಾತ್ಮಕ ವಸ್ತುವಾದಿ ಚಿಂತನೆಯ ನೆಲೆಗಟ್ಟಿನಲ್ಲಿ ಫ್ರೆಡರಿಕ್ ಎಂಗೆಲ್ಸ್ ಪಥ ಪ್ರದರ್ಶಕವಾದಂತಹ ಕೃತಿ **"ಕುಟುಂಬ, ಖಾಸಗಿ ಆಸ್ತಿ ಮತ್ತು ರಾಜ್ಯದ ಉಗಮ"** ರಚಿಸಿದ್ದರು. ಇದರ ಮುಂದುವರಿಕೆಯಾಗಿ ಬೆಬೆಲ್ ವಿಶ್ವದ ವಿವಿಧ ಮೂಲೆಗಳಿಂದ ಅಪಾರ ಮಾಹಿತಿ, ಸಾಕ್ಷಿ, ಪುರಾವೆಗಳನ್ನು ಸಂಗ್ರಹಿಸಿ, ವಸ್ತುನಿಷ್ಠ ತೀರ್ಮಾನಗಳನ್ನು ನಮ್ಮ ಮುಂದಿರಿಸಿದ್ದಾರೆ.

ಸಮಾಜವು ಎರಡು ವರ್ಗಗಳಾಗಿ ಒಡೆದು ಹೋಗುವ ಮೊದಲು ಇದ್ದಂತಹ ಹಂತದಲ್ಲಿ ಮಹಿಳೆಯರ ಸ್ಥಾನಮಾನ, ನಂತರ ಸಮಾಜ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಮಹಿಳೆಯರ ಪರಿಸ್ಥಿತಿ ಹಾಗೂ ಮುಂದೆ ಬರಲಿರುವ ಸಮಾಜವಾದಿ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಇವುಗಳನ್ನು ಬೆಬೆಲ್ ಇಪ್ಪತ್ತಮೂರು ಅಧ್ಯಾಯಗಳಲ್ಲಿ ಆಧಾರಸಹಿತವಾಗಿ ಕಟ್ಟಿಕೊಡುತ್ತಾರೆ. ಪ್ರತಿಯೊಂದು ದೇಶದಲ್ಲೂ ಆದಿಕಾಲದ ಸಮಾಜ ಮಾತೃ ಪ್ರಧಾನವಾಗಿತ್ತು ಎಂದು ಮಾನವಶಾಸ್ತ್ರ ಹಾಗೂ ಸಮಾಜಶಾಸ್ತ್ರ ಹೇಳುತ್ತವೆ. ಆದರೆ ಇಂದಿಗೂ, ನಮ್ಮ ವಿಶ್ವವಿದ್ಯಾಲಯಗಳಲ್ಲೂ ಈ ವಿಷಯದ ಬಗ್ಗೆ ಸರಿಯಾದ ತಿಳುವಳಿಕೆಯ ಕೊರತೆ ಕಂಡುಬರುತ್ತದೆ.

ಸಾವಿರಾರು ವರ್ಷಗಳ ಹಿಂದೆ ಮಹಿಳೆಯರ ಸ್ಥಿತಿ ಹೇಗಿದ್ದಿರಬಹುದು ಎಂಬುದನ್ನು ಹಲವು ಆಕರಗಳ ಮೂಲಕ ಕಂಡುಕೊಳ್ಳಬಹುದು. ಬಾಕೊಫೆನ್, ತಮ್ಮ ಸಂಶೋಧನೆಗೆ ಯೂರೋಪಿನ ಪ್ರಾಚೀನ ಧರ್ಮಗ್ರಂಥಗಳು, ಪುರಾಣಗಳು ಹಾಗೂ ಮಹಾಕಾವ್ಯಗಳನ್ನು ಆರಿಸಿಕೊಂಡರು. ಅವುಗಳಲ್ಲಿ ಕಂಡುಬರುವ ಧಾರ್ಮಿಕ ಆಚರಣೆಗಳು, ಗಂಡು ಹೆಣ್ಣಿನ ಸಂಬಂಧಗಳು, ಲೈಂಗಿಕ ಕಟ್ಟುಪಾಡುಗಳನ್ನು ವಿಶ್ಲೇಷಿಸಿ ಆ ಸಮಾಜದಲ್ಲಿ ಹೆಣ್ಣಿನ ಸ್ಥಾನ ಹೇಗಿದ್ದಿರಬಹುದು ಎಂಬುದನ್ನು ತೀರ್ಮಾನಿಸಿದರು. ಬೆಬೆಲ್ ಅದನ್ನು ವಿಸ್ತರಿಸಿ ಮನು ಮತ್ತು ಭಾರತದ ಸಂಪ್ರದಾಯಗಳು, ಕ್ರೈಸ್ತ ಧರ್ಮದ ಸಂಪ್ರದಾಯಗಳು, ಯಹೂದಿಗಳ ಆಚರಣೆಗಳು, ಗ್ರೀಕರ ನಂಬಿಕೆ, ನಡಾವಳಿಗಳು, ಚೀನಿಯರು, ಆಫ್ರಿಕನ್ನರು, ಈಜಿಪ್ಟ, ಬ್ಯಾಬಿಲೋನಿಯರು ಹೀಗೆ ಅನೇಕ ದೇಶಗಳ ಸಂಪ್ರದಾಯಗಳನ್ನು ವಿಶ್ಲೇಷಿಸಿದ್ದಾರೆ. ತಮ್ಮ ಹಿಂದಿನ ಚಿಂತಕರ ತೀರ್ಮಾನಗಳನ್ನು ಗಟ್ಟಿಗೊಳಿಸಿದ್ದಾರೆ.

ಮಾರ್ಗನ್ ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ಅಮೆರಿಕಾದ 'ಇರಾಕೆಸ್' ಎಂಬ ರೆಡ್ ಇಂಡಿಯನ್ ಬುಡಕಟ್ಟು ಜನರ ಮಧ್ಯೆ ಜೀವಿಸಿದ್ದು, ಅವರ ಜೀವನ ಕ್ರಮವನ್ನು ಅಧ್ಯಯನ ಮಾಡಿದರು. ಪಳೆಯುಳಿಕೆಗಳ ಅಧ್ಯಯನದಿಂದ ಡಾರ್ವಿನ್ ಹೇಗೆ ಜೀವವಿಕಾಸ ಸಿದ್ಧಾಂತವನ್ನು ಕಂಡುಹಿಡಿದರೋ ಹಾಗೆಯೇ ಬುಡಕಟ್ಟು ಜನರ ಅಧ್ಯಯನದಿಂದ ಮಾರ್ಗನ್ ಕುಟುಂಬ ವಿಕಾಸವಾದ ಕ್ರಮವನ್ನು ಕಂಡುಹಿಡಿದರು. ಆ ಮೂಲಕ ಕುಟುಂಬ ವ್ಯವಸ್ಥೆ ಹಾಗೂ ಅದರಲ್ಲಿ ಆಗುತ್ತಿರುವ ಬದಲಾವಣೆಗಳು ಹಾಗೂ ಅದರ ಪ್ರೇರಕ ಕಾರಣಗಳನ್ನು ಕಂಡುಹಿಡಿದರು.

**ಡಾ॥ ಎಚ್. ಜಿ. ಜಯಲಕ್ಷ್ಮಿ**

ಆದಿಮ ಸಮಾಜವು ಬುಡಕಟ್ಟುಗಳಿಂದ ಕೂಡಿತ್ತು. ಮಾತೃ ಪ್ರಧಾನವಾಗಿತ್ತು. ಹುಟ್ಟುವ ಮಕ್ಕಳು ತಾಯಿಯನ್ನು ಮಾತ್ರ ಗುರುತಿಸಬಲ್ಲವ ರಾಗಿದ್ದರು. ತಾಯಿ ಅವರನ್ನು ಸಾಕಿ ಸಲಹುವ ಶಕ್ತಿಯಾಗಿದ್ದಳು. ಸಹಜವಾಗಿಯೇ ಆ ಸಮಾಜ ತಾಯಿಗೆ ಎತ್ತರದ ಸ್ಥಾನವನ್ನು ನೀಡಿತ್ತು. ಮಕ್ಕಳು ತಾಯಿಯ ವಂಶಕ್ಕೆ ಸೇರುತ್ತಿದ್ದರು. ಒಬ್ಬ ತಾಯಿಯ ವಂಶಜರೆಲ್ಲಾ ಒಂದು ಗೋತ್ರಕ್ಕೆ ಸೇರಿದವ ರಾಗುತ್ತಿದ್ದರು. ಇಲ್ಲಿ ಚಾಲ್ತಿಯಲ್ಲಿದ್ದದ್ದು ಗುಂಪು ವಿವಾಹ ಪದ್ಧತಿ.

ಗುಂಪು ವಿವಾಹದಿಂದ ಪುನಾಲು ಆನ್ (ಪ್ರೀತಿಯ ಒಡನಾಡಿ) ಕುಟುಂಬ ಪದ್ಧತಿ ಬೆಳವಣಿಗೆ ಹೊಂದಿತು. ಅದಕ್ಕೆ ಮುಖ್ಯ ಕಾರಣ ಹುಟ್ಟುವ ಮಕ್ಕಳಲ್ಲಿ ಅನೇಕರು ಆರೋಗ್ಯವಂತರಾಗಿ ಇರುತ್ತಿರಲಿಲ್ಲ. ಹತ್ತಿರದ ರಕ್ತಸಂಬಂಧಿಗಳ ಮಧ್ಯದ ಲೈಂಗಿಕ ಸಂಬಂಧವು ಅದಕ್ಕೆ ಕಾರಣವಿರಬಹುದು ಎಂಬುದನ್ನು ಪ್ರಾಣಿಗಳ ಸಂತಾನಾಭಿವೃದ್ಧಿಯನ್ನು ಗಮನಿಸಿ ಕಂಡುಕೊಂಡಿರಬೇಕು.

ಆರೋಗ್ಯವಂತ ಪೀಳಿಗೆ ಹುಟ್ಟಬೇಕು ಎನ್ನುವ ಕಾರಣಕ್ಕೆ ಹತ್ತಿರದ ಸಂಬಂಧಿಗಳಲ್ಲದೆ, ದೂರದ ಸಂಬಂಧಗಳವರೆಗೂ ವಿವಾಹವನ್ನು ನಿಷೇಧಿಸುತ್ತಾ ಹೋದ ಕಾರಣದಿಂದ ಒಬ್ಬ ಗಂಡಸು ಒಬ್ಬ ಹೆಂಗಸನ್ನು ಮಾತ್ರ ಮದುವೆಯಾಗಬಹುದು ಎನ್ನುವ ಯುಗ್ಮ ಪದ್ಧತಿಯು ಬೆಳೆಯಿತು. ಇದನ್ನು ಗಂಡನಾಗಲೀ, ಹೆಂಡತಿಯಾಗಲೀ ವಿಸರ್ಜಿಸ ಬಹುದಾಗಿತ್ತು. ಈ ಹಂತದಲ್ಲಿ ಸಹಜ ತಾಯಿಯ ಜೊತೆಯಲ್ಲಿ ಸಹಜ ತಂದೆ ಇರುವುದನ್ನು ಮಕ್ಕಳು ಕಾಣತೊಡಗಿದ್ದರು. ಕುಟುಂಬ ಪದ್ಧತಿ ವಿಕಸನ ಹೊಂದಿದ್ದು ಹೀಗೆ ಎನ್ನುವ ಸತ್ಯವನ್ನು ಮಾರ್ಗನ್‌ರವರ ಸಂಶೋಧನೆಯನ್ನು ಆಧರಿಸಿ, ಎಂಗೆಲ್ಸ್ ತೋರಿಸಿಕೊಟ್ಟರು. ಇದನ್ನೇ ಬೆಬೆಲ್ ಹಲವಾರು

ನಿದರ್ಶನಗಳ ಮೂಲಕ ವಿಶದಪಡಿಸುತ್ತಾರೆ.

ಬಹಳ ಕಾಲದವರೆಗೂ ಮಾನವ ಸಮಾಜ ನಿಸರ್ಗದಲ್ಲಿ ಲಭ್ಯವಿದ್ದ ಆಹಾರವನ್ನು ಬಳಸುತ್ತಿದ್ದ ಅತಿ ಕೆಳಗಿನ ಹಂತವಾದ ಕಿರಾತಾವಸ್ಥೆಯಲ್ಲಿತ್ತು. ನಂತರ ಬೇಸಾಯ, ಪಶುಸಂಗೋಪನೆಗಳನ್ನು ಕಂಡುಕೊಂಡು ಅನಾಗರಿಕಾವಸ್ಥೆಯನ್ನು ದಾಟಿ ಇನ್ನು ಮುಂದಿನ ಹಂತವಾದ ನಾಗರಿಕಾವಸ್ಥೆಗೆ ಕಾಲಿಟ್ಟಿತು ಎಂದು ತೋರಿಸುತ್ತಾರೆ. ಎಂದರೆ ಅದು ಸಮಾಜದಲ್ಲಿ ಖಾಸಗಿ ಆಸ್ತಿ ಬೆಳೆದುಬಂದ ನಂತರದ ಹಂತ.




ಆಹಾರವನ್ನರಸುತ್ತಾ ಕಾಡುಮೇಡುಗಳಲ್ಲಿ ಅಲೆಯುತ್ತಿದ್ದ ಬುಡಕಟ್ಟುಗಳ ಜನ ಪಶುಸಂಗೋಪನೆ, ಕೃಷಿ ವಿಧಾನ ಗಳನ್ನು ಕಲಿತರೆ, ಕೃಷಿಯನ್ನು ಕೈತೋಟದ ಮೂಲಕ ಕಂಡುಹಿಡಿದದ್ದು ಮಹಿಳೆ ಎನ್ನುವುದು ಗಮನಿಸಬೇಕಾದ ಮುಖ್ಯ ವಿಷಯ. ನೇಯ್ಗೆ, ಮನೆಕಟ್ಟುವುದು, ಕುಂಬಾರಿಕೆ ಮುಂತಾದವುಗಳನ್ನು ಕಂಡುಹಿಡಿದ ಜಾಣ್ಮೆಯೂ ಮಹಿಳೆಯರದ್ದು. ಆದರೆ ಬೃಹತ್ ಪ್ರಮಾಣದ ಕೃಷಿ ಆರಂಭವಾದಾಗ ಗಂಡಸು ಉತ್ಪಾದನಾ ಸಾಮಗ್ರಿಗಳ ಮೇಲೆ ಹತೋಟಿ ಹೊಂದುತ್ತಾನೆ. ಗಂಡಸಿನ ಕೈಲಿ ಸಂಪನ್ಮೂಲಗಳು ಶೇಖರಣೆಯಾಗುತ್ತಿದ್ದಂತೆ ಅದನ್ನು ತನ್ನ ಸ್ವಂತ ಮಕ್ಕಳಿಗೆ ಕೊಟ್ಟು ಹೋಗಬೇಕೆಂಬ ಪ್ರವೃತ್ತಿ ಉಂಟಾಯಿತು. ಅದರಿಂದಾಗಿ ತನ್ನ ಮಕ್ಕಳನ್ನು ಗುರುತಿಸಲು ಒಂದು ಹೆಣ್ಣನ್ನು ತನಗೆ ಮಾತ್ರ ಮೀಸಲು ಎಂದು ಮಾಡಿಕೊಳ್ಳಲು ಏಕಪತ್ನಿ ಪದ್ಧತಿಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲಾಯಿತು. ಹೆಣ್ಣನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಪ್ರಕ್ರಿಯೆ ಮೊದಲಿಟ್ಟಿತು. ಇದನ್ನು ಬೆಬೆಲ್ ಮನುವನ್ನೂ ಉಲ್ಲೇಖಿಸಿ ತೋರಿಸುತ್ತಾರೆ. ಬೈಬಲ್‌ನಿಂದ ಹಲವಾರು ಪ್ರಸಂಗಗಳನ್ನು ದಾಖಲಿಸುತ್ತಾರೆ.

ಯಾವುದನ್ನು ಸಮಾಜದ ನಾಗರಿಕಾವಸ್ಥೆ ಎಂದು ಕರೆಯುತ್ತಾರೋ ಆ ಹಂತದಲ್ಲಿ ಖಾಸಗಿ ಆಸ್ತಿಯ ಕಾರಣದಿಂದಾಗಿ ಸಮಾಜವು ಎರಡು ವರ್ಗಗಳಾಗಿ – ಆಸ್ತಿವಂತ ಹಾಗೂ ಆಸ್ತಿಹೀನ ಎಂದು ಒಡೆದು ಗುಲಾಮಗಿರಿ ಪದ್ಧತಿ ಜಾರಿಗೆ ಬಂದಿದ್ದನ್ನು ಬೆಬೆಲ್ ಗುರುತಿಸುತ್ತಾರೆ. ಅಲ್ಲಿ ಹೆಂಗಸು ಗೃಹ ಗುಲಾಮಳಾಗಿದ್ದನ್ನು ದಾಖಲಿಸುತ್ತಾರೆ. ಗ್ರೀಕ್ ಪುರಾಣಗಳಲ್ಲಿ ಇದಕ್ಕೆ ಯಥೇಚ್ಛ ಪುರಾವೆಗಳು ದೊರೆಯುತ್ತವೆ ಎಂದು ಉಲ್ಲೇಖಿಸುತ್ತಾರೆ.

ಗುಲಾಮ ಪದ್ಧತಿಯ ಮೂಲಕ ಹಾದು ಹೋಗುತ್ತಿದ್ದ ರೋಮ್ ಸಾಮ್ರಾಜ್ಯದಲ್ಲಿ ಒಂದು ಕಡೆಯಲ್ಲಿ ವಿಷಯ ಲೋಲುಪರಾದ ಅತೀ ಶ್ರೀಮಂತರಾದ, ಗುಲಾಮರ ಒಡೆಯರಿದ್ದರು ಹಾಗೂ ಇನ್ನೊಂದು ಕಡೆ ಬೇರೆಬೇರೆ ದೇಶಗಳ ಮೇಲೆ ಯುದ್ಧ ಮಾಡಿ ಸೆರೆಹಿಡಿದು ತಂದ ಸಹಸ್ರಾರು ಗುಲಾಮರು ಪ್ರಾಣಿಗಳ ಮಟ್ಟದಲ್ಲಿ ಬದುಕಿದ್ದರು. ಹೋವಾರ್ಡ್ ಫಾಸ್ಟ್‌ರವರ 'ಸ್ಪಾರ್ಟಕಸ್' ಕಾದಂಬರಿ ಈ ಪರಿಸ್ಥಿತಿಯನ್ನು ಅದ್ಭುತವಾಗಿ ಚಿತ್ರಿಸಿದೆ. ಗುಲಾಮ ಪದ್ಧತಿಯಲ್ಲಿ ಮಹಿಳೆಯರ ಸ್ಥಿತಿ ಹೀನಾಯವಾಗಿತ್ತು. ಗುಲಾಮರೊಡೆಯರು ಮದುವೆಯಾದ ಹೆಂಡತಿಯ ರೊಂದಿಗೆ ನೂರಾರು ಗುಲಾಮ ಹೆಂಗಸರನ್ನು ಹೊಂದಿರುತ್ತಿದ್ದರು. ಇತಿಹಾಸದಲ್ಲಿ ಪ್ರಖ್ಯಾತನಾದ ದೊರೆ ಸಾಲೊಮನ್ ಏಳು ನೂರು ಹೆಂಡತಿಯರು ಹಾಗೂ ಮುನ್ನೂರು ಉಪ ಪತ್ನಿಯರನ್ನು ಹೊಂದಿದ್ದನು. ಅಂದಿನ ಶ್ರೀಮಂತ ರೋಮನ್ನರು ಮೂರು ರೀತಿಯ ಹೆಂಗಸರನ್ನು ಹೊಂದಿರುತ್ತಿದ್ದರು. ತನ್ನದೇ ಆದ ಮಕ್ಕಳನ್ನು ಹುಟ್ಟಿಸಲು ಹೆಂಡತಿಯರು, ಸೇವೆ ಮಾಡಲು ಗುಲಾಮ ಹೆಂಗಸರು, ಅವರ ತೀರದ ಲೈಂಗಿಕ ಹಸಿವನ್ನು ತೀರಿಸಲು ವೇಶ್ಯೆಯರು ಎಂಬುದನ್ನು ಬೆಬೆಲ್ ದಾಖಲಿಸುತ್ತಾರೆ.

ತನ್ನ ಆಂತರಿಕ ದ್ವಂದ್ವಗಳಿಂದ ಗುಲಾಮ ವ್ಯವಸ್ಥೆಯು ಕುಸಿದುಹೋಯಿತು. ಗುಲಾಮ ಪದ್ಧತಿಯಿಂದ ಹೊರಬಂದ ನಂತರದ ಊಳಿಗಮಾನ್ಯ ಸಮಾಜದಲ್ಲೂ ಮಹಿಳೆಯರ ಪರಿಸ್ಥಿತಿಯೇನೂ ಸುಧಾರಿಸಲಿಲ್ಲ. ಗುಲಾಮರ ವಿಷಯದಲ್ಲಿ ಸಹಾನುಭೂತಿಯಿಂದ ನಡೆದುಕೊಂಡ ಕ್ರೈಸ್ತ ಧರ್ಮವು ಮಹಿಳೆಯರ ವಿಷಯದಲ್ಲಿ ಕಠೋರವಾಗಿಯೇ ಇತ್ತು. ಎಲ್ಲ ಧರ್ಮಗಳು ಹಾಗೆಯೇ. ಅವಳು ಗಂಡಸಿನ ಅಧೀನಳು, ಗಂಡ ಹೇಳಿದಂತೆ ಕೇಳಿಕೊಂಡಿರುವುದೇ ಅವಳಿಗೆ ಶ್ರೇಯಸ್ಕರ ಎಂಬ ಅಭಿಪ್ರಾಯ ಚಾಲ್ತಿಯಲ್ಲಿತ್ತು ಎನ್ನುವುದನ್ನು ಮನು, ಅರಿಸ್ಟಾಟಲ್‌ರನ್ನು ಉಲ್ಲೇಖಿಸುತ್ತಾ ಬೆಬೆಲ್ ತೋರಿಸುತ್ತಾರೆ.

ಊಳಿಗಮಾನ್ಯ ವ್ಯವಸ್ಥೆಯು ಜಡಗೊಂಡಂಥ ಮಧ್ಯಯುಗದಲ್ಲಿ ಮಹಿಳೆಯರ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಿತು. ವೇಶ್ಯಾವೃತ್ತಿ, ಬಹುಪತ್ನಿತ್ವ, ಉಪಪತ್ನಿತ್ವಗಳ ಹಾವಳಿ ಹೆಚ್ಚಾಯಿತು. ದೇವಸ್ಥಾನಗಳು, ಚರ್ಚುಗಳು, ಇತರ ಧರ್ಮಮಂದಿರಗಳು ಪಾಪಕೂಪ ಗಳಾದವು. ಗಂಡಸರಲ್ಲಿ ವಿಕೃತ ಲೈಂಗಿಕತೆಗಳು ಕಂಡುಬಂದಂತೆ ಅವು ಮಹಿಳೆಯರನ್ನು ವಿಕೃತಿಗಳೆಡೆಗೆ ತಳ್ಳಿತು ಎಂದು ಬೆಬೆಲ್ ಗುರುತಿಸುತ್ತಾರೆ.

ಊಳಿಗಮಾನ್ಯ ಪದ್ಧತಿಯ ವಿರುದ್ಧ ಕ್ರಾಂತಿಯಾಗಿ ಬಂಡವಾಳಶಾಹಿ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿದೆ. ಇಂದಿನ ಕೈಗಾರಿಕಾ ಯುಗದಲ್ಲಿ ಕೇವಲ ಗಂಡನ ಸಂಬಳದಿಂದ ಸಂಸಾರ ನಡೆಸಲು ಅಸಾಧ್ಯವಾದುದರಿಂದ, ಮಹಿಳೆಯರು ಗೃಹ–ಗುಲಾಮಗಿರಿಯ ಜೊತೆಜೊತೆಗೆ, ಕೂಲಿ ಕಾರ್ಮಿಕ ರಾಗಿಯೂ ದುಡಿಯುವ ಸ್ಥಿತಿ ಏರ್ಪಟ್ಟಿದೆ. ಆದರೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಉತ್ಪಾದನೆ ಲಾಭದ ಉದ್ದೇಶ ಹೊಂದಿರುತ್ತದೆ. ಇದರ ಫಲಶ್ರುತಿಯೆಂದರೆ ಸಂಪತ್ತಿನ ಕ್ರೋಡೀಕರಣ ಒಂದೆಡೆ ಹಾಗೂ ನಿರ್ಗತಿಕತನ ಇನ್ನೊಂದೆಡೆ ಹೆಚ್ಚುತ್ತದೆ. ಕೊಳ್ಳುವ ಸಾಮರ್ಥ್ಯ ಜನಸಾಮಾನ್ಯರಲ್ಲಿ ಕಡಿಮೆಯಾಗುತ್ತಲೇ ಹೋಗುತ್ತದೆ. ಉತ್ಪಾದಿತ ವಸ್ತುಗಳು ಮಾರಾಟವಾಗದೆ ಪದೇಪದೇ ಮಾರುಕಟ್ಟೆ ಬಿಕ್ಕಟ್ಟು ಉಂಟಾಗುತ್ತದೆ. ಇದರ ಪರಿಣಾಮವಾಗಿ ನಿರುದ್ಯೋಗ, ಹಣದುಬ್ಬರ, ಬೆಲೆ ಏರಿಕೆ ಕಾಣಿಸಿಕೊಳ್ಳುತ್ತವೆ. ಇದರ ಬಿಸಿ ತಾಗುವುದು ಮಹಿಳೆಗೇ ಹೆಚ್ಚು. ಜೊತೆಗೆ ಕೆಲಸಕ್ಕೆ ತಕ್ಕ ಸಂಬಳ ಇಲ್ಲದೆ, ಕೆಲಸದ ಭದ್ರತೆ ಇಲ್ಲದೆ ಮಹಿಳೆ ತೀವ್ರವಾದ ಶೋಷಣೆಯನ್ನು ಎದುರಿಸುತ್ತಿದ್ದಾಳೆ.

ಕೌಟುಂಬಿಕ ಕ್ಷೇತ್ರದಲ್ಲೂ, ಭಾವನಾತ್ಮಕ ಸಂಬಂಧಗಳಲ್ಲೂ ಹೆಣ್ಣು ನಲುಗಿ ಹೋಗುತ್ತಿದ್ದಾಳೆ. ಪ್ರೀತಿ ಗೌರವಗಳಲ್ಲದೆ ಇತರ ಕ್ಷುದ್ರ ವ್ಯಾವಹಾರಿಕ ಲೆಕ್ಕಾಚಾರಗಳು ಮದುವೆಗೆ ಕಾರಣವಾಗುತ್ತಿದ್ದು, ಗಂಡ–ಹೆಂಡತಿಯ ಸಂಬಂಧ ಅಶಾಂತಿಯನ್ನು, ಜಗಳಗಳನ್ನು ಹುಟ್ಟುಹಾಕುತ್ತಿದೆ. ಹೀಗಾಗಿಯೇ ಮದುವೆಗಳು ಮುರಿದುಬೀಳುತ್ತಿವೆ. ಬಡತನದಿಂದಾಗಿ ಎಷ್ಟೋ ಹೆಣ್ಣುಮಕ್ಕಳಿಗೆ ಮದುವೆಯೇ ಅಸಾಧ್ಯವಾಗುತ್ತಿದೆ. ಈ ಇಡೀ ವಿದ್ಯಮಾನವನ್ನು ಬೆಬೆಲ್ ವಿವಿಧ ಉದಾಹರಣೆಗಳೊಂದಿಗೆ ಕಟ್ಟಿಕೊಡುತ್ತಾರೆ.

ಇಂದಿನ ಬಂಡವಾಳಶಾಹಿ ಸಮಾಜದಲ್ಲಿ ಹೆಣ್ಣು ಶಿಕ್ಷಣ, ಆರೋಗ್ಯದ ಸೌಲಭ್ಯಗಳನ್ನು ಪಡೆದುಕೊಳ್ಳಲು ಬಹಳಷ್ಟು ಬಡಿದಾಡಬೇಕಾಗಿದೆ. ಕಾನೂನುಗಳೂ ಸಹ ಉಳ್ಳವರು ಹಾಗೂ ಗಂಡಸರ ಪರವಾಗಿದ್ದು ಹೆಣ್ಣಿನ ಹಕ್ಕುಗಳನ್ನು ಎತ್ತಿಹಿಡಿಯುತ್ತಿಲ್ಲ ಎಂಬ ಸತ್ಯವನ್ನು ಸಹ ಬೆಬೆಲ್ ಹೊರಗೆಡಹುತ್ತಾರೆ.

ಇದಕ್ಕೆ ಪರಿಹಾರವೆಂದರೆ, ಶ್ರಮಜೀವಿಗಳು ನಡೆಸುವ ಶೋಷಣೆಯ ವಿರುದ್ಧದ ಹೋರಾಟದಲ್ಲಿ ತಮ್ಮ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳಲು ಮಹಿಳೆಯರು ತಾವೂ ಭಾಗಿಯಾಗಿ ಈ ವ್ಯವಸ್ಥೆಯನ್ನು ಬದಲಾಯಿಸಬೇಕು. ಮುಂದೆ ಬರುವ ಸಮಾಜವಾದಿ ಸಮಾಜದಲ್ಲಿ ಮಾತ್ರ ಮಹಿಳೆಯನ್ನು ನಿಜವಾಗಿಯೂ ಒಬ್ಬ ವ್ಯಕ್ತಿಯಾಗಿ ಗೌರವಿಸಲು ಸಾಧ್ಯವಾಗುತ್ತದೆ. ಏಕೆಂದರೆ ಅವಳೂ ಸಹ ಪುರುಷರೊಂದಿಗೆ ಸಮಸಮವಾಗಿ ಉತ್ಪಾದನೆಯಲ್ಲಿ ತೊಡಗಿಕೊಳ್ಳುತ್ತಾಳೆ. ಗೃಹಕೃತ್ಯದ ಜವಾಬ್ದಾರಿಯನ್ನು ಸಮಾಜವೇ ವಹಿಸಿಕೊಳ್ಳುವುದರಿಂದ ಅವಳು ಪಾಶವೀ ದುಡಿತದಿಂದ ಹೊರಬಂದು ಬೌದ್ಧಿಕವಾಗಿಯೂ ಎತ್ತರ ಎತ್ತರವಾಗಿ ಬೆಳೆಯುತ್ತಾ ಹೋಗುತ್ತಾಳೆ ಎಂಬ ಮುಂಗಾಣ್ಕೆಯನ್ನು ಬೆಬೆಲ್ ತೋರುತ್ತಾರೆ. ಮತ್ತು ಸಮಾಜದಲ್ಲಿ ಆಗಿಹೋಗಿರುವ ಎಲ್ಲಾ ಬೆಳವಣಿಗೆಗಳೂ, ಬದಲಾವಣೆಗಳೂ ಮೂಡಿಬಂದದ್ದು ಉತ್ಪಾದನಾ ವಿಧಾನ ಕ್ರಮದಲ್ಲಾದ ಬೆಳವಣಿಗೆಗಳಿಂದಲೇ ಎನ್ನುವುದನ್ನು ಪ್ರತಿಪಾದಿಸುತ್ತಾರೆ.

ಬೆಬೆಲ್‌ರ ಈ ಕೃತಿ ಮಹಿಳಾ ಹೋರಾಟಗಾರರು ಅವಶ್ಯವಾಗಿ ಓದಲೇ ಬೇಕಾದಂತಹದ್ದು. ಹೋರಾಟಕ್ಕೆ ಬೇಕಾದಂತಹ ಸೈದ್ಧಾಂತಿಕ ತಿಳುವಳಿಕೆ, ಮಾಹಿತಿ, ಅಧ್ಯಯನ ಕ್ರಮ, ಜೊತೆಗೆ ಹೋರಾಟದ ಕೆಚ್ಚು – ಎಲ್ಲವನ್ನೂ ತುಂಬುವ ಸಾಮರ್ಥ್ಯವನ್ನು ಹೊಂದಿರುವ ಬರವಣಿಗೆ ಇದು. ಇದು ಖಂಡಿತವಾಗಿಯೂ ಕನ್ನಡಕ್ಕೆ ಭಾಷಾಂತರವಾಗಬೇಕಾದ ಬಹು ಮೌಲಿಕವಾದ ಕೃತಿ.

**ಡಾ॥ ಎಚ್. ಜಿ. ಜಯಲಕ್ಷ್ಮಿ**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಬೆಂಗಳೂರು – ೫೬೦ ೦೫೦

# ಮಿಶ್ರ ಪ್ರತಿಕ್ರಿಯೆ ಮೂಡಿಸಿದ ತಮಿಳು ಚಲನಚಿತ್ರ

# ಅರುವಿ

**ಕೊಳಲೂರು ರಾಧೇಯ**

ಡಿಸೆಂಬರ್–೨೦೧೭ರ ಅಂತ್ಯದಲ್ಲಿ ತೆರೆಕಂಡ ಈ ಚಲನಚಿತ್ರದ ಮೂರು ಪೋಸ್ಟರ್‌ಗಳನ್ನು ಕಂಡಾಗ ಇವು ಭಿನ್ನವಾಗಿವೆಯಲ್ಲ ಎಂದೆನಿಸಿತು. ಆಡಿಯೊ ಮತ್ತು ಟೀಸರ್ ಪೋಸ್ಟರ್‌ನಲ್ಲಿ ಒಬ್ಬ ಕಿರೀಟಧಾರಿ ಮಹಿಳೆಯ ಕೈಗಳಲ್ಲಿ ಒಂದು ದೊಡ್ಡ ಗನ್ ಇರುವಂತೆ ಬಿಂಬಿಸಲಾಗಿತ್ತು. ಇದು ರಾಜಾ ರವಿವರ್ಮನ ವೀಣಾಪಾಣಿ ಸರಸ್ವತಿಯ ವರ್ಣ ಚಿತ್ರವನ್ನು ನೆನಪಿಸಿತು. ಇನ್ನೊಂದು ಪೋಸ್ಟರ್‌ನಲ್ಲಿ ಮಹಿಳೆಯೊಬ್ಬಳ ಕಂಗಳನ್ನು ಪ್ರಧಾನವಾಗಿ ಅಭಿವ್ಯಕ್ತಿಗೊಳಿಸಲಾಗಿತ್ತು. ಇವು 'ಅರುವಿ' ಚಲನಚಿತ್ರದಲ್ಲಿ ಮಹಿಳಾ ಪಾತ್ರವೊಂದರ ಪೋಷಣೆಯೇ ಪ್ರಧಾನ ಅಂಶವೆಂದು ಸಾರಿ ಹೇಳುತ್ತಿದ್ದವು !

ಇರಲಿ... ಚಲನಚಿತ್ರದ ಪ್ರಾರಂಭದ ದೃಶ್ಯದಲ್ಲಿ ಗಾಯಗೊಂಡ ಹಾಗೂ ರಕ್ತ ಒಸರುತ್ತಿರುವ ಒಬ್ಬ ಯುವತಿ (ಅರುವಿ–ನಟಿ ಅದಿತಿ ಬಾಲನ್)ಯನ್ನು ಪೊಲೀಸ್ ಅಧಿಕಾರಿ ಶಕೀಲ್ (ನಟ ಮೊಹಮ್ಮದ್ ಅಲಿಬೇಗ್) ವಿಚಾರಣೆಗೆ ಒಳಪಡಿಸುತ್ತಾನೆ. ಆಕೆ ಒಬ್ಬ ಭಯೋತ್ಪಾದಕಿ ಆಗಿರಬಹುದೆಂದು ಆತ ಶಂಕಿಸುತ್ತಾನೆ. ಹಾಗೆಯೇ ಟಿ. ವಿ. ಚ್ಯಾನೆಲ್‌ಗಳೂ ಸಹ ಆಕೆ ಟೆರರಿಸ್ಟಾ? ನಕ್ಸಲೈಟಾ? ಎಂದು ಪ್ರಶ್ನಿಸುತ್ತ ವೀಕ್ಷಕರನ್ನು ಕುತೂಹಲದ ತೆಕ್ಕೆಗೆ ತಳ್ಳುತ್ತವೆ. ಮಾಧ್ಯಮದಲ್ಲಿ, ಇತ್ತೀಚಿನ ದಶಕಗಳಲ್ಲಿ, ಇಂತಹ ಚಿತ್ರಣ ಸರ್ವೇಸಾಮಾನ್ಯವಾಗಿದೆ!

ನಂತರ ಅರುವಿಯ ತಂದೆ–ತಾಯಿ, ಸ್ನೇಹಿತರನ್ನು ವಿಚಾರಣೆಗೆ ಒಳಪಡಿಸಲಾಗುತ್ತದೆ. ಇದರ ಮೂಲಕವೇ ಸುಮಾರು ಇಪ್ಪತ್ತಾಲ್ಕು ವರ್ಷದ ಯುವತಿ ಅರುವಿಯ ಪಾತ್ರ ಅನಾವರಣಗೊಳ್ಳುತ್ತ ಸಾಗುತ್ತದೆ. ಆಕೆ ತನ್ನ ಬಾಲ್ಯದಲ್ಲಿ ಹಾಗೂ ನಂತರ ತನ್ನ ಯೌವನಾವಸ್ಥೆಯಲ್ಲಿ ಚಿಟ್ಟೆಯಂತೆ ಇರುತ್ತಾಳೆ. ಆಕೆ ದಾಳಿಂಬೆಯನ್ನು ಇಷ್ಟಪಡುತ್ತಾಳೆ; ಕ್ಲಾಸಿಕಲ್ ಸಾಹಿತ್ಯವನ್ನು ಓದುತ್ತಾಳೆ; ತನ್ನ ಅಜ್ಜನ ಎರಡನೇ ವಿಶ್ವಸಮರದ ಕಾಲದ ಪಿಸ್ತೂಲಿನ ಬಗೆಗೆ ಹೆಮ್ಮೆಪಡುತ್ತಾಳೆ, ಜಲಪಾತದ ಸನಿಹದಲ್ಲಿ ಕುಣಿದಾಡುತ್ತಾಳೆ. ಒಟ್ಟಿನಲ್ಲಿ ಚಿನಕುರುಳಿಯಂತೆ ಇರುತ್ತಾಳೆ. ಒಮ್ಮೆ ಆಕೆಯ ಸಹಪಾಠಿಯೊಬ್ಬಳು ಸ್ಯಾನಿಟರಿ ನ್ಯಾಪ್‌ಕಿನ್‌ನನ್ನು ನೀಡು ಎಂದು ವಿನಂತಿಸುವಾಗ, ನಿರಾಕರಿಸುತ್ತಾಳೆ. ಹೀಗೆ... ಈ ಪಾತ್ರದ ಕಟ್ಟುವಿಕೆಯಲ್ಲಿ ಕಂದು ಬಣ್ಣವೂ ಇದೆ. ಸುಮಾರು ೨೦–೨೫ ನಿಮಿಷಗಳಲ್ಲಿ ಮಾಂಟಾಷ್‌ಗಳ ಮೂಲಕ ಅರುವಿಯ ಬಾಲ್ಯ ಹಾಗೂ ಕಿಶೋರಾವಸ್ಥೆಯ ಝಳಕ್‌ಗಳನ್ನು ಕಟ್ಟಿಕೊಡಲಾಗಿದೆ. ಇಲ್ಲಿ ಸಂಕಲನಾಕಾರನ ಕೈಚಳಕ ಎದ್ದುಕಾಣುತ್ತದೆ.

ಅಪ್ಪನ ಮಗಳಾಗಿರುವ ಅರುವಿಗೆ ಆತ ಧೂಮಪಾನ ಮಾಡುವುದು ಇಷ್ಟವಾಗುವುದಿಲ್ಲ. ಒಮ್ಮೆ ಆತ ಹೊಗೆಯ ಸಾಮ್ರಾಜ್ಯದಲ್ಲಿ ವಿಹರಿಸುವಾಗ ಆಕೆ ತನ್ನ ಮುಖವನ್ನು ಕಿವುಚುತ್ತ "ನಾರುತ್ತದೆ" ಎಂದು ಹೇಳುತ್ತಾಳೆ. ತನಗೆ ತುಂಬ ಪ್ರಿಯಳಾಗಿರುವ ಮಗಳ ಈ ಹೇಳಿಕೆಯನ್ನು ಆಲಿಸಿದ ಆತ ತಕ್ಷಣ ಸಿಗರೇಟನ್ನು ಬಿಸಾಡುವುದಿಲ್ಲ. ಕೊನೆಯ ದಂ ಎಳೆದು ಒಗೆಯುತ್ತಾನೆ! ತರುವಾಯ ಆತ, ಅರುವಿಯಿಂದ ತೀವ್ರ ಬೇಜಾರಿನ ಪರಿಸ್ಥಿತಿಗೆ ಒಳಗಾಗುವಾಗ ಪುನಃ ಧೂಮಲೀಲೆಯಲ್ಲಿ ಮುಳುಗುತ್ತಾನೆ. ಇಂತಹ ಅನೇಕ ಕಾಡುವ ಕ್ಷಣಗಳು ಈ ಚಲನಚಿತ್ರದಲ್ಲಿವೆ. ಸಣ್ಣ ಸಣ್ಣ ಸಂಗತಿಗಳನ್ನು ಪೋಣಿಸಿ, ವೀಕ್ಷಕರಿಗೆ ದಾಟಿಸುವುದರಲ್ಲಿ ಯಶಸ್ವಿಯಾಗಿದ್ದಾರೆ ನಿರ್ದೇಶಕ ಅರುಣ್ ಪ್ರಭು ಪುರುಷೋತ್ತಮನ್ (ಇದು ಅವರ ನಿರ್ದೇಶನದ ಪ್ರಥಮ ಚಲನಚಿತ್ರ).

> **ಅರುವಿ ಎಂದರೆ ಜಲಪಾತ. ಹೆಸರಿಗೆ ಅನ್ವಯಿಸುವಂತೆ ಈ ಚಲನಚಿತ್ರದಲ್ಲಿ ಆಕೆ ಭೋರ್ಗರೆಯುತ್ತಾಳೆ. ಹಳ್ಳಕೊಳ್ಳ, ಬಂಡೆಗಳ ಮೂಲಕ ಹರಿಯುತ್ತಾಳೆ; ನವಿರಾಗಿಯೂ ಸ್ಪಂದಿಸುತ್ತಾಳೆ. ಇಲ್ಲಿ ಸಂತಸ, ಆಸೆ, ನಿರೀಕ್ಷೆ, ಪ್ರೀತಿ, ಭರವಸೆ, ನಿರಾಸೆ, ಕ್ರೌರ್ಯ ಎಲ್ಲವೂ ಮೇಳೈಸಿವೆ.**

ಗ್ರಾಮೀಣ ಪ್ರದೇಶದಿಂದ ಚೆನ್ನೈಗೆ ಸ್ಥಳಾಂತರಗೊಳ್ಳುತ್ತದೆ ಅರುವಿ ಕುಟುಂಬ. ಪ್ರಾರಂಭದಲ್ಲಿ ಆಕೆಗೆ ನಗರಜೀವನ ಹಿಡಿಸುವುದಿಲ್ಲ. ಕೆಲವು ವರ್ಷಗಳ ನಂತರ ಆಕೆ ಸಂದರ್ಭದ ಸುಳಿಯಲ್ಲಿ ಸಿಲುಕಿ ಬಾಧಿತಳಾಗುತ್ತಾಳೆ. ಅಸ್ವಸ್ಥತೆಯಿಂದ ಬಳಲುತ್ತಾಳೆ. ತಾನು ಅತೀವವಾಗಿ ಪ್ರೀತಿಸುವ ತಂದೆಯಿಂದಲೇ ಮನೆಯಿಂದ ಹೊರದೂಡಲ್ಪಡುತ್ತಾಳೆ! ಸ್ವಲ್ಪ ಸಮಯ ತನ್ನ ಕಾಲೇಜಿನ ಗೆಳತಿ ಜೆಸ್ಸಿಯ ಮನೆಯಲ್ಲಿ ಆಶ್ರಯವನ್ನು ಪಡೆಯುತ್ತಾಳೆ. ಅಲ್ಲಿಂದ ಹಾಸ್ಟೆಲ್‌ವೊಂದರಲ್ಲಿ ವಾಸ್ತವ್ಯವನ್ನು ಎಮಿಲಿ ಎಂಬ ಟ್ರಾನ್ಸ್‌ಜೆಂಡರ್ (ತೃತೀಯ ಲಿಂಗಿ) ಜೊತೆ ಹೂಡುತ್ತಾಳೆ. ಅವರಿಬ್ಬರೂ ಅರುಳ್‌ಮಣಿ ಎಂಬುವನ ಸರ್ಕಾರೇತರ ಸಂಸ್ಥೆಯಲ್ಲಿ ದರ್ಜಿಗಳಾಗಿ ದುಡಿಯುತ್ತಾರೆ. ಈ ಹಂತದಲ್ಲಿ, ಸಿಗರೇಟಿನ ವಾಸನೆಯನ್ನು ಸಹಿಸದ ಅರುವಿ



ಧೂಮಪಾನವನ್ನು ಮಾಡುತ್ತಾಳೆ; ಸ್ವಚ್ಛಂದದ ಜೀವನವನ್ನು ನಡೆಸುತ್ತಾಳೆ. ಒಂದು ದಿನ ಆಕೆ ಅಳುತ್ತ ಅರುಳ್‌ಮಣಿಯ ಬಳಿ ಸಾಗಿ ತನ್ನ ತಂದೆ ಅಸ್ವಸ್ಥನಾಗಿರುವುದರಿಂದ ರೂ. ಒಂದು ಲಕ್ಷ ಸಾಲವನ್ನು ನೀಡಬೇಕೆಂದು ಕೇಳಿಕೊಳ್ಳುತ್ತಾಳೆ. ತರುವಾಯ ಆಕೆ ಕೆಲಸವನ್ನು ತೊರೆದು ಸ್ವಾಮೀಜಿಯೊಬ್ಬನ ಬಳಿ ಸ್ಪರ್ಶ ಥೆರಪಿಯನ್ನು ಪಡೆಯುತ್ತಾಳೆ. ಆತ ಒತ್ತಡದ ನಿವಾರಣೆಗಾಗಿ ಹಿಪ್ನಾಸಿಸ್ ಬಳಸುತ್ತಾನೆ.

ಹೀಗಿರುವಾಗ, ಎಮಿಲಿ (ನಟಿ ಅಂಜಲಿ ವರದನ್) "ಸೊಲ್ವದೆಲ್ಲಾಂ ಸತ್ಯಂ" ಎಂಬ ಟಿ.ವಿ. ರಿಯಾಲಿಟಿ ಶೋನ (ಜನರ ಸಮಸ್ಯೆಗಳನ್ನು ಬಿಂಬಿಸುವ) ಸೆಟ್‌ಗೆ ಅಡಿಯಿಡುತ್ತಾಳೆ. ತನ್ನ ಪ್ರಾಣದ ಗೆಳತಿ ಅರುವಿಯನ್ನು ಮೂವರು ಪುರುಷರು ರೇಪ್ ಮಾಡಿದ ದಾರುಣ ಘಟನೆಗಳನ್ನು ಪ್ರಸ್ತಾಪಿಸುತ್ತಾಳೆ. ಸಹಾಯಕ ನಿರ್ದೇಶಕ (ನಟ ಪ್ರದೀಪ್ ಆ್ಯಂಟೋನಿ) ಆಕೆಯ ವೃತ್ತಾಂತವನ್ನು ಟೆಲಿಕಾಸ್ಟ್ ಮಾಡುವುದಾಗಿ ಹೇಳುತ್ತಾನೆ. ಆ ಮೂವರು ಮಂದಿಯನ್ನು ಶೋನಲ್ಲಿ ಭಾಗವಹಿಸುವ ನಿಟ್ಟಿನಲ್ಲಿ ವ್ಯವಸ್ಥೆಯನ್ನು ಮಾಡುತ್ತಾನೆ. ಮಾರನೆಯ ದಿನ ಶೂಟಿಂಗ್ ಶುರುವಾಗುತ್ತದೆ. ಶೋನ ಆ್ಯಂಕರ್ (ನಟಿ ಕನ್ನಡತಿ ಲಕ್ಷ್ಮಿ ಗೋಪಾಲಸ್ವಾಮಿ) ಅರುವಿಗೆ ಘಟನೆಗಳ ವಿವರಣೆಯನ್ನು ನೀಡಲು ತಿಳಿಸುತ್ತಾಳೆ. ಆಗ ತನ್ನನ್ನು ರೇಪ್ ಮಾಡಿದ್ದು ಜೆಸ್ಸಿ ತಂದೆ ಜೋಸೆಫ್, ಅರುಳ್‌ಮಣಿ ಮತ್ತು ಸ್ವಾಮೀಜಿ ಎಂದು ತಿಳಿಸುತ್ತಾಳೆ! ಜೋಸೆಫ್ ನಿವಾಸದಲ್ಲಿ ಆಶ್ರಯ ಪಡೆದಿರುವಾಗ ಆತ ಅತ್ಯಾಚಾರ ಮಾಡಿದನೆಂದು, ಸಾಲವನ್ನು ಕೋರಿದಾಗ ಅರುಳ್‌ಮಣಿ ತನ್ನ ಅಸಹಾಯಕ ಪರಿಸ್ಥಿತಿಯನ್ನು ಅರಿತು, ತನ್ನನ್ನು ಬಳಸಿಕೊಂಡನೆಂದು ಮತ್ತು ಹಿಪ್ನಟೈಸ್ ಮಾಡಿ ಸ್ವಾಮೀಜಿ ರೇಪ್ ಮಾಡಿದನೆಂದು ಖುಲ್ಲಂಖುಲ್ಲ ಅರುಹುತ್ತಾಳೆ! ಕೊನೆಗೆ ತಾನು ಎರಡು ವರ್ಷಗಳಿಂದ ಏಡ್ಸ್ ವ್ಯಾಧಿಯಿಂದ ಪೀಡಿತಳಾಗಿರುವೆನೆಂದು ಬಾಂಬ್ ಸಿಡಿಸುತ್ತಾಳೆ! ಮೂವರು ರೇಪಿಸ್ಟ್‌ಗಳು ತನ್ನ ಬಳಿ ಕ್ಷಮೆಯನ್ನು ಯಾಚಿಸಿದರೆ ಸಾಕೆಂದು ತಿಳಿಸುತ್ತಾಳೆ!

ಶೋ ಮುಂದುವರೆಯುತ್ತದೆ. ಆ್ಯಂಕರ್ ಅರುವಿಯನ್ನು ತಪ್ಪಿತಸ್ಥಳ ಸ್ಥಾನದಲ್ಲಿ ನಿಲ್ಲಿಸುತ್ತಾಳೆ. ಆಕೆ ತನಗೆ ಏಡ್ಸ್ ಇರುವುದು ತಿಳಿದಿದ್ದರೂ, ಪ್ರಜ್ಞಾಪೂರ್ವಕವಾಗಿಯೇ ದುರುದ್ದೇಶದಿಂದ ಆ ಮೂವರು ಮಂದಿಗೆ ಸೋಂಕನ್ನು ತಗುಲಿಸಿರುವುದಾಗಿ ಆಪಾದಿಸುತ್ತಾಳೆ! ಇದರಿಂದ ತುಂಬ ವಿಚಲಿತಳಾಗುವ ಅರುವಿ ಒಂದು ದೀರ್ಘ ಡೈಲಾಗ್‌ನಲ್ಲಿ ಈ ಉಪಭೋಗದ ಪ್ರಪಂಚವನ್ನು ಅಲ್ಲಿರುವ ಅಸಮಾನತೆಯನ್ನು, ಸ್ಟೀರಿಯೋಟೈಪ್‌ಗಳನ್ನು ಪ್ರಸ್ತಾಪಿಸುತ್ತಾಳೆ.

ಈ ಎಲ್ಲ ಪ್ರಸಂಗಗಳನ್ನು ತನ್ನ ಶೋನ ಟಿ.ಆರ್.ಪಿ. ವೃದ್ಧಿಗಾಗಿ ಬಳಸಲು ನಿರ್ದೇಶಕ ಮುಂದಾಗುತ್ತಾನೆ. ಇದರ ವಾಸನೆಯನ್ನು ಗ್ರಹಿಸುವ ಅರುವಿ ತನ್ನ ಬಳಿಯಿರುವ ಪಿಸ್ತೂಲನ್ನು ಬಳಸಿ, ನಿರ್ದೇಶಕನ ಕೈಗೆ ಗುಂಡನ್ನು ಹಾರಿಸುತ್ತಾಳೆ. ನಂತರ ಸಮಾಧಾನಗೊಂಡು, ಎಲ್ಲರ ಕ್ಷಮೆಯನ್ನು ಕೇಳಿ, ಹೊರಹೋಗಲು ನಿರ್ಧರಿಸುತ್ತಾಳೆ. ಆ ಸಮಯದಲ್ಲಿ ಅರುಳ್‌ಮಣಿ ಮಧ್ಯ ಪ್ರವೇಶಿಸಿ, ಅರುವಿಯನ್ನು ಕೆರಳಿಸುತ್ತಾನೆ. ಎಮಿಲಿಗೆ ಹೊಡೆಯುತ್ತಾನೆ. ಇದರಿಂದ ಕ್ರುದ್ಧಳಾಗುವ ಅರುವಿ ಆತನತ್ತ ಪಿಸ್ತೂಲನ್ನು ತೋರಿಸುತ್ತಾಳೆ. ಎಲ್ಲರನ್ನೂ ಒತ್ತೆಯಾಳುಗಳನ್ನಾಗಿಸುತ್ತಾಳೆ. ಪಿಸ್ತೂಲ್‌ಶಾಟ್‌ಗಳ ಶಬ್ದವನ್ನು ಕೇಳಿದವರು ಪೊಲೀಸರಿಗೆ ಮಾಹಿತಿಯನ್ನು ರವಾನಿಸುತ್ತಾರೆ. ಪೊಲೀಸರು ಸ್ಟುಡಿಯೋವನ್ನು ಸುತ್ತುವರಿಯುತ್ತಾರೆ. ಇದೊಂದು ಟೆರ್‍ರಿಸ್ಟ್ ಚಟುವಟಿಕೆಯೆಂದು ಬಗೆಯುತ್ತಾರೆ.

ಅರುವಿ ತರುವಾಯ ಬಾಟಲ್ ತಿರುಗಿಸುವ ಆಟವಾಡುತ್ತಾಳೆ. ಬಾಟಲ್ ಯಾರನ್ನು ಮುಖ ಮಾಡುತ್ತದೆಯೋ ಅವರು ಆಕೆ ಹೇಳಿದಂತೆ ಮಾಡಬೇಕು. ಈ ಸಂದರ್ಭದಲ್ಲಿ ಒತ್ತೆಯಾಳುಗಳು ಅರುವಿಗೆ ಹತ್ತಿರವಾಗುತ್ತಾರೆ. ನಂತರ ಆಕೆ ಪೊಲೀಸರಿಗೆ ಶರಣಾಗುತ್ತಾಳೆ. ಎಮಿಲಿ ಮತ್ತು ಅರುವಿ ಇಬ್ಬರೂ ಏಡ್ಸ್ ರೋಗಿಗಳಾಗಿರುವುದರಿಂದ ಅವರನ್ನು ದಸ್ತಗಿರಿ ಮಾಡಲಾಗುವುದಿಲ್ಲ. ಅವರನ್ನು ವೈದ್ಯಕೀಯ ಚಿಕಿತ್ಸೆ ತಪಾಸಣೆಗಾಗಿ ಏಡ್ಸ್ ಕ್ಯಾಂಪೊಂದರಲ್ಲಿ ಇರಿಸಲಾಗುತ್ತದೆ. ಅರುವಿಯ ಸ್ಥಿತಿ ಗಂಭೀರವಾಗುತ್ತದೆ. ಮಾರಕ ರೋಗ ಆಕೆಯನ್ನು ಹಂತ ಹಂತವಾಗಿ ಕೊಲ್ಲಲು ಶುರುಮಾಡುತ್ತದೆ. ಹೀಗಿರುವಾಗ ಆಕೆ ಒಂದು ರಾತ್ರಿ ಕ್ಯಾಂಪಿನಿಂದ ಕಾಲ್ತೆಗೆಯುತ್ತಾಳೆ. ಒಂದು ಹಳ್ಳಿಯಲ್ಲಿ ನಿಲ್ಲುತ್ತಾಳೆ. ನಂತರ ವಿಡಿಯೊವೊಂದನ್ನು ಮಾಡಿ, ತನ್ನ ಮನದಾಳದ ಮಾತುಗಳನ್ನು ಹಂಚಿಕೊಳ್ಳುವ ನಿಟ್ಟಿನಲ್ಲಿ ಅದನ್ನು ತನ್ನ ಆಪ್ತರ ಫೇಸ್‌ಬುಕ್‌ಗೆ ಹಾಕುತ್ತಾಳೆ. ಇದನ್ನು ವೀಕ್ಷಿಸಿದ ಪೀಟರ್ ಎಲ್ಲರನ್ನೂ ಸೇರಿಸಿ, ಅರುವಿ ವಾಸವಿರುವ ಗ್ರಾಮದತ್ತ ದೌಡಾಯಿಸುತ್ತಾರೆ. ಆಕೆಗೆ ಕೊನೆಗಾಲದಲ್ಲಿ ತಾನು ಪ್ರೀತಿಸಿದವರ ಸಾಂಗತ್ಯ ದೊರೆಯುತ್ತದೆ.



ಅರುವಿ ಎಂದರೆ ಜಲಪಾತ. ಹೆಸರಿಗೆ ಅನ್ವಯಿಸುವಂತೆ ಈ ಚಲನಚಿತ್ರದಲ್ಲಿ ಆಕೆ ಭೋರ್ಗರೆಯುತ್ತಾಳೆ. ಹಳ್ಳಕೊಳ್ಳ, ಬಂಡೆಗಳ ಮೂಲಕ ಹರಿಯುತ್ತಾಳೆ; ನವಿರಾಗಿಯೂ ಸ್ಪಂದಿಸುತ್ತಾಳೆ. ಇಲ್ಲಿ ಸಂತಸ, ಆಸೆ, ನಿರೀಕ್ಷೆ, ಪ್ರೀತಿ, ಭರವಸೆ, ನಿರಾಸೆ, ಕ್ರೌರ್ಯ ಎಲ್ಲವೂ ಮೇಳೈಸಿವೆ. ಕೊನೆಯ ಹಂತದವರೆಗೂ ಅರುವಿ ಒಬ್ಬ ಏಡ್ಸ್ ರೋಗಿಯೆಂಬುದು ಪತ್ತೆಯಾಗುವುದಿಲ್ಲ. ಆದರೆ ಚಿತ್ರಕಥೆ (ಸ್ಕ್ರೀನ್ ಪ್ಲೆ)ಯಲ್ಲಿ ಕೆಲವು ರಂಧ್ರಗಳಿವೆ. ಈ ಚಲನಚಿತ್ರವನ್ನು ವೀಕ್ಷಿಸಿದ ತರುವಾಯ ಕೆಲವು ಪ್ರಶ್ನೆಗಳು ಏಳುತ್ತವೆ. ಮೂವರು ಪುರುಷ ಸಿಂಹರಿಂದ ಅತ್ಯಾಚಾರಕ್ಕೆ ಒಳಗಾಗುವ ಅರುವಿ ಕಾನೂನಿನ ಸಹಾಯವನ್ನು ಏಕೆ ಪಡೆಯುವುದಿಲ್ಲ? ಬರೀ ಕ್ಷಮಿಸುವುದು ಎಷ್ಟು ಸರಿ? ಈಗಾಗಲೇ ಪ್ರಸ್ತಾಪಿಸಿರುವಂತೆ ಸಮಾಜದ ದೃಷ್ಟಿಕೋನ, ಸ್ಥಿತಿಗತಿಯ ಬಗೆಗೆ ಒಂದು ಲಂಬದ ಡೈಲಾಗನ್ನು ಹೇಳುವ ಅರುವಿಯ ಈ ನಡೆಗೆ ಸಿನಿಮಾದಲ್ಲಿ ಸಮರ್ಥನೆ ಸಿಗುವುದಿಲ್ಲ. ಏಕೆಂದರೆ ಆಕೆಯ ಸಮಾಜಮುಖಿ ಕಾಳಜಿ ಎಲ್ಲೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ವ್ಯಕ್ತವಾಗುವುದಿಲ್ಲ. ಮಧ್ಯಂತರ ನಂತರದ ಅವಧಿಯಲ್ಲಿ ಚಲನಚಿತ್ರ ಸಿನಿಮೇಟಿಕ್ ಹಾದಿಯನ್ನು ತುಳಿಯುತ್ತದೆ.

ಆ್ಯಂಕರ್ ಪಾತ್ರ ಕ್ಯಾರಿಕೇಚರ್ ಆಗಿದೆ. ಅರುವಿಯ ಪಾತ್ರವನ್ನು ವಿಜೃಂಭಿಸಲು ಹೀಗೆ ಮಾಡಲಾಗಿದೆಯೇ ಎಂಬ ಸಣ್ಣ ಅನುಮಾನ ತಲೆದೋರುತ್ತದೆ. ಸ್ಟುಡಿಯೋದಲ್ಲಿ ಒತ್ತೆಯಾಳುಗಳಾಗಿರುವವರಿಗೂ ಅರುವಿಗೂ ಇರುವ ಸಂಬಂಧದ ಹಿನ್ನೆಲೆಯಲ್ಲಿ ಅವರೆಲ್ಲರೂ ಬಸ್‌ನಲ್ಲಿ ಆಕೆ ವಾಸಮಾಡುವ ಗ್ರಾಮದತ್ತ ಪಯಣಿಸುವುದು ಸ್ವಲ್ಪ ಕೃತಕವೆನಿಸುತ್ತದೆ.

ಅರುವಿ ಪಾತ್ರಧಾರಿ ಅದಿತಿ ಬಾಲನ್‌ಗೆ ಇದು ಪ್ರಥಮ ಚಲನಚಿತ್ರವಾದರೂ, ಅವರ ಅಭಿನಯಕ್ಕೆ 'ಬೇಷ್' ಎನ್ನಲೇಬೇಕು. ಬೆಂಗಳೂರಿನಲ್ಲಿ ಕಾನೂನು ಪದವಿ ಶಿಕ್ಷಣವನ್ನು ಪಡೆದ ಈಕೆ ಒಂದು ಸಂದರ್ಶನದಲ್ಲಿ ತಾನು ೫–೮ ತಿಂಗಳು ನಿರ್ದೇಶಕರು/ಅವರ ತಂಡದಿಂದ ನಟನಾ ತರಬೇತಿಯನ್ನು ಪಡೆದಿದ್ದಾಗಿ ತಿಳಿಸಿದ್ದಾರೆ. ಅವರ ಪರಿಶ್ರಮ ನಟನೆಯಲ್ಲಿ ಎದ್ದುಕಾಣುತ್ತದೆ. ಬಿಂದು ಮಾಲಿನಿ ಮತ್ತು ವೇದಾಂತ್ ಭಾರದ್ವಾಜ್‌ರ ಸೌಂಡ್‌ಟ್ರಾಕ್ ಸಂಗೀತ ಭಿನ್ನವಾದ ಅನುಭವವನ್ನು ನೀಡುವುದರಲ್ಲಿ ಸಫಲವಾಗಿದೆ. ಪ್ರಥಮ ಬಾರಿಗೆ ಸಂಗೀತ ನಿರ್ದೇಶನ ಮಾಡಿರುವ ಇವರ ಪ್ರಯತ್ನ ಗಮನಾರ್ಹವಾಗಿದೆ.

ಇಂತಹ ವಸ್ತುವನ್ನು ಆಯ್ಕೆ ಮಾಡಿಕೊಂಡ ನಿರ್ದೇಶಕ ಅರುಣ್ ಪ್ರಭು ಪುರುಷೋತ್ತಮನ್ ಮತ್ತು ನಿರ್ಮಾಪಕ ಎಸ್. ಆರ್. ಪ್ರಭು ಅವರ ಎದೆಗಾರಿಕೆಗೆ ಥಮ್ಸ್ ಅಪ್.


**ಕೊಳಲೂರು ರಾಧೇಯ**

೫೮, ೫ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಲೇಔಟ್, ತುರಹಳ್ಳಿ ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧

# ಭಾರತದ ಪ್ರಥಮ ಮಹಿಳಾ ಸ್ವಾತಂತ್ರ್ಯ ಹೋರಾಟಗಾರ್ತಿ
# ರಾಣಿ ಅಬ್ಬಕ್ಕ

ಲಕ್ಷ್ಮೀಕಾಂತ ಎ

**ಉಳ್ಳಾಲದ ದಿಟ್ಟ ಹೋರಾಟಗಾರ್ತಿ ರಾಣಿ ಅಬ್ಬಕ್ಕ ದೇವಿ ಚಿಕ್ಕ ವಯಸ್ಸಿನಲ್ಲೇ ಸ್ವಾಭಿಮಾನ, ಆದರ್ಶಗಳನ್ನು ಬೆಳೆಸಿಕೊಂಡ ತುಳುನಾಡಿನ ಈ ವೀರ ಮಹಿಳೆ ಅಂದು "ಪೋರ್ಚುಗೀಸರಿಗೆ ಕಪ್ಪ ಕಾಣಿಕೆ ಕೊಡಬಾರದು. ನಾಡನ್ನು, ನಾಡಿನ ಜನರನ್ನು ದಾಸ್ಯಕ್ಕೆ ಒಡ್ಡುವುದು ಸರಿಯಲ್ಲ. ನಾಡಿಗಾಗಿ ಹೋರಾಡಿ ಮಡಿದರೆ ಅದೇ ಸ್ವರ್ಗ, ದಾಸ್ಯದ ಬದುಕೇ ನರಕ" ಎಂದು ದಿಟ್ಟತನದಿಂದ ಹೋರಾಡಿ ಪೋರ್ಚುಗೀಸರ ಬೆವರಿಳಿಸಿದ್ದರು.**

ಭಾರತದ ಸ್ವಾತಂತ್ರ್ಯ ಸಮರದಲ್ಲಿ ದೇಶಕ್ಕಾಗಿ ತಮ್ಮದೆಲ್ಲವನ್ನು ಅರ್ಪಿಸಿ ಹೋರಾಟ ಮಾಡಿದ ಮಹನೀಯರು ಹಲವರು. ಅದರಲ್ಲೂ ಕೆಲವೊಂದು ಮಹಿಳಾಮಣಿಗಳು ಸಹಾ ತಾವೇನು ಪುರುಷರಿಗಿಂತ ಕಮ್ಮಿಯಲ್ಲ ಎಂಬಂತೆ ದಿಟ್ಟತನದಿಂದ ಹೋರಾಡಿ ಇತಿಹಾಸದ ಪುಟಗಳಲ್ಲಿ ಶಾಶ್ವತವಾಗಿ ಸೇರಿ ಹೋದರು. ಅಂತಹ ವೀರವನಿತೆಯರ ಸಾಲಿನಲ್ಲಿ ತುಳುನಾಡಿನ ಹೆಣ್ಣುಮಗಳೊಬ್ಬಳು ದೇಶದ ಮೊದಲ ಮಹಿಳಾ ಸ್ವಾತಂತ್ರ್ಯ ಹೋರಾಟಗಾರ್ತಿಯಾಗಿ, ವಿದೇಶಿಗರ ವಿರುದ್ಧ ಹೋರಾಡಿ ನಮ್ಮೆಲ್ಲರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದ್ದಾಳೆ. ಅವಳೇ ಉಳ್ಳಾಲ ರಾಣಿ ಅಬ್ಬಕ್ಕ ದೇವಿ. ಚಿಕ್ಕ ವಯಸ್ಸಿನಲ್ಲೇ ಸ್ವಾಭಿಮಾನ ಆದರ್ಶಗಳನ್ನು ಬೆಳೆಸಿಕೊಂಡ ತುಳುನಾಡಿನ ಈ ವೀರ ಮಹಿಳೆ ಅಂದು "ಪೋರ್ಚುಗೀಸರಿಗೆ ಕಪ್ಪ ಕಾಣಿಕೆ ಕೊಡಬಾರದು. ನಾಡನ್ನು, ನಾಡಿನ ಜನರನ್ನು ದಾಸ್ಯಕ್ಕೆ ಒಡ್ಡುವುದು ಸರಿಯಲ್ಲ. ನಾಡಿಗಾಗಿ ಹೋರಾಡಿ ಮಡಿದರೆ ಅದೇ ಸ್ವರ್ಗ, ದಾಸ್ಯದ ಬದುಕೇ ನರಕ" ಎಂದು ದಿಟ್ಟತನದಿಂದ ಹೋರಾಡಿ ಪೋರ್ಚುಗೀಸರ ಬೆವರಿಳಿಸಿದ್ದರು.

ತುಳುನಾಡು ಎಂದು ಕರೆಸಿಕೊಳ್ಳುವ ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿರುವ ಮೂಡುಬಿದಿರೆಯ ಚೌಟ ಮನೆತನಕ್ಕೆ ಸೇರಿದ ತಿರುಮಲರಾಯ ಎಂಬವರ ಸೋದರ ಸೊಸೆಯೇ ಅಬ್ಬಕ್ಕದೇವಿ. ಚಿಕ್ಕಂದಿನಲ್ಲೇ ತಂದೆ ತಾಯಿಯರನ್ನು ಕಳೆದುಕೊಂಡ ಅಬ್ಬಕ್ಕನನ್ನು ತಿರುಮಲರಾಯರೇ ಬೆಳೆಸಿದರು. ಅಬ್ಬಕ್ಕನಿಗೆ ಕಾಳಗ ಹಾಗೂ ಆಳ್ವಿಕೆಗೆ ನೆರವಾಗುವ ವಿದ್ಯೆಗಳನ್ನು ಅವರು ಕಲಿಸಿದರಲ್ಲದೆ, ಅವರಿಗೆ ಪಟ್ಟವನ್ನು ಕಟ್ಟಿದರು ಎಂದು ಹೇಳಲಾಗುತ್ತದೆ. ೧೫೨೫ರಿಂದ ೧೫೭೦ರ



ನಡುವೆ ಅಬ್ಬಕ್ಕ ದೇವಿ ಉಳ್ಳಾಲದ ರಾಣಿಯಾಗಿದ್ದಳು ಹಾಗೂ ಆ ಸಮಯದಲ್ಲಿ ಮಂಗಳೂರನ್ನು ಆಳುತ್ತಿದ್ದ ವೀರ ನರಸಿಂಹ ಬಂಗರಾಜ ಎಂಬವರ ಮಗ ಹಾಗೂ ಯುವರಾಜನಾದ ಲಕ್ಷ್ಮಪ್ಪರಸ ಬಂಗರಾಜರಿಗೆ ಅಬ್ಬಕ್ಕನನ್ನು ಮದುವೆ ಮಾಡಲಾಗುತ್ತದೆ. ಆದರೆ ತನ್ನ ಗಂಡ ಆ ಕಾಲದಲ್ಲಿ ಭಾರತದ ಶತ್ರುಗಳೆಂದೇ ಬಿಂಬಿತರಾಗಿದ್ದ ಪೋರ್ಚುಗೀಸರೊಂದಿಗೆ ಸ್ನೇಹದಿಂದಿರುತ್ತಾನೆ. ಇದನ್ನು ಸಹಿಸದ ರಾಣಿ ಅಬ್ಬಕ್ಕ ವಿವಿಧ ರೀತಿಯಲ್ಲಿ ಗಂಡನಿಗೆ ತಿಳಿ ಹೇಳುತ್ತಾಳೆ. ಆದರೆ ಲಕ್ಷ್ಮಪ್ಪರಸ ಕೇಳುವುದಿಲ್ಲ. ಇದರಿಂದ ಈ ಮದುವೆ ಸಂಬಂಧ ಕೆಲವೇ ಸಮಯದಲ್ಲಿ ಮುರಿದು ಬಿದ್ದು ಅಬ್ಬಕ್ಕ ಉಳ್ಳಾಲಕ್ಕೆ ವಾಪಸ್ಸು ಹೋದಳು. ಈ ಘಟನೆಯನ್ನು ಅವಮಾನವೆಂದು ತಿಳಿದ ಲಕ್ಷ್ಮಪ್ಪರಸ ಬಂಗರಾಜ ಮುಂದೊಂದು ದಿನ ಅಬ್ಬಕ್ಕನ ಶತ್ರುಗಳಾದ ಪೋರ್ಚುಗೀಸರೊಂದಿಗೆ ಸೇರಿ ಅಬ್ಬಕ್ಕನ ಸೋಲಿಗೆ ಕಾರಣವಾಗಿದ್ದು ತುಳುನಾಡಿನ ದುರಂತ ಇತಿಹಾಸ.

**ಪೋರ್ಚುಗೀಸರ ವಿರುದ್ಧ ಹೋರಾಟ**

ಭಾರತಕ್ಕೆ ಕಾಲಿಟ್ಟ ಮೊತ್ತ ಮೊದಲ ವಸಾಹತುಶಾಹಿಗಳಾಗಿದ್ದ ಪೋರ್ಚುಗೀಸರು ಹೆಚ್ಚಾಗಿ ಕರ್ನಾಟಕ, ಕೇರಳ, ಗೋವಾ, ಗುಜರಾತ್ ಮುಂಬಾಯಿನಂತಹ ಪ್ರದೇಶದಲ್ಲಿ ತಮ್ಮ ಪ್ರಾಬಲ್ಯವನ್ನು ಹೊಂದಿದ್ದರು. ಪೋರ್ಚುಗೀಸರ ಉತ್ತಮ ನೌಕಾಬಲದ ಹೋರಾಟವನ್ನು ಈ ಭಾಗದಲ್ಲಿ ಸಮರ್ಥವಾಗಿ ಎದುರಿಸಿ ದಿಟ್ಟ ಉತ್ತರ ನೀಡಿದವಳು ಉಳ್ಳಾಲದ ರಾಣಿ ಅಬ್ಬಕ್ಕ. ಬಲಾಢ್ಯ ಸೈನ್ಯವನ್ನು ಹೊಂದಿದ್ದ ಚೌಟ ಅರಸರ ಸುಪರ್ದಿಯಲ್ಲಿ ಉಳ್ಳಾಲ ಬಂದರು ಹಲವಾರು ವಿದೇಶಗಳೊಂದಿಗೆ ವ್ಯಾಪಾರ ಕೇಂದ್ರವಾಗಿ ಬೆಳೆದುಬಂದಿತ್ತು. ಅದನ್ನು ವಶಪಡಿಸಿಕೊಳ್ಳಲು ಪೋರ್ಚುಗೀಸರು, ಬ್ರಿಟಿಷರು, ಡಚ್ಚರು ಸೇರಿದಂತೆ ಎಲ್ಲ ವಿದೇಶಿಗರು ಸಹಾ ಪ್ರಯತ್ನಿಸುತ್ತಿದ್ದರು. ೧೫೨೫ರಲ್ಲಿ ಮಂಗಳೂರು ಮತ್ತು ಉಡುಪಿ ಭಾಗವನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದ ಈ ಭಾಗದ ಅಂದಿನ ವೈಸರಾಯ್ ಲೋಪೋ ವಾಜ್ ಡಿ ಸಂಪಾಯಿಯೋ ಎಂಬವನಿಗೆ ಶ್ರೀಮಂತ ಬಂದರಾಗಿ ಗುರುತಿಸಿಕೊಂಡಿದ್ದ ಉಳ್ಳಾಲ ಬಂದರು ವಶವಾಗಿರಲಿಲ್ಲ. ಅದರ ಜೊತೆಗೆ ಹಿಂದೆ ಪೋರ್ಚುಗೀಸರಿಗೆ ನೀಡುತ್ತಿದ್ದ ಕಪ್ಪಕಾಣಿಕೆಯನ್ನು ರಾಣಿ ಅಬ್ಬಕ್ಕ ಕೊಡುವುದನ್ನು ನಿಲ್ಲಿಸಿದರು. ಪೋರ್ಚುಗೀಸರು ಪತ್ರದ ಮುಖೇನ ಕಪ್ಪ ಕಾಣಿಕೆ ಸಲ್ಲಿಸುವಂತೆ ಬೆದರಿಕೆ ಹಾಕಿದರು. ಆ ಪತ್ರಕ್ಕೆ ಅಬ್ಬಕ್ಕ ದೇವಿಯು ಉಳ್ಳಾಲ ಸ್ವತಂತ್ರ ರಾಜ್ಯ. ಯಾರಿಗೂ ತಲೆ ಬಾಗಿಸುವುದಿಲ್ಲ ಎಂಬ ದಿಟ್ಟ ಉತ್ತರವನ್ನು ಕೊಟ್ಟು, ಉಳ್ಳಾಲವನ್ನು ಪೋರ್ಚುಗೀಸರಿಂದ ರಕ್ಷಿಸಬೇಕೆಂಬ ನಿರ್ಧಾರವನ್ನು ಕೈಗೊಂಡಳು. ಮಾತ್ರವಲ್ಲದೇ ಕಲ್ಲಿಕೋಟೆ ದೊರೆ ಜಾಮೋರಿನ್, ತುಳುನಾಡಿನ ದಕ್ಷಿಣದಲ್ಲಿ ಆಳುತ್ತಿದ್ದ ಮುಸ್ಲಿಂ ದೊರೆಗಳ ಜೊತೆ ಬಾಂಧವ್ಯವನ್ನು ಬೆಸೆದಳು. ತನ್ನ ಸೈನ್ಯದಲ್ಲಿದ್ದ ಮೊಗವೀರರು ಸೇರಿದಂತೆ ಎಲ್ಲರಿಗೂ ಯೋಗ್ಯ ರೀತಿಯ ತರಬೇತಿಗಳನ್ನು ನೀಡಿ ಶತ್ರುಗಳನ್ನು ಎದುರಿಸಲು ಸಜ್ಜುಗೊಳಿಸಿದಳು.

ಪೋರ್ಚುಗೀಸರು ಮೊದಲ ಬಾರಿಗೆ ೧೫೨೫ರಲ್ಲಿ ದಂಡೆತ್ತಿ ಬಂದರು. ಆದರೆ ರಾಣಿ ಅಬ್ಬಕ್ಕನ ಸೈನ್ಯ ಅವರನ್ನು ಹಿಮ್ಮೆಟ್ಟಿಸಿತ್ತು. ಮುಂದೆ ಮೂರು ದಶಕಗಳ ನಂತರ ೧೫೫೫, ೧೫೫೭ರಲ್ಲಿ ದಾಳಿ ಮಾಡಿದರಾದರೂ, ಅಬ್ಬಕ್ಕನ ಯುದ್ಧ ನೀತಿಯಿಂದಾಗಿ ಸೋತು ಹಿಂದಕ್ಕೆ ತೆರಳಬೇಕಾಯಿತು. ಆದರೆ ಹಿಂತಿರುಗುವಾಗ ಮಂಗಳೂರಿನಲ್ಲಿ ಕಗ್ಗೊಲೆಗಳನ್ನು ನಡೆಸಿದ್ದು, ಪೋರ್ಚುಗೀಸರ ಕ್ರೌರ್ಯಕ್ಕೆ ಸಾಕ್ಷಿಯಾಗಿದೆ. ನಂತರ ೧೫೫೮ರಲ್ಲಿ ಗೋವಾದ ವೈಸರಾಯ್ ಜೋ ಪೀಕ್ಸೋಟೋ ಎಂಬವನ ನೇತೃತ್ವದಲ್ಲಿ ಉಳ್ಳಾಲಕ್ಕೆ ದಂಡಯಾತ್ರೆಗೆ ಕಳಿಸಿದ. ಆ ಸೈನ್ಯ ಒಂದು ಸಲ ಉಳ್ಳಾಲ ಪಟ್ಟಣವನ್ನು ವಶಪಡಿಸಿಕೊಂಡರೂ, ಅಂದೇ ರಾತ್ರಿ ರಾಣಿ ಅಬ್ಬಕ್ಕ ೨೦೦ ನಿಷ್ಠಾವಂತ ಸೈನಿಕರೊಂದಿಗೆ ದಿಟ್ಟವಾಗಿ ಹೋರಾಡಿ, ಪೀಕ್ಸೋಟೋನ ಕೊಂದರಲ್ಲದೇ ಪೋರ್ಚುಗೀಸ್ ಸೈನ್ಯವನ್ನು ಓಡಿಸಿದರು. ನಂತರ ೧೫೬೮ರಲ್ಲಿ ರಾಣಿ ಅಬ್ಬಕ್ಕನ ಮಾಜಿ ಪತಿ ಲಕ್ಷ್ಮಪ್ಪರಸನ ಸಹಾಯದೊಂದಿಗೆ ದಂಡೆತ್ತಿ ಹೋದರಾದರೂ ಉಳ್ಳಾಲವನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಪೋರ್ಚುಗೀಸರ ನಿರಂತರ ದಾಳಿಯಿಂದ



ತಪ್ಪಿಸಿಕೊಳ್ಳಲು ರಾಣಿ ಅಬ್ಬಕ್ಕ ಸುತ್ತಮುತ್ತಲಿನ ರಾಜರೊಂದಿಗೆ ಒಪ್ಪಂದ ಮಾಡಿಕೊಂಡರು. ೧೫೭೦ರಲ್ಲಿ ಪೋರ್ಚುಗೀಸರ ಅನಿರೀಕ್ಷಿತ ಧಾಳಿ ಹಾಗೂ ಅಬ್ಬಕ್ಕದೇವಿಯ ಪತಿ ಲಕ್ಷ್ಮಪ್ಪರಸನ ಕುತಂತ್ರದಿಂದಾಗಿ ಉಳ್ಳಾಲವನ್ನು ಆಕ್ರಮಿಸಿಕೊಂಡರು. ಸುಮಾರು ೪೫ ವರ್ಷಗಳ ಕಾಲ ಪೋರ್ಚುಗೀಸರಿಗೆ ಸಿಂಹಸ್ವಪ್ನರಾಗಿದ್ದ ರಾಣಿ ಅಬ್ಬಕ್ಕ ಅಂತಿಮವಾಗಿ ಪೋರ್ಚುಗೀಸರ ಸೆರೆಯಾದರೂ, ಸೆರೆಮನೆಯಲ್ಲಿ ಸಹಾ ದಿಟ್ಟವಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿದಳು.

**ಇತಿಹಾಸದಲ್ಲಿ ಶಾಶ್ವತ ಸ್ಥಾನಪಡೆದ ರಾಣಿ ಅಬ್ಬಕ್ಕ**

ತನ್ನ ಹೆಂಡತಿಯ ವಿರುದ್ಧ ವಿದೇಶಿಗರಿಗೆ ಸಹಾಯ ಮಾಡಿ ಆ ಮೂಲಕ ರಾಣಿ ಅಬ್ಬಕ್ಕನ ಸಾವಿಗೆ ಕಾರಣವಾದ ಕುಖ್ಯಾತಿಗೆ ಮಂಗಳೂರನ್ನು ಆಳಿದ ರಾಣಿ ಅಬ್ಬಕ್ಕನ ಪತಿ ಲಕ್ಷ್ಮಪ್ಪರಸ ತುಳುನಾಡಿನ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕಪ್ಪುಚುಕ್ಕೆಯಾಗಿ ಗುರುತಿಸಿಕೊಂಡ. ಭಾರತದ ಬೇರೆ ಕೆಲವು ರಾಜರಂತೆ ಸಾಮಂತ ರಾಣಿಯಾಗಿ ಬದುಕಲು ಇಷ್ಟಪಡದ ಅಬ್ಬಕ್ಕ, ಪೋರ್ಚುಗೀಸರ ವಿರುದ್ಧ ದಿಟ್ಟವಾಗಿ ಹೋರಾಟ ಮಾಡಿ ಭಾರತದ ಮೊಟ್ಟ ಮೊದಲ ಸ್ವಾತಂತ್ರ್ಯ ಹೋರಾಟಗಾರ್ತಿ ಎಂಬ ಪ್ರಖ್ಯಾತಿಗೆ ಒಳಗಾದರು. ಮಾತ್ರವಲ್ಲದೇ ಮುಂದಿನ ಸ್ವಾತಂತ್ರ್ಯ ಹೋರಾಟಗಾರರಿಗೆ ಪ್ರೇರಣೆಯಾದರು. ತನ್ನ ರಾಜ್ಯ ಉಳ್ಳಾಲದಲ್ಲಿ ಉತ್ತಮ ಆಡಳಿತ ನೀಡಿದ ಆಕೆ, "ಅಭಯರಾಣಿ" ಎಂಬ ಬಿರುದಿಗೆ ಪಾತ್ರರಾಗಿದ್ದರು. ಅಬ್ಬಕ್ಕಳ ನೆನಪು, ಅವಳ ವೀರಗಾಥೆ ಇಂದಿನ ತಲೆಮಾರಿಗೆ ತಿಳಿಯಬೇಕೆಂಬ ದೃಷ್ಟಿಯಿಂದ ಕರ್ನಾಟಕ ಸರಕಾರ ರಾಣಿ ಅಬ್ಬಕ್ಕ ಉತ್ಸವದಂತಹ ಕಾರ್ಯಕ್ರಮಗಳನ್ನು ಪ್ರತಿವರ್ಷ ಹಮ್ಮಿಕೊಳ್ಳುತ್ತಿದೆ. ಅದೇ ರೀತಿ ಭಾರತ ಸರ್ಕಾರ ೨೦೦೩ರಲ್ಲಿ ರಾಣಿ ಅಬ್ಬಕ್ಕನ ಸಾಧನೆಯನ್ನು ಗುರುತಿಸಿ ವಿಶೇಷ ಅಂಚೆ ಚೀಟಿಯನ್ನು ಹೊರಡಿಸಿದೆ. ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ನೆನಪಿಸುವ ಪ್ರತಿಯೊಬ್ಬರು ನಮ್ಮ ತುಳುನಾಡಿನ ರಾಣಿ ಅಬ್ಬಕ್ಕಳ ಸಾಧನೆಯನ್ನು ಮರೆಯುವಂತಿಲ್ಲ.

**ಲಕ್ಷ್ಮೀಕಾಂತ ಎ.**
ಸಂಶೋಧನಾ ವಿದ್ಯಾರ್ಥಿ, ಮಂಗಳೂರು ವಿ.ವಿ. ಹಾಗೂ ಉಪನ್ಯಾಸಕರು ರಾಜ್ಯಶಾಸ್ತ್ರ ವಿಭಾಗ,
ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಪುತ್ತೂರು

# ಮಹಿಳೆ ಮತ್ತು ಫ್ರೆಂಚ್ ಮಹಾಕ್ರಾಂತಿ

ಯುರೋಪಿನಲ್ಲಿ ಊಳಿಗಮಾನ್ಯ ವ್ಯವಸ್ಥೆಯನ್ನು ಕಿತ್ತೊಗೆದು ಹೊಸ ಸಮಾಜವನ್ನು ನಿರ್ಮಿಸುವ ಪ್ರಕ್ರಿಯೆ ಬಹುತೇಕ ಇಂಗ್ಲೆಂಡ್‌ನಲ್ಲಿ ಪ್ರಾರಂಭವಾಯಿತು ಎನ್ನುವುದೇನೋ ನಿಜ. ಆದರೆ ಸುಮಾರು ನೂರು ವರ್ಷಗಳ ನಂತರ ಎಂದರೆ ೧೭೮೯ರಲ್ಲಿ ಫ್ರಾನ್ಸ್‌ನಲ್ಲಿ ಬೀಸಿದಂತಹ ಬದಲಾವಣೆಯ ಗಾಳಿ ಹೆಚ್ಚು ಪ್ರಭಾವಶಾಲಿಯಾಗಿತ್ತು. ಫ್ರೆಂಚ್ ಮಹಾಕ್ರಾಂತಿಯ ಸಂದರ್ಭದಲ್ಲಿ ಬಂದ ವಿಚಾರಗಳು ಹೆಚ್ಚು ಪ್ರಖರವಾಗಿದ್ದವು, ಮುಂದಿಟ್ಟ ಬೇಡಿಕೆಗಳು ಹೆಚ್ಚು ಸ್ಪಷ್ಟವಾಗಿದ್ದವು. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಎಂಬ ಕಲ್ಪನೆಗಳು ಫ್ರೆಂಚ್ ಮಹಾಕ್ರಾಂತಿಯ ಸಂದರ್ಭದಲ್ಲಿ ಪರಿಪೂರ್ಣವಾಗಿ ಮೂಡಿಬಂದವು.

ಕ್ರಾಂತಿಗೆ ಮುಂಚಿನ ಫ್ರಾನ್ಸ್‌ನಲ್ಲಿ ಅತ್ಯಂತ ಪ್ರತಿಗಾಮಿಯಾಗಿದ್ದ ಊಳಿಗಮಾನ್ಯ ಪದ್ಧತಿಯಲ್ಲಿ ಜನರು ಹಲವಾರು ಸಮಸ್ಯೆಗಳಿಂದ ನರಳುತ್ತಿದ್ದರು. ಬೆಲೆ ಏರಿಕೆ, ಕಾಳಸಂತೆಕೋರರ ಉಪಟಳದಿಂದಾಗಿ ಆಹಾರ ವಸ್ತುಗಳ ಅಭಾವ ಉಂಟಾಗಿ ಜನ ಕಂಗೆಟ್ಟಿದ್ದರು. ದೊರೆ ೧೬ನೇ ಲೂಯಿ, ಆಹಾರ ಧಾನ್ಯಗಳ ವ್ಯಾಪಾರದ ಮೇಲಿದ್ದ ನಿಯಂತ್ರಣಗಳನ್ನು ವರ್ತಕರ ಒತ್ತಾಯದಿಂದಾಗಿ ತೆಗೆದುಬಿಟ್ಟ. ಇದರಿಂದ ಬೆಲೆಗಳು ಗಗನಕ್ಕೇರಿದವು. ಆ ಪರಿಸ್ಥಿತಿಯಲ್ಲಿ ಫ್ರಾನ್ಸಿನ ಜನ ಕ್ರಾಂತಿಕಾರಿಗಳನ್ನು ಬಂಧಿಸಿಟ್ಟಿದ್ದ ಜೈಲು ಹಾಗೂ ಪ್ರತಿಗಾಮಿ ಶಕ್ತಿಗಳ ಪಿತೂರಿಯ ತಾಣವೂ ಆಗಿದ್ದ ಬ್ಯಾಸ್ಟಿಲೆಯ ಮೇಲೆ ಜುಲೈ ೧೪, ೧೭೮೯ರಂದು ದಾಳಿ ಮಾಡಿದರು. ಆ ದಾಳಿಯು ಫ್ರೆಂಚ್ ಮಹಾಕ್ರಾಂತಿಗೆ ಹಚ್ಚಿದ ಮೊದಲ ಕಿಡಿಯಾಯಿತು. ಈ ಕ್ರಾಂತಿಯ ಸಂದರ್ಭದಲ್ಲಿ ಇಡಿಯ ಸಂಸಾರಕ್ಕೆ ಆಹಾರ ಒದಗಿಸುವ ಜವಾಬ್ದಾರಿ ಹೊತ್ತಿದ್ದ ಸಾಮಾನ್ಯ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದರು. ಅವರು ಅನುಭವಿಸುತ್ತಿದ್ದ ಒತ್ತಡ, ದುಃಖ ತುಂಬ ತೀವ್ರವಾದದ್ದು. ಅವರೇ ಈ ಕ್ರಾಂತಿಯ ಅನೇಕ ಘಟನೆಗಳಲ್ಲಿ ತುಂಬ ಭಾವುಕರಾಗಿ ಮುಂದಾಳತ್ವ ವಹಿಸಿದರು ಎಂದರೆ ತಪ್ಪಾಗಲಾರದು.

**ಜ಼ಾಹಿದಾ ಶಿರೀನ್**

ಫ್ರಾನ್ಸ್‌ನಲ್ಲಿ ಅಂದಿನ ಎಲ್ಲ ಯುರೋಪಿಯನ್ ರಾಷ್ಟ್ರಗಳಲ್ಲಿದ್ದಂತೆಯೇ ಮಹಿಳೆಯರಿಗೆ ಯಾವುದೇ ರೀತಿಯ ಸೂಕ್ತ ಸಾಮಾಜಿಕ-ರಾಜಕೀಯ ಸ್ಥಾನಮಾನಗಳು ಇರಲಿಲ್ಲ. ಆದರೆ ಪರಿಚಾರಿಕೆಯರಾಗಿ, ಅಗಸಗಿತ್ತಿಯರಾಗಿ, ದರ್ಜಿಗಳಾಗಿ, ಹೊಲಗಳಲ್ಲಿ ದುಡಿಯುತ್ತಾ ಒಟ್ಟಿನಲ್ಲಿ ಉದ್ಯೋಗ ಮಾಡುತ್ತಾ, ಜೊತೆಗೆ ಇಡೀ ಕುಟುಂಬದ ಜವಾಬ್ದಾರಿಯನ್ನೂ ಹೊತ್ತಿದ್ದ ಮಹಿಳೆಯರು ಅದನ್ನು ನಿಭಾಯಿಸಲು ಹೆಣಗಾಡಬೇಕಾಗುತ್ತಿತ್ತು. ಹೀಗಾಗಿ ಮೊದಲು ಬ್ರೆಡ್‌ನ ಬೆಲೆ ಏರಿಕೆಯನ್ನು ತಡೆಗಟ್ಟಬೇಕೆಂದು ಹೋರಾಟ ಪ್ರಾರಂಭವಾಯಿತು. ಇದರಲ್ಲಿ ಎಲ್ಲಾ ಸ್ತರದ ಹೆಣ್ಣು ಮಕ್ಕಳು ಭಾಗವಹಿಸಿದರು. ರೈತ ಮಹಿಳೆಯರು, ಕಾರ್ಮಿಕ ಮಹಿಳೆಯರು ಚಳುವಳಿಗಳಲ್ಲಿ, ಪ್ರತಿಭಟನೆಗಳಲ್ಲಿ ಭಾಗವಹಿಸಿದರು. ಮಧ್ಯಮ ಮತ್ತು ಮೇಲ್ವರ್ಗದ ಮಹಿಳೆಯರು ಸಂಘಗಳನ್ನು (ಕ್ಲಬ್) ಕಟ್ಟಿಕೊಂಡರು. ಆ ದಿನಗಳಲ್ಲಿ ಸುಮಾರು ಅರವತ್ತು ಮುಖ್ಯ ಕ್ಲಬ್‌ಗಳಿದ್ದವು. ಅದರಲ್ಲಿ ತುಂಬ ಪ್ರಖ್ಯಾತವಾದದ್ದೆಂದರೆ ಸೊಸೈಟಿ ಆಫ್ ರೆವಲ್ಯೂಷನರಿ ರಿಪಬ್ಲಿಕನ್ ವಿಮೆನ್. ಇವರು ರಾಜಕೀಯವಾಗಿ ಮುಂದುವರಿದಿದ್ದ ಕೆಲವೊಂದು ಅಭಿಪ್ರಾಯಗಳನ್ನೂ, ಬೇಡಿಕೆಗಳನ್ನೂ ಸ್ಪಷ್ಟವಾಗಿ ಮಂಡಿಸಿದರು.

ಕೆಲವು ಮಹಿಳಾ ನಾಯಕಿಯರು ಹೋರಾಟದ ವಿಚಾರಗಳನ್ನು ಹರಡುವಲ್ಲಿ ಮುಖ್ಯ ಪಾತ್ರ ವಹಿಸಿದರು. ಅವರಲ್ಲಿ ಒಲಂಪೆ-ಡಿ-ಗಾರ್ಜಸ್ ಹಾಗೂ ಎಹಾ-ಪಾಮೆಯವರು ಪ್ರಮುಖರು. ಇವರು ಲೇಖಕಿಯರಾಗಿದ್ದು ನಾಟಕಗಳನ್ನು, ಪತ್ರಿಕೆಗಳನ್ನು, ಕರಪತ್ರಗಳನ್ನು ಬರೆಯುತ್ತಿದ್ದರು. ಕ್ರಾಂತಿಯ ಮುಖ್ಯ ಘಟ್ಟದಲ್ಲಿ ಅದರ ನೇತೃತ್ವ ವಹಿಸಿದ್ದ ಪುರುಷ ಮಾನವತಾವಾದಿ ಚಿಂತಕರು, ಹೋರಾಟಗಾರರು "ರೈಟ್ಸ್ ಆಫ್ ಮ್ಯಾನ್ ಆಂಡ್ ಸಿಟಿಜ಼ನ್" (ಮಾನವ ಹಕ್ಕುಗಳು ಮತ್ತು ನಾಗರಿಕ ಹಕ್ಕುಗಳು) ಎಂಬುದನ್ನು ಮಂಡಿಸಿದ್ದರು. ಇದರ ಮುಖ್ಯಾಂಶಗಳೆಂದರೆ : ಎಲ್ಲರೂ ಹುಟ್ಟಿನಿಂದಲೇ ಸ್ವತಂತ್ರರು ಮತ್ತು ಬದುಕಿನುದ್ದಕ್ಕೂ ಸ್ವತಂತ್ರರು. ಪ್ರತಿಯೊಬ್ಬರಿಗೂ ಇಷ್ಟ ಬಂದ ಧರ್ಮವನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕಿದೆ. ಕಾನೂನಿನ ಎದುರು ಎಲ್ಲರೂ ಒಂದೇ. ರಾಜವಂಶದವರಿಗೆ, ಕುಲೀನರಿಗೆ ವಿಶೇಷ ಹಕ್ಕುಗಳಿರುವುದಿಲ್ಲ. ಕಾನೂನನ್ನು ರೂಪಿಸುವಲ್ಲಿ ಜನರ ಪಾತ್ರವಿರಬೇಕು. ಅಭಿವ್ಯಕ್ತಿ ಮತ್ತು ಪತ್ರಿಕಾ ಸ್ವಾತಂತ್ರ್ಯ ಇರತಕ್ಕದ್ದು. ಖಾಸಗಿ ಆಸ್ತಿಯನ್ನು ಹೊಂದುವುದು ಎಲ್ಲರಿಗೂ ಮೂಲಭೂತ ಹಕ್ಕು. ಯಾರೇ ಆಗಲಿ ಯಾವುದೇ ಹುದ್ದೆಗೆ ಅರ್ಹತೆಯ ಮೇಲೆ ಆಯ್ಕೆಯಾಗಬಹುದು. ಕಾನೂನಿನ ಬೆಂಬಲವಿಲ್ಲದೆ ಯಾರನ್ನೂ ಬಂಧಿಸುವಂತಿಲ್ಲ. ಅಪರಾಧಿ ಎಂದು ವಿಚಾರಣೆಯಲ್ಲಿ ತೀರ್ಮಾನವಾಗುವವರೆಗೂ ಎಲ್ಲರೂ ನಿರ್ದೋಷಿಗಳೇ - ಇತ್ಯಾದಿ. ಒಟ್ಟಿನಲ್ಲಿ ಇದೊಂದು ಕ್ರಾಂತಿಕಾರಿ ಘೋಷಣೆಯಾಗಿತ್ತು. ಆದರೆ ಇದು ಸ್ಪಷ್ಟವಾಗಿ ಮಹಿಳೆಯರ ಹಕ್ಕುಗಳ ಬಗ್ಗೆ ಮಾತನಾಡಿರಲಿಲ್ಲ.

ಆದ್ದರಿಂದ ಇದಕ್ಕೆ ಪ್ರತಿಯಾಗಿ ಮಹಿಳಾ ಮುಖಂಡರು "ಮಹಿಳೆಯರ ಹಕ್ಕುಗಳು ಹಾಗೂ ನಾಗರಿಕ ಹಕ್ಕುಗಳು" ಎಂಬ ಘೋಷಣೆಯನ್ನು ೧೭೯೧ರಲ್ಲಿ ಮಂಡಿಸಿದರು. ಅದರಲ್ಲಿ ಮಹಿಳೆಯರು ಎಲ್ಲ ರೀತಿಯಲ್ಲೂ ಪುರುಷರಿಗೆ ಸಮಾನ ಎಂಬುದಾಗಿ ಘೋಷಿಸಬೇಕೆಂದು ಕೋರಿದ್ದರು. ಕಾನೂನಿನ ದೃಷ್ಟಿಯಲ್ಲಿ ಪುರುಷರು ಮತ್ತು ಮಹಿಳೆಯರು ಸಮಾನರು. ಆದುದರಿಂದ ವಿವಾಹದ ಸಂದರ್ಭದಲ್ಲಾಗಲಿ, ವಿಚ್ಛೇದನದ ಸಂದರ್ಭದಲ್ಲಾಗಲಿ, ಪುರುಷರಿಗೆ ಇರುವ ಹಕ್ಕುಗಳನ್ನು ಆಕೆಗೂ ನೀಡಬೇಕು. ದಾಂಪತ್ಯದಲ್ಲಿ ತೃಪ್ತಿ ಇಲ್ಲದಿದ್ದರೆ ಯಾರೇ ಆಗಲಿ ವಿಚ್ಛೇದನ ತೆಗೆದುಕೊಳ್ಳಬಹುದು. ಆಸ್ತಿಯಲ್ಲಿಯೂ ಸಮಪಾಲನ್ನು ನೀಡಬೇಕು. ಶಿಕ್ಷಣದ ಹಕ್ಕನ್ನು ನೀಡಬೇಕು ಎಂಬುದು ಇವರ ಪ್ರಮುಖ ಪ್ರತಿಪಾದನೆಗಳು.

ಇದಲ್ಲದೆ, ಅವರು ತಮ್ಮ ಮೇಲಿನ ದೈಹಿಕ ಹಿಂಸೆಯನ್ನು ವಿರೋಧಿಸಿದರು. ತಮ್ಮನ್ನು ಗುಲಾಮರಂತೆ ನಡೆಸಿಕೊಳ್ಳಲಾಗದು ಎಂದು ಆಗ್ರಹಿಸಿದರು.



ಮತದಾನದ ಹಕ್ಕನ್ನು ಮತ್ತು ರಾಜಕೀಯ ಕ್ಷೇತ್ರದಲ್ಲಿ ಉನ್ನತ ಸ್ಥಾನಗಳನ್ನು ಅಲಂಕರಿಸುವ ಹಕ್ಕನ್ನೂ ಕೇಳಿದರು. ತಂದೆಯು ಮಗಳ ಒಪ್ಪಿಗೆಯಿಲ್ಲದೆ ಆಕೆಯ ವಿವಾಹದ ಬಗ್ಗೆ ತಾನೇ ನಿರ್ಧಾರ ತೆಗೆದುಕೊಳ್ಳಕೂಡದು ಎಂಬುದೂ ಅವರ ಹಕ್ಕೊತ್ತಾಯವಾಗಿತ್ತು. ತಮಗೆ ಬೇಕಾದ ಉದ್ಯೋಗದಲ್ಲಿ, ವ್ಯಾಪಾರದಲ್ಲಿ ತೊಡಗಿಸಿಕೊಳ್ಳಲೂ ಸಹ ಅವರು ಕಾನೂನಿನ ಬೆಂಬಲ ಕೋರಿದ್ದರು.

ಈ ರೀತಿಯಲ್ಲಿ ಮಹಿಳೆಯರು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಹೆಚ್ಚು ಕ್ರಿಯಾಶೀಲರಾದರು. ರಾಜಕೀಯ ಸಂಘ-ಸಂಸ್ಥೆಗಳಲ್ಲಿ ಸದಸ್ಯರಾಗುವ ಮತ್ತು ಭಾಗವಹಿಸುವ ಅವಕಾಶಕ್ಕಾಗಿ, ಹಕ್ಕಿಗಾಗಿ ಒತ್ತಡವನ್ನು ಹೇರಲಾರಂಭಿಸಿದರು. ಹಲವಾರು ಸಮಾನ ಮನಸ್ಕ ಸಂಘಸಂಸ್ಥೆಗಳು ಈ ಬೇಡಿಕೆಯನ್ನು ಮನ್ನಿಸಿದವು. ಮಹಿಳೆಯರ ಪ್ರವೇಶಕ್ಕೆ ಒಪ್ಪಿಗೆ ನೀಡಿದವು. ಫೆಬ್ರವರಿ ೧೯, ೧೭೯೩ರಲ್ಲಿ "ಲುಕ್ಸೆಂಬರ್ಗ್ ಪೇಟ್ರಿಯಾಟಿಕ್ ಸೊಸೈಟಿ"ಯಲ್ಲಿ ಹದಿನಾಲ್ಕು ವಯಸ್ಸಿನ ಬಾಲಕಿಯರಿಗೂ ಪ್ರವೇಶದ ಅವಕಾಶವನ್ನು ನೀಡಲಾಯಿತು. ಅಲ್ಲಿ ಪುರುಷರಿಗೆ ನೀಡಲಾಗುತ್ತಿದ್ದ ಚರ್ಚೆ, ಮತದಾನದ ಹಕ್ಕುಗಳನ್ನು ಮಹಿಳೆಯರಿಗೂ ಸಮಾನವಾಗಿ ನೀಡಬೇಕಾಯಿತು. ಆಗಲೇ ಅಲ್ಲಿ ಮಹಿಳೆಯರ ಪಾತಿನಿಧ್ಯ ಶೇಕಡ ಇಪ್ಪತ್ತರಷ್ಟಿದ್ದಿತ್ತು ಎಂಬುದು ನಿಜಕ್ಕೂ ಆಶ್ಚರ್ಯದ ವಿಷಯ. ಮಹಿಳೆಯರು ಸಕ್ರಿಯರಾಗಿ, ವಾಚಾಳಿಗಳಾಗಿ, ಚರ್ಚೆಗಳಲ್ಲಿ ಭಾಗವಹಿಸುತ್ತಾ, ತಮ್ಮ ವಿಚಾರಗಳನ್ನು ಮಂಡಿಸುತ್ತಿದ್ದರು. ರಾಜಕೀಯ ಹುದ್ದೆಗಳಿಗಾಗಿಯೂ ತಮ್ಮ ಹಕ್ಕನ್ನು ಸ್ಥಾಪಿಸುತ್ತಿದ್ದರು.

ಮಹಿಳೆಯರು ಕೇವಲ ರಾಜಕೀಯ ಕಾರ್ಯಕ್ರಮಗಳಲ್ಲಿ ಕ್ರಿಯಾಶೀಲರಾಗಲಿಲ್ಲ. ಒಬ್ಬ ತಾಯಿಯಾಗಿ ಹಾಗೂ ಒಬ್ಬ ಉತ್ಪಾದಕಿಯಾಗಿಯೂ ಪ್ರತಿಭಟನೆಗಳಲ್ಲಿ ಭಾಗವಹಿಸಲು ಆರಂಭಿಸಿದರು. ಅದರಲ್ಲಿ ೧೭೯೩, ಜೂನ್ ೨೬ರಿಂದ ೨೮ರವರೆಗೆ ನಡೆದ 'ಸೋಪಿನ ದಂಗೆ' ಪ್ರಮುಖವಾದುದು. ದೋಬಿ ಘಾಟ್‌ಗಳಲ್ಲಿ ಕೆಲಸ ಮಾಡುತ್ತಿದ್ದ ಮಹಿಳೆಯರು, ಹಡಗಿನಲ್ಲಿ ಬಂದಿಳಿದ ಸೋಪನ್ನು ತೆಗೆದುಕೊಂಡು ಒಂದು ಪೌಂಡ್ ಸೋಪಿಗೆ ೨೦ ಕಾಸುಗಳ (ಸೌ) ದರದಲ್ಲಿ ಎಂದರೆ ಮಾರುಕಟ್ಟೆ ದರಕ್ಕಿಂತ ತುಂಬ ಅಗ್ಗವಾಗಿ ಮಾರಿದರು. ಮಾರನೆಯ ದಿನ ಇನ್ನಷ್ಟು ಮಹಿಳೆಯರು ಈ ಹೋರಾಟಕ್ಕೆ ಸೇರಿಕೊಂಡರು. ತಾವು ಮಾಡಿದ ನ್ಯಾಯಯುತ ಹೋರಾಟವನ್ನು ಎತ್ತಿ ಹಿಡಿಯಲು ಸೋಪು, ಮೇಣದ ಬತ್ತಿ ಹಾಗೂ ಇನ್ನಿತರ ಅವಶ್ಯಕ ವಸ್ತುಗಳ ಬೆಲೆ ಏರಿಕೆಯನ್ನು ವಿರೋಧಿಸಿ ನ್ಯಾಷನಲ್ ಅಸೆಂಬ್ಲಿಯಲ್ಲೇ ಪ್ರತಿಭಟಿಸಿದರು. ಸಾಮಾನ್ಯ ಕೌನ್ಸಿಲ್‌ಗೆ ಮನವಿ ಸಲ್ಲಿಸಿ ಸರ್ಕಾರ ವಶಪಡಿಸಿಕೊಂಡಿರುವ ಎಲ್ಲ ಸಾಬೂನನ್ನು ಪೌಂಡ್ ಒಂದಕ್ಕೆ ಇಪ್ಪತ್ತು ಸೌ ದರದಲ್ಲೇ ಮಾರುವಂತೆ ಆಗ್ರಹಿಸಿದರು. ಆದರೆ ಇಂಥ ಬೇಡಿಕೆಗಳು ಖಾಸಗಿ ಆಸ್ತಿಯ ಹಕ್ಕಿಗೆ ಪೆಟ್ಟು ನೀಡುತ್ತವೆ ಎಂದು ಭಾವಿಸಿದ ಕೌನ್ಸಿಲ್ ಇವರ ಮನವಿಯನ್ನು ತಳ್ಳಿಹಾಕಿತು. ಮತ್ತೊಂದು ಘಟನೆ ಸೇಂಟ್ ಜಾಕ್ವಿಸ್ ಸ್ಟ್ರೀಟ್‌ನಲ್ಲಿದ್ದ 'ಮಿಡಿ ಹತ್ತಿಗಿರಣಿ'ಗೆ ಸಂಬಂಧಿಸಿದ್ದು. ಫೆಬ್ರವರಿ, ೧೭೯೪ರ ಕೊನೆಯಲ್ಲಿ, ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ ಮಹಿಳಾ ಕಾರ್ಮಿಕರ ಮೇಲೆ ಅವರಿಗೆ ಪ್ರತಿಕೂಲವಾದ ಹೊಸ ವೇತನ ನೀತಿಯನ್ನು ಹೇರಲಾಯಿತು ಹಾಗೂ ಅವರಿಗೆ ಪ್ರತಿದಿನ ನೀಡಲಾಗುತ್ತಿದ್ದ ಎರಡು ಪೌಂಡ್ ಬ್ರೆಡ್‌ಅನ್ನು ನಿಲ್ಲಿಸಲಾಯಿತು. ಮಹಿಳಾ ಕಾರ್ಮಿಕರು ಒಂದುಗೂಡಿ ಅದರ ವಿರುದ್ಧ ಒಂದು ಮನವಿ ಪತ್ರವನ್ನು ಬರೆದರು. ಇನ್ನಿತರ ಕಾರ್ಖಾನೆಗಳ ಮಹಿಳೆಯರನ್ನೂ ಒಟ್ಟುಗೂಡಿಸಲು ಸಹ ಅವರು ಪ್ರಯತ್ನಿಸಿದರು. ಇದರ ನಾಯಕಿಯಾದ ಬೆಸೊಯಿ ಟ್ರಿಬಲ್ ಎಂಬಾಕೆಯನ್ನು ಬಂಧಿಸಲಾಯಿತು. ಮಹಿಳಾ ಕಾರ್ಮಿಕ ಹೋರಾಟದಲ್ಲಿ ಇದೊಂದು ಐತಿಹಾಸಿಕ ಮೈಲಿಗಲ್ಲು.

**ಮಾರ್ಸೇಲ್ಸ್‌ಗೆ ಮೆರವಣಿಗೆ**

ಇಂತಹ ಸಂದರ್ಭದಲ್ಲಿ ಅಕ್ಟೋಬರ್ ೧೭೮೯ರಲ್ಲಿ ನಡೆದ ಒಂದು ಘಟನೆ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಆಹಾರದ ಅಭಾವದಿಂದ ಬಳಲುತ್ತಿದ್ದ ಜನರಿಗೆ ರಾಜ್ಯದ ದೊರೆ ೧೬ನೇ ಲೂಯಿಯಿಂದ ಸೂಕ್ತ ಪ್ರತಿಕ್ರಿಯೆ ಸಿಗಲಿಲ್ಲ. ಹೀಗಾಗಿ ಸಮರ್ಪಕವಾಗಿ ಆಹಾರದ ಸರಬರಾಜು ಆಗಬೇಕೆಂಬ ಕೂಗು ಮೇಲೆದ್ದಿತು. ದಂಗೆಗಳ ಕೇಂದ್ರವಾಗಿದ್ದ ಪ್ಯಾರಿಸ್ ನಗರದಿಂದ ಕೊಂಚ ದೂರದಲ್ಲಿದ್ದ ವಾರ್ಸೇಲ್ಸ್ ನಗರದಿಂದ ರಾಜ್ಯಾಡಳಿತ ನಡೆಯುತ್ತಿತ್ತು. ಪ್ಯಾರಿಸ್‌ಗೆ ರಾಜನನ್ನು ಎಳೆದುಕೊಂಡು ಬರಬೇಕು, ಆಗ ಆತನಿಗೆ ತಮ್ಮ ಕಷ್ಟಗಳು ಗೊತ್ತಾಗಬಹುದು ಎಂದು ಜನ ಮಾತಾಡಿಕೊಳ್ಳುತ್ತಿದ್ದರು.

ಹೀಗಿರುವಾಗ ಮಾರುಕಟ್ಟೆಯ ಒಂದು ಪ್ರದೇಶದಲ್ಲಿ ಹಸಿವಿನಿಂದ ಕಂಗೆಟ್ಟ ಮಹಿಳೆಯರು ದೊಡ್ಡ ಸಂಖ್ಯೆಯಲ್ಲಿ ಸೇರಿಕೊಂಡರು. ಹೋರಾಟದ ತಮಟೆ ಬಾರಿಸಿದಾಗ ಇನ್ನೂ ಹಲವು ಮಹಿಳೆಯರು ಸೇರಿಕೊಂಡರು. ನಂತರ ಯಾರೋ ಹೋಗಿ ಚರ್ಚಿನ ಗಂಟೆಯನ್ನು ಬಾರಿಸತೊಡಗಿದರು. ಮತ್ತಷ್ಟು ಮಹಿಳೆಯರು ಸೇರಿಕೊಂಡರು. ಹಾಗೇ ಸೇರುತ್ತಾ, ಸೇರುತ್ತಾ, ಸಾವಿರಾರು ಜನ ಒಟ್ಟುಗೂಡಿದರು. ಜನರಿಗೆ ರಾಜನು ಮಾನವ ಹಕ್ಕುಗಳ ಪಟ್ಟಿಯನ್ನು ಒಪ್ಪಿಲ್ಲ ಮತ್ತು ನ್ಯಾಷನಲ್ ಅಸೆಂಬ್ಲಿಯನ್ನೇ (ಜನತೆಯ ಶಾಸನಸಭೆ) ವಿಸರ್ಜಿಸುತ್ತಾನೆ ಎಂಬ ಭಯವಿತ್ತು. ಆ ಎಲ್ಲ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಅವರು ಮಹಿಳೆಯರ ಹಿಂದೆ ಸೇರಿಕೊಂಡುಬಿಟ್ಟರು ! ಕಡೆಗೆ ಸುಮಾರು ಹತ್ತು ಸಾವಿರ ಮಹಿಳೆಯರು ಮತ್ತು ಪುರುಷರು ೧೬ನೇ ಲೂಯಿ ಹಾಗೂ ಮಹಾರಾಣಿ ಮೇರಿ ಆಂಟೋನಿಯಟ್ (ಈಕೆ ಜನರಿಗೆ ತಿನ್ನಲು ಬ್ರೆಡ್ ಇಲ್ಲದಿದ್ದರೆ ಏನಂತೆ, ಕೇಕ್ ತಿನ್ನಲಿ ಎಂದಳಂತೆ !) ಇದ್ದ ಅರಮನೆಗೆ ಮುತ್ತಿಗೆ ಹಾಕಲು ಮೆರವಣಿಗೆಯಲ್ಲಿ ನಡೆದರು. ಇದೇ ಇತಿಹಾಸ ಪ್ರಸಿದ್ಧ 'ಮಾರ್ಚ್ ಟು ಮಾರ್ಸೇಲ್ಸ್.'

ಪ್ಯಾರಿಸ್‌ನಿಂದ ಸುಮಾರು ೨೧ ಕಿ. ಮೀ. ದೂರದ ಅರಮನೆಗೆ, ಸುರಿಯುತ್ತಿದ್ದ ಮಳೆಯನ್ನೂ ಲೆಕ್ಕಿಸದೆ ಜನಸಾಗರ ನಡೆಯುತ್ತಿತ್ತು. ಅರಮನೆ ತಲುಪಿದ ಜನರು ೧೬ನೇ ಲೂಯಿ ತಮ್ಮನ್ನು ಭೇಟಿಯಾಗಿ ಬೇಡಿಕೆ ಈಡೇರಿಸಬೇಕೆಂದು ಕೂಗಲಾರಂಭಿಸಿದರು. ರಾಜ ಲೂಯಿಯು ಆರು ಜನ ಮಹಿಳಾ ನಾಯಕಿಯರ ನಿಯೋಗವನ್ನು ಭೇಟಿಯಾಗಿ ಅವರ ಬೇಡಿಕೆಯನ್ನು ಒಪ್ಪಿರುವುದಾಗಿಯೂ, ಮಾನವ ಹಕ್ಕುಗಳು, ನಾಗರಿಕ ಹಕ್ಕುಗಳ ಪ್ರಸ್ತಾವನೆಯನ್ನೂ ಒಪ್ಪುವುದಾಗಿಯೂ ಘೋಷಿಸಿದ. ಇದರಿಂದ ಸಂತೃಪ್ತರಾದ ಕೆಲವರು ಪ್ಯಾರಿಸ್‌ಗೆ ಮರಳಿದರು.

ಆದರೆ ಬಹುತೇಕ ಸಮರಶೀಲ ಮಹಿಳೆಯರು ಇದರಿಂದ ತೃಪ್ತರಾಗದೆ ಲೂಯಿ ದೊರೆಯು ಪ್ಯಾರಿಸ್‌ಗೆ ಮರಳಬೇಕೆಂದು ಪಟ್ಟು ಹಿಡಿದು ರಾತ್ರಿಯಿಡೀ ಅರಮನೆಯ ಬಳಿ ಕುಳಿತರು. ಜನರ ಒತ್ತಾಯಕ್ಕೆ ಮಣಿದ ರಾಜ ಲೂಯಿ, ಪ್ಯಾರಿಸ್‌ಗೆ ಮರಳಿದ. ಹೀಗೆ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಕ್ರಾಂತಿಕಾರಿ ಯಾಗಿದ್ದ ಬಂಡವಾಳಶಾಹಿ ವರ್ಗವು ಮಹಿಳೆಯರ ಸ್ಫೂರ್ತಿಯನ್ನು, ಕ್ರಾಂತಿಕಾರಿ ಗುಣವನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಂಡಿತು. ಆದರೆ ಕ್ರಾಂತಿಯ ಸುಮಾರು ಐದು ವರ್ಷಗಳ ಬಳಿಕವೂ ಲಿಂಗ ತಾರತಮ್ಯವನ್ನು ಸರಿಪಡಿಸಲು ಅಧಿಕಾರಸ್ಥರು ಯತ್ನಿಸಲಿಲ್ಲ. ಫ್ರೆಂಚ್ ಮಹಾಕ್ರಾಂತಿಯ ಎಲ್ಲ ಆಶೋತ್ತರಗಳನ್ನು ಈಡೇರಿಸಲು ಅವರಿಗೆ ಕೊನೆಗೂ ಸಾಧ್ಯವಾಗಲಿಲ್ಲ. ಸಾಮಾಜಿಕವಾಗಿ, ರಾಜಕೀಯವಾಗಿ ಮಹಿಳೆಯರಿಗೆ ಸಮಾನವಾದ ಸ್ಥಾನಮಾನಗಳನ್ನು ನೀಡಲು ಅವರು ಒಪ್ಪಲಿಲ್ಲ. ಸಾಮಾನ್ಯವಾಗಿ ಚರ್ಚೆಗಳಲ್ಲಿ ಸಮರಶೀಲ ಉತ್ಸಾಹದಿಂದ ವಾದಿಸುತ್ತಿದ್ದ ಮಹಿಳೆಯರು ರಾಜಕೀಯ ಅಸೆಂಬ್ಲಿಗಳಲ್ಲಿ ಭಾಗವಹಿಸುವುದನ್ನು ೧೭೯೫ರ ಮೇ ತಿಂಗಳ ನಂತರ ನಿರ್ಬಂಧಿಸಲಾಯಿತು. ಅವರು ತಮ್ಮ "ಪ್ರಕೃತಿ ಸಹಜ ಹಾಗೂ ನ್ಯಾಯಯುತವಾದ", ಜವಾಬ್ದಾರಿಯಾದ ಕುಟುಂಬದ ಚೌಕಟ್ಟಿನಲ್ಲಿ ತಾಯಿಯಾಗಿ, ಹೆಂಡತಿಯಾಗಿರುವಂತೆ ಆಜ್ಞಾಪಿಸಲಾಯಿತು! ಐದಕ್ಕಿಂತ ಹೆಚ್ಚು ಮಹಿಳೆಯರು ಗುಂಪುಗೂಡಿದರೆ ಅವರನ್ನು ಬಂಧಿಸುವಂತೆ ಆಜ್ಞೆ ಜಾರಿಯಾಯಿತು. ಫ್ರಾನ್ಸಿನ ಮಹಿಳೆಯರಿಗೆ ಕಡೆಗೂ ಮತದಾನದ ಹಕ್ಕು ಲಭಿಸಿದ್ದು ಏಪ್ರಿಲ್ ೨೯, ೧೯೪೫ರಲ್ಲಿ. ಅಂದರೆ ಫ್ರೆಂಚ್ ಮಹಾಕ್ರಾಂತಿಯಾದ ಸುಮಾರು ೧೫೦ ವರ್ಷಗಳ ನಂತರ !

ಫ್ರೆಂಚ್ ಮಹಾಕ್ರಾಂತಿಯ ಸಂದರ್ಭದಲ್ಲಿ ಬಂದ ಮಹಿಳಾ ಸಮಾನತೆ, ಸ್ವಾತಂತ್ರ್ಯ, ಆರ್ಥಿಕ ಸ್ವಾವಲಂಬನೆ ಮುಂತಾದ ಹಲವಾರು ಬೇಡಿಕೆಗಳಿಗೆ ಇಂದಿಗೂ ಪೂರ್ಣ ಪರಿಹಾರ ದೊರಕಿಲ್ಲ. ಸಾಮಾಜಿಕ, ಆರ್ಥಿಕ, ರಾಜಕೀಯ ಸಮಾನತೆಯ ಹಕ್ಕುಗಳನ್ನು ಪೂರ್ತಿಯಾಗಿ ಗಳಿಸಿಕೊಳ್ಳಲು ಸಾಧ್ಯವಾಗುವುದು ಸಮಾಜವಾದಿ ವ್ಯವಸ್ಥೆಯಲ್ಲಿ ಮಾತ್ರ ಎಂಬುದು ಸ್ಪಷ್ಟ.

ಅಂಥ ನವ ಸಮಾಜವನ್ನು ನಿರ್ಮಿಸಲು ಮಹಿಳೆಯರು ಒಗ್ಗೂಡಬೇಕಾಗಿದೆ. ಅಂಥ ಸಮಾಜಕ್ಕಾಗಿಯೇ ಹಂಬಲಿಸುವ ರೈತರು, ಕಾರ್ಮಿಕರು ಎಲ್ಲ ದಮನಿತರ ಜೊತೆ ಸೇರಿಕೊಳ್ಳಬೇಕಾಗಿದೆ. ಪ್ರಾಯಶಃ ಮತ್ತೊಂದು 'ಮಾರ್ಚ್ ಟು ಮಾರ್ಸೇಲ್ಸ್' ಅಂಥ ಕ್ರಾಂತಿಯೊಂದನ್ನು ಪ್ರಾರಂಭಿಸಬಹುದೇನೋ !

**ಜ಼ಾಹಿದಾ ಶಿರೀನ್**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಬೆಂಗಳೂರು – ೫೬೦ ೦೫೦

ಅನುಪಮಾ ನಿರಂಜನ – ಎಂ. ಎಸ್. ವೇದಾ ಅವರ ಕಾದಂಬರಿಗಳಲ್ಲಿ

# ಮಾಧವಿಯ ಮೌನ ಪ್ರತಿಭಟನೆ

ವೆಂಕಟೇಶ ಹೆಚ್. ಕೆ.

ಮಹಾಭಾರತದ ಮಹಾಕಾವ್ಯದಲ್ಲಿ ಬಿಂದು ಮಾತ್ರವಾಗಿ ಬರುವ ಮಾಧವಿ ಕತೆಯು ಅನುಪಮಾ ನಿರಂಜನರ ಕೈಯಲ್ಲಿ ಸಿಂಧುವಾಗಿ ಅರಳಿ 'ಮಾಧವಿ' ಕಾದಂಬರಿಯಾದರೆ, ಎಂ. ಎಸ್. ವೇದಾ ಅವರಲ್ಲಿ 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ಕಾದಂಬರಿಯಾಗಿ ಮೈತಳೆದಿದೆ.

'ಮಾಧವಿ' ಮತ್ತು 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ಪೌರಾಣಿಕ ವಸ್ತುವನ್ನಾಧರಿಸಿ ರಚಿಸಿದ ಕಾದಂಬರಿಗಳು. ಮಹಾಭಾರತದ ಉದ್ಯೋಗಪರ್ವದಲ್ಲಿ ಬರುವ ಕತೆಯ ಎಳೆಯನ್ನೇ ಹಿಡಿದು ಅನುಪಮಾ ನಿರಂಜನ ಮತ್ತು ವೇದಾ ಅವರು ಈ ಕಾದಂಬರಿಗಳನ್ನು ಕಡೆದಿದ್ದಾರೆ. ಪೌರಾಣಿಕ ವಸ್ತುವನ್ನಾರಿಸಿಕೊಂಡರೂ ವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸುವ ಕಾದಂಬರಿಕಾರ್ತಿಯರು ಕಾದಂಬರಿಯನ್ನು ಪ್ರಸ್ತುತತೆಗೆ ಸ್ಪಂದಿಸುವಂತೆ ಮಾಡುತ್ತಾರೆ. ಪರಂಪರೆಯನ್ನು ಪ್ರತಿರೋಧಿಸುವ, ಸಿದ್ಧ ಸಮಾಜದ ಚೌಕಟ್ಟನ್ನು ಮುರಿಯಬಯಸುವ, ಪುರಾಣವನ್ನು ಪುನರ್ ವ್ಯಾಖ್ಯಾನಿಸುವ ಲೇಖಕಿಯರ ಚಿಂತನೆಗಳು ಕಾದಂಬರಿಯುದ್ದಕ್ಕೂ ಕಂಡುಬರುವುದು ಕೃತಿಗಳಿಗೆ ಜೀವದುಂಬಿದೆ. 'ಸ್ವಾತಂತ್ರ್ಯ ಬಯಸುವ ಇಂಥ ವ್ಯಕ್ತಿ ಎಲ್ಲ ಕಾಲದಲ್ಲೂ ಇರಬಹುದಾದ ಸ್ತ್ರೀ ಮಾತ್ರವಲ್ಲ, ಮಾಧವಿ ಎಲ್ಲ ಕಾಲದ ಶೋಷಿತ ಸ್ತ್ರೀಯರ ಪ್ರತಿನಿಧಿಯಾಗಬಲ್ಲಳು ಎಂಬ ಅನಿಸಿಕೆಯಿಂದ ಅವಳು ನನ್ನ ಕಾದಂಬರಿಯ ಕೇಂದ್ರ ಪಾತ್ರವಾಗಿದ್ದಾಳೆ' ಎಂಬ ಅನುಪಮಾ ನಿರಂಜನರ ಮಾತುಗಳಿಲ್ಲಿ ಔಚಿತ್ಯಪೂರ್ಣವಾಗಿವೆ.

'ಮಾಧವಿ' ಕಾದಂಬರಿ ಆರಂಭವಾಗುವುದು ಮಾಧವಿಯ ಸ್ವಯಂವರದ ಪ್ರಸ್ತಾಪದಿಂದ. ಕಾದಂಬರಿ ಮುಗಿಯುವುದು ಮಾಧವಿ ಸ್ವಯಂವರವನ್ನು ನಿರಾಕರಿಸುವುದರಿಂದ. ಈ ಎರಡು ಘಟನೆಗಳ ನಡುವೆಯೇ ಮಾಧವಿಯ ಮಡುಗಟ್ಟಿದ ದುಃಖದ ದುರಂತ ಕಥೆಯಿದೆ. 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ಕಾದಂಬರಿಯ ತಂತ್ರ ವಿಶೇಷವಾಗಿರುವುದನ್ನು ಕಾಣಬಹುದು. ಪಕ್ಷಿಗಳ ಗೂಡು, ಅದನ್ನು ನೋಡಿ ಆನಂದಿಸುವ ಆದಿಮ–ಮಾಧವಿಯರ ಬದುಕಿನ ಚಹರೆಗಳನ್ನು ಕಟ್ಟಿಕೊಡುತ್ತಾ ಕಾದಂಬರಿಯ ಪುಟಗಳು ಆರಂಭದಲ್ಲಿ ತೆರೆದುಕೊಳ್ಳುತ್ತವೆ. ಕಾದಂಬರಿಯ ಕೊನೆಯಲ್ಲಿ ಕೂಡ ಪಕ್ಷಿಗಳು ಗೂಡಿಗೆ ಮರಳುವ ಚಿತ್ರಣವನ್ನು ನೀಡಿರುವುದು ಸೊಗಸಾಗಿದೆ.

ಹೆಣ್ಣು ಗಂಡಿನ ಸೊತ್ತು, ಕಾಮದ ತುತ್ತು, ಸಮಾಜದ ಸಾರ್ವಜನಿಕರ ಬಳಕೆಯ ವಸ್ತು ಎನ್ನುವ ಸಾಂಪ್ರದಾಯಿಕ ನಿಲುವನ್ನು ಸಂಪೂರ್ಣ ಮೂಲೋಚ್ಚಾಟನೆ ಮಾಡಬೇಕಾದ ತುರ್ತು ಇಂದು ನಮ್ಮ ಮುಂದಿದೆ. 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ನಾಲ್ಕು ಭಾಗಗಳಲ್ಲಿ, ಕವಲುಗಳಲ್ಲಿ ಕಥಾವಸ್ತುವನ್ನು ನಿರೂಪಿಸುತ್ತದೆ. ಸಾಮಾನ್ಯರ ಕುಟುಂಬದ ಮೇಲೆ ಪ್ರಭುತ್ವ ನಡೆಸುವ ಆಕ್ರಮಣದ ವಿವಿಧ ಮಜಲುಗಳನ್ನು ಕಾದಂಬರಿ ಬಿತ್ತರಿಸುತ್ತದೆ. ಅದರಲ್ಲೂ ಪುರುಷಪ್ರಧಾನ ಪ್ರಭುತ್ವ ಸ್ತ್ರೀ ಶೋಷಣೆಯನ್ನು ನಿರಂತರವಾಗಿ ಮಾಡಿಕೊಂಡು ಬಂದಿರುವುದನ್ನು 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ಅನಾವರಣ ಮಾಡುತ್ತದೆ. 'ಮದುವೆ ಇಲ್ಲದೆ ಮಗುವನ್ನು ಪಡೆಯಬಾರದೆ' ಎಂದ ಲಕ್ಷ್ಮಿಯ ತಮಾಷೆಯ ಮಾತು ಮುಂದೆ ನಿಜವಾಗುವುದು ಮತ್ತು ಪ್ರೀತಿಯ ಗಂಡ, ಮಮತೆಯ ಮಗು, ಬೆಚ್ಚಗಿನ ಹಕ್ಕಿಗೂಡು, ಕನಸಿನ ಸಂಸಾರದ ಲಕ್ಷ್ಮಿಯ ಕನಸೆಲ್ಲ ನುಚ್ಚುನೂರಾಗುವುದು ಅವಳ ಮೇಲೆ ಯಯಾತಿ ಮಹಾರಾಜ ಎದುರಾಗುವುದು ಮತ್ತೆ ನೋವುಗಳ ಸರಮಾಲೆ. ಮಾಧವಿ ಮಾತ್ರ ನರಳುವವಳು. ಸುಲಿಯುವ ರಾಜರು ಮಾತ್ರ ಅವರೇ. ಆದರೆ ಹೆಸರುಗಳು ಮಾತ್ರ ಬೇರೆ ಬೇರೆ, ಅಷ್ಟೇ.

ಮುಂದೆ ಕಾದಿರುವುದು ಘೋರ ದುರಂತ. ಅದೂ ಜಗತ್ಪ್ರಸಿದ್ಧ ವಿಶ್ವಾಮಿತ್ರನ ಆಸ್ಥಾನದಲ್ಲಿ ನಡೆಯುವುದು. ಆ ಹೊಲಸು ಕೃತ್ಯ ಮಾಡುವವನು ಸ್ವತಃ ವಿಶ್ವಾಮಿತ್ರನೇ ಎನ್ನುವುದು ವಾಕರಿಕೆ ಬರಿಸುತ್ತದೆ. ಗಾಲವ ಆರುನೂರು ಕುದುರೆಗಳನ್ನು ಮಾಧವಿಯ ಮೈಯನ್ನು ಮಾರಿ ಸಂಪಾದಿಸಿ, ಉಳಿದ ಎರಡುನೂರು ಕುದುರೆಗಳಿಗೆ ಮಾಧವಿಯನ್ನೇ ಗುರುವಿಗೆ ಒಪ್ಪಿಸುವುದೆಂದು ಮಾಧವಿಯನ್ನು ವಿಶ್ವಾಮಿತ್ರನೇ ಮದುವೆಯಾಗಿ ಗಂಡುಸಂತಾನ ಪಡೆಯಬೇಕೆಂದು ತೀರ್ಮಾನಿಸಿ





ಅತ್ಯಾಚಾರ ಮಾಡಿದ ತರುವಾಯವೇ. ಯಯಾತಿಯಿಂದ ಅತ್ಯಾಚಾರಕ್ಕೊಳಗಾಗಿ ಸಂಕಟದ ಬಾಳು ಬಾಳುತ್ತಿರುವ ಲಕ್ಷ್ಮಿಯ ವಿಚಾರ ಆರಂಭದಲ್ಲಿ ತೆರೆದುಕೊಳ್ಳುತ್ತದೆ. ಲಕ್ಷ್ಮಿ ಅವಳ ಮಗಳು ಮಾಧವಿ, ನೆರೆಯ ಪಾರ್ವತಿ ಅವಳ ಮಗ ಆದಿಮರ ಕೌಟುಂಬಿಕ ಬದುಕನ್ನು ಚಿತ್ರಿಸುತ್ತದೆ. ತಮ್ಮ ಕಷ್ಟಗಳ ನಡುವೆಯೇ ನೆಮ್ಮದಿಯಿಂದ ಹೇಗೋ ಇದ್ದ ಕುಟುಂಬದ ಮೇಲೆ ಪ್ರಭುತ್ವ ಮತ್ತೆ ಆಕ್ರಮಣ ಮಾಡುತ್ತದೆ. ಮುಂದೆ ಮಾಧವಿಗೆ ಬರುತ್ತಾನೆ. 'ನೀನು ಮೊದಲೇ ಇವಳನ್ನು ನನ್ನ ಬಳಿಗೇಕೆ ಕರೆತರಲಿಲ್ಲ, ವಂಶಪ್ರವರ್ತಕರಾದ ನಾಲ್ವರು ಮಕ್ಕಳನ್ನು ನಾನೇ ಇವಳಿಂದ ಪಡೆದುಕೊಳ್ಳಬಹುದಾಗಿತ್ತಲ್ಲವೆ? ಈಗಲಾದರೂ ಕರೆತಂದೆಯಲ್ಲ' ಎಂದು ವಿಶ್ವಾಮಿತ್ರರಾಡುವ ನುಡಿ ಅವರ ವ್ಯಕ್ತಿತ್ವಕ್ಕೆ ಕುಂದು ತರುವಂತಾಗುತ್ತದೆ. ಇಂದ್ರಿಯಗಳ ಮೇಲೆ ಗೆಲುವು ಸಾಧಿಸಿ, ಸಮಾಜದ ಒಳಿತಿಗೆ ಶ್ರಮಿಸಬೇಕಾದ ಮುನಿಗಳೇ ಇಂದ್ರಿಯಗಳ ದಾಸಾನುದಾಸರಾಗಿ ವರ್ತಿಸುವುದು ಅವರ

ಇದುವರೆಗಿನ ಗೋಸುಂಬೆತನವನ್ನು ಬಯಲಿಗೆಳೆಯುತ್ತದೆ. ಮಾಧವಿ ವಿಶ್ವಾಮಿತ್ರರನ್ನೂ ದಿಟ್ಟತನದಿಂದ ಎದುರಿಸಿ, ಶಿಷ್ಯರಿಗೆ ತಾಯಿಪ್ರೀತಿ ತೋರಿಸಿ, ಎಲ್ಲ ಕಷ್ಟಗಳನ್ನೂ ಸಹಿಸಿ ತನ್ನ ಕೆಲಸವನ್ನು ನಿಷ್ಠೆಯಿಂದ ಪೂರೈಸುತ್ತಾಳೆ. ಆದರೆ ಗಾಲವ ಮತ್ತು ಮಾಧವಿ ಇಬ್ಬರ ವಿಷಯಗಳಲ್ಲೂ ಸೋಲು ಕಾಣುವ ವಿಶ್ವಾಮಿತ್ರರು ಅಷ್ಟು ವರ್ಷಗಳ ಕಾಲ ತಪಸ್ಸು ಮಾಡಿದ್ದೇಕೆ? ಅದರ ಫಲಗಳೇನು? ಎನ್ನುವ ಪ್ರಶ್ನೆಗಳು ಮಾತ್ರ ಗಾಢವಾಗಿ ಕಾಡುತ್ತವೆ.

ಮಾಧವಿ ಮಹಾಸಮುದ್ರದಂತೆ. ನೋವಿನ ವಿಷಯದಲ್ಲಂತೂ ಈ ಮಾತು ಸಂಪೂರ್ಣ ಒಪ್ಪುತ್ತದೆ. ಸಮುದ್ರದ ಆಳ ಅರಿತವರಾರು? ಅಂತೆಯೇ ಮಾಧವಿ ಅನುಭವಿಸಿದ ನರಕದ, ನೋವಿನ, ಶೋಕದ ಆಳ ಗುರುತಿಸಲಾಗುವುದೇ? ಖಂಡಿತ ಇಲ್ಲ. ಸಸಿಯಂತೆ ಸುಕೋಮಲವಾಗಿದ್ದವಳು ಪುರುಷ ಪ್ರಧಾನತೆಯ ರೌದ್ರತೆಗೆ ಸಿಕ್ಕಿ ಶವವಾಗುತ್ತಾಳೆ. ಅವಳ ಕನಸುಗಳೆಲ್ಲಾ ಸುಟ್ಟು ಕರಕಲಾಗಿ, ಬಯಕೆಗಳೆಲ್ಲಾ ಬತ್ತಿಹೋಗಿ ಬಡವಾಗುತ್ತಾಳೆ. ಆಕೆ ಬದುಕಲೂ ಆಗದೆ, ಸಾಯಲೂ ಬಾರದಂಥ ಸಂದಿಗ್ಧ ಸ್ಥಿತಿಯಲ್ಲಿ ಸದಾ ನರಳುತ್ತಿರುತ್ತಾಳೆ.



ಗೊಡ್ಡು ಗುರುವಿಗೆ ಗಾಂಪ ಶಿಷ್ಯ, ಅಂತೆಯೇ ವಿಶ್ವಾಮಿತ್ರನಿಗೆ ಗಾಲವ. ಗುರುವಿಗೆ ದಕ್ಷಿಣೆ ಕೊಡಲೇಬೇಕು ಎಂದು ಹಟ ಹಿಡಿಯುವ ಗಾಲವ ಒಂದು ಕಡೆ. ಮತ್ತೊಂದೆಡೆಗಿರುವ ಆ ಗುರುವೂ ಎಂಥವನೆಂದರೆ 'ಮೈಯೆಲ್ಲ ಬೆಳ್ಳಗಿರುವ ಕಿವಿ ಮಾತ್ರ ಕಪ್ಪಗಿರುವ ಎಂಟುನೂರು ಕುದುರೆಗಳನ್ನು ಕೊಡು' ಎನ್ನುವ ಅಸಾಧ್ಯದ ಗುರಿಯೊಡ್ಡುವ ಹೆಡ್ಡ. ಶಿಷ್ಯನ ಇತಿಮಿತಿಗಳನ್ನೇ ಅರಿಯದ, ಶಿಷ್ಯನಿಗೆ ಒಳಿತನ್ನೇ ಬಯಸದ ಈತ ಎಂಥ ಗುರು? ಶಿಷ್ಯನ ಬೆಳವಣಿಗೆ ಬಯಸುವ ಗುರುವೇ ಈತ? ಇಲ್ಲಿ ಶಿಷ್ಯ ಗಾಲವನ ಸೋಲು ಗುರುವಾಗಿ ತನ್ನ ಸೋಲೂ ಆಗುತ್ತದೆ ಎಂದು ತಿಳಿಯದಾದನೆ ಆ ವಂಚಕ ವಿಶ್ವಾಮಿತ್ರ? 'ಕೋಣಗಳೆರಡರ ಹೋರಾಟ ಗಿಡಕ್ಕೆ ಮೃತ್ಯು' ಎನ್ನುವಂತೆ ಇವರಿಬ್ಬರ ಆಟದಲ್ಲಿ ಸಿಕ್ಕಿ ನರಳುವವಳು ಮಾತ್ರ ಏನೂ ಅರಿಯದ ಮುಗ್ಧೆ ಮಾಧವಿ. ಮಾಧವಿ ಆತನಿಗೆ ತನ್ನ ಬೆಳೆ ಬೆಳೆಯುವ ಫಲವತ್ತಾದ ಭೂಮಿ ಆದಳು, ಅಷ್ಟೆ. ವಿಶ್ವಾಮಿತ್ರನಿಗೆ ಗುರುದಕ್ಷಿಣೆ ಕೊಟ್ಟವರು ಗಾಲವನಲ್ಲ, ಮಾಧವಿ. "ಕತ್ತಲೆಯಿಂದ ಬೆಳಕಿನೆಡೆಗೆ ಕರೆದೊಯ್ಯುವವರನ್ನು ಗುರು ಎನ್ನುತ್ತಾರೆ. ಬೆಳಕಿನಿಂದ ಕತ್ತಲೆಡೆಗೆ ನೀವು ಕರೆದೊಯ್ಯುತ್ತಿದ್ದೀರಿ. ನನಗೆ ನಿಮ್ಮಷ್ಟು ವಿದ್ಯೆ, ತಿಳಿವಳಿಕೆಯಿಲ್ಲ. ನಮ್ಮನ್ನು ನಾವು ನಿರಸನಗೊಳಿಸಿಕೊಳ್ಳುವುದು ಜ್ಞಾನದ ಮೊದಲ ಸಂಕೇತ. ನಮ್ಮ ಪ್ರತಿಷ್ಠೆಗೋಸ್ಕರ ಬೇರೆಯವರನ್ನು ನಿರಸನಗೊಳಿಸುವುದು ಅಜ್ಞಾನದ ಸಂಕೇತ. ಅಂತಹ ಅಜ್ಞಾನದಿಂದಲೇ ಗಾಲವರಂತಹ ವ್ಯಕ್ತಿಗಳನ್ನು ಸೃಷ್ಟಿ ಮಾಡುತ್ತಿದ್ದೀರಿ, ಗಾಲವರು ನನ್ನಂತಹ ಹೆಣ್ಣಿನ ಬದುಕನ್ನು ದುರಂತಕ್ಕೆ ನೂಕಿದ್ದಾರೆ. ಇದೆಲ್ಲ ನಿಮ್ಮ ಗುರುತನದ ಪರಿಣಾಮವೆ," ಎಂಬ ಮಾಧವಿಯ ಮಾತಿನ ಬಾಣಗಳು ಗುರುವಿನ ಬಗ್ಗೆಯೇ ಚಿಂತಿಸುವಂತೆ ಮಾಡುತ್ತವೆ.

ವೇದಾ ಅವರ ಕಾದಂಬರಿಯಲ್ಲಿ ಯಯಾತಿಯ ಅರಮನೆಗೆ ಹಿಂತಿರುಗಿ ಬರುವ ಮಾಧವಿಯು ಯಯಾತಿಯ ಬಣ್ಣದ ಮಾತಿಗೆ ಮರುಳಾಗದೆ, ಅವನಿಗೇ ಬುದ್ಧಿ ಹೇಳಿ ತನ್ನ ಹಳ್ಳಿಗೆ ವಾಪಸಾಗುತ್ತಾಳೆ. ತನ್ನ ತಾಯಿ, ಅತ್ತೆಯರಲ್ಲಿ ದುಃಖ ತೋಡಿಕೊಳ್ಳುವ ಮಾಧವಿ, ಆದಿಮನ ಜೊತೆಯಲ್ಲಿ ತನ್ನ ವಿಚಾರಗಳನ್ನು ಹಂಚಿಕೊಳ್ಳುತ್ತಾಳೆ. ಅನುಪಮಾ ನಿರಂಜನರ ಮಾಧವಿ ಪುರುಷಪ್ರಧಾನತೆಯನ್ನು ಧಿಕ್ಕರಿಸಿ ಅಕ್ಕಮಹಾದೇವಿಯಂತೆ ಕಾಡಿನ ಕಡೆಗೆ ಮುನ್ನುಗ್ಗುವ ದಿಟ್ಟ ನಿಲುವು ತಳೆದರೆ, ವೇದಾ ಅವರ ಮಾಧವಿ ಎಲ್ಲ ಬಗೆಯ ದುಃಖಗಳನ್ನೂ ದಿಟ್ಟತನದಿಂದ ಎದುರಿಸಿ ಧೈರ್ಯಗುಂದದೆ ಆದಿಮನ ಜೊತೆಗೆ ಹೊಸ ಬಾಳಿಗೆ ದಾಪುಗಾಲಿರಿಸುತ್ತಾಳೆ. ಇಬ್ಬರು ಕಾದಂಬರಿಕಾರ್ತಿಯರೂ ನೋಡುವ ದೃಷ್ಟಿಕೋನ ವಿಭಿನ್ನವಾಗಿದೆ, ಧನಾತ್ಮಕವಾಗಿದೆ.

ಪ್ರಾಣಿಯಂತೆ ಯಃಕಶ್ಚಿತ್ ವಸ್ತುವಿನಂತೆ ದಾನ ಕೊಡಲ್ಪಟ್ಟ ಮಾಧವಿಯ ಮೇಲೆ ರಾಜಶಾಹಿಯ ಶೋಷಣೆ, ದಬ್ಬಾಳಿಕೆಯ ಜೊತೆಗೆ ಧರ್ಮಶಾಹಿ ಶೋಷಣೆಯೂ ನಡೆದುಬಿಡುವ ಭೀಕರ ಕೃತ್ಯ ಜರುಗುತ್ತದೆ. ದಾನದ ವಸ್ತುವಾಗಿ, ಭೋಗದ ಸಾಧನವಾಗಿ, ಹೆರಿಗೆಯ ಯಂತ್ರವಾಗಿ, ಗಂಡು ಹೇಳಿದಂತೆ ಕೇಳುವ ಕುರಿಯಾಗಿ ಬದುಕು ಸಾಗಿಸುವ ಮಾಧವಿ ಅನುಭವಿಸುವ ಯಾತನೆ, ಪರಿಪಾಟಲುಗಳು ಕೇವಲ ಕರುಳಿಗೆ ಚುಚ್ಚಿ ಕರುಣಾರಸ ಹರಿಸದೆ, ಸ್ತ್ರೀ ಶೋಷಣೆಯ ಮತ್ತು ಲಿಂಗತಾರತಮ್ಯದ ನಿರಂತರತೆಗೆ ಸಾಕ್ಷಿಯಾಗಿದೆ. ಒಂದು ಕಡೆ ಸ್ತ್ರೀ ಶೋಷಣೆ, ಮತ್ತೊಂದೆಡೆ ಬಾಡಿಗೆ ತಾಯಂದಿರ ಸಮಸ್ಯೆ, ಮಗದೊಂದೆಡೆ ಗಂಡು-ಹೆಣ್ಣು ಲಿಂಗ ತಾರತಮ್ಯದ ಸಮಸ್ಯೆಗಳ ಮುಪ್ಪುರಿ ಚಿತ್ರಣ ಈ ಎರಡೂ ಕಾದಂಬರಿಗಳಲ್ಲಿದೆ. ವೇದಾ ಅವರ ಕಾದಂಬರಿಯ ಶೀರ್ಷಿಕೆ 'ಕಪ್ಪು ಕಿವಿಯ ಬಿಳಿಯ ಕುದುರೆಗಳು' ಒಂದು ಅದ್ಭುತ ರೂಪಕವಾಗಿ ಇಡೀ ಕಾದಂಬರಿಯ ಆಶಯವನ್ನು ಧ್ವನಿಸುವಲ್ಲಿ ಸಫಲವಾಗಿದೆ. ಅಶ್ವಮೇಧ ಯಾಗದಲ್ಲಿ ವಿಶೇಷವಾಗಿ ಬಳಸಲ್ಪಡುವ ಈ ಕುದುರೆಗಳು ರಾಜ ಮಹಾರಾಜರುಗಳ ಶೌರ್ಯ, ಪರಾಕ್ರಮಗಳ ಪ್ರದರ್ಶನ, ಸಾಮ್ರಾಜ್ಯ ವಿಸ್ತರಣೆಯ ದಾಹ, ಅಧಿಕಾರದ ವ್ಯಾಮೋಹ, ಭೂಮಿಯ ಮೇಲಿರುವ ಸಕಲ ಚರಾಚರ ವಸ್ತುಗಳೆಲ್ಲಾ ತನ್ನ ಸುಖಭೋಗಕ್ಕಾಗಿಯೇ ಇರುವುದೆನ್ನುವ ಅಹಂ-ಈ ಎಲ್ಲಾ ಆಕಾಂಕ್ಷೆಗಳ ಕಾವ್ಯಾತ್ಮಕ ಪ್ರತಿಮೆಯಾಗಿ ಈ ಕಾದಂಬರಿಯಲ್ಲಿ ಹಲವು ಧ್ವನಿಗಳನ್ನು ಪ್ರಕಟಿಸುತ್ತದೆ. ರಾಜ ಮಹಾರಾಜರುಗಳ ಆಸೆ, ಆಕಾಂಕ್ಷೆಗಳ ಕಾಲಡಿಯಲ್ಲಿ ಧೂಳಾಗಿ ನೋಯುವ ಹಲವು ಹೆಣ್ಣುಗಳ ಪ್ರತಿನಿಧಿ ಯಾಗಿರುವ ಇಲ್ಲಿನ ಮುಖ್ಯ ಪಾತ್ರವಾದ 'ಮಾಧವಿ' ಆಧುನಿಕ ಚಿಂತನೆಯನ್ನು ಉಸಿರಾಡುತ್ತಾಳೆ. ಪ್ರಭುತ್ವದ ಅಮಾನವೀಯತೆಯನ್ನು, ನಿರಂಕುಶತ್ವವನ್ನು, ಡಂಭಾಚಾರವನ್ನು ಪ್ರಶ್ನಿಸಿ, ಎದುರಿಸುವ ದಿಟ್ಟ ಧ್ವನಿಯಾಗಿ ಮಾರ್ಪಡುತ್ತಾಳೆ. ಪುರುಷ ರಾಜಕಾರಣ ದಿಂದಾಗಿ ನೋವಿನ ಮುದ್ದೆಯಾಗಿ, ಶೋಷಿತರ ಪ್ರತಿನಿಧಿಯಾಗಿ ಚಿತ್ರಿತವಾಗುವ ಮಾಧವಿ ಈ ರಾಜಕಾರಣದ ಬೇರುಗಳನ್ನು, ವಿವಿಧ ಮಗ್ಗುಲುಗಳನ್ನು ಶೋಧಿಸುತ್ತಾಳೆ. ಪ್ರಭುತ್ವ ಮತ್ತು ಧರ್ಮದ ಸಂಗವು ಸೃಷ್ಟಿಸುವ ವಿಷವರ್ತುಲದಲ್ಲಿ ನೋಯುವ ಹೆಣ್ಣುಗಳ ಮನಸ್ಸು ಇಲ್ಲಿ ಅನಾವರಣಗೊಳ್ಳುತ್ತದೆ. ಹಾಗೆಯೇ ಹೆಣ್ಣನ್ನು ಸುತ್ತುವರಿದಿರುವ ಪುರಾಣವನ್ನು ಭಂಜಿಸುತ್ತಲೇ ಸ್ತ್ರೀ ಮಿಥ್ಯೆಯನ್ನು ಬೆತ್ತಲಾಗಿಸುವ ಕ್ರಿಯೆಯೂ ಇಲ್ಲಿ ಪ್ರಜ್ಞಾಪೂರ್ವಕವಾಗಿ ನಡೆದಿದೆ. ಅನುಪಮಾ ನಿರಂಜನರ ಕಾದಂಬರಿ ಮಾಧವಿ ಹೆಸರೂ ಕೂಡ ಮಾಧವಿಯ ಮನಕಲಕುವ ಕಥೆಯನ್ನು ಕೇಂದ್ರವಾಗಿಟ್ಟುಕೊಂಡು ಅರ್ಥಪೂರ್ಣವಾಗಿ ಚಿತ್ರಣಗೊಂಡಿದೆ.

ಅನುಪಮಾ ನಿರಂಜನ ಮತ್ತು ಎಂ. ಎಸ್. ವೇದಾ ಅವರು ಈ ಕಾದಂಬರಿಗಳಲ್ಲಿ ಪೌರಾಣಿಕ ಅಸ್ಥಿಪಂಜರವನ್ನು ತೆಗೆದುಕೊಂಡು ವೈಜ್ಞಾನಿಕ ವಿಶ್ಲೇಷಣೆಯ ಮುಖೇನ ಕಲ್ಪನೆ ಮತ್ತು ಚಿಂತನೆಯ ರಕ್ತ-ಮಾಂಸಗಳನ್ನು ಸೇರಿಸಿ ಶ್ರೇಷ್ಠ ಕಾದಂಬರಿಗಳನ್ನು ಹೆಣೆದಿದ್ದಾರೆ. ಇವು ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಗಟ್ಟಿಯಾದ ಕೃತಿಗಳು. ಆದರೆ ಹರ್ಯಶ್ವ, ದಿವೋದಾಸ, ಉಶೀನರ ರಾಜರುಗಳ ಸಂದರ್ಭದಲ್ಲಿ ಅವರ ಅರಮನೆಯ ವರ್ಣನೆ,

ಅಲ್ಲಿನ ನೃತ್ಯ, ಅವರ ಮಾತು–ಕತೆ, ವಿಷಯಲಂಪಟತನ ಮೊದಲಾದ ಸಂದರ್ಭಗಳಲ್ಲಿ ಪುನರಾವರ್ತನೆಯ ಭೂತ ಮತ್ತೆಮತ್ತೆ ಕಾಡುತ್ತದೆ. ಏಕತಾನತೆಯ ಸುರುಳಿ ಬಿಚ್ಚಿ ಚುಚ್ಚುತ್ತದೆ. ಆದರೆ ಕಾದಂಬರಿಗಳ ರಚನೆಯ ಹಿನ್ನೆಲೆಯಲ್ಲಿ ಸ್ತ್ರೀ ನೋವನ್ನು ದಾಖಲು ಮಾಡುವ ಸ್ಪಷ್ಟ ಉದ್ದೇಶ ಇದ್ದು ಅದು ಸಾರ್ಥಕವೇ ಆಗಿದೆ. ಮಾಧವಿ ಪಾತ್ರದ ಜೀವಂತ ಚಿತ್ರಣ ಇರುವುದರಿಂದಲೇ ಕಾದಂಬರಿಗಳು ಬೇಸರ ಮೂಡಿಸದೆ ಓದಿಸಿಕೊಂಡು ದಾಪುಗಾಲಿಡುತ್ತವೆ. ಕಾದಂಬರಿಕಾರ್ತಿಯರ ಅಧ್ಯಯನ, ಅವರ ಸ್ತ್ರೀ ಸಂವೇದನೆ ದಾಖಲಿಸುವ ಉತ್ಕಟ ಅಭಿಲಾಷೆ ಸಾರ್ಥಕವಾಗಿದೆ.

ಮಾಧವಿ ಒಮ್ಮೊಮ್ಮೆ ಪ್ರತಿಭಟನೆಯ ಸ್ವರವೆತ್ತುತ್ತಾಳೆ. ಅದು ವೀಣೆಯಂತೆ ಸೌಮ್ಯಸ್ವರ. ಮಾಧವಿ ಸ್ತ್ರೀನೋವನ್ನು ಹೊರಗೆ ಕೆಂಡದಂತೆ ಕಾರುವುದಕ್ಕಿಂತ ಒಳಗೊಳಗೇ ಸ್ವಗತದಲ್ಲಿ ಹೇಳಿಕೊಳ್ಳುವುದೇ ಹೆಚ್ಚು. ಮಾಧವಿಯ ಮನಸ್ಸಿನಲ್ಲಿ ಎದ್ದ ಪ್ರಶ್ನೆ: "ಸ್ತ್ರೀಧರ್ಮ ಏನು? ಮೌನವಾಗಿ ಚಕಾರವೆತ್ತದೆ ನಡೆಯುವುದೊಂದೇ ಏನು? ಮಕ್ಕಳನ್ನು ಹೆತ್ತು ಬೆಳೆಸುವುದೊಂದೇ ಅವಳ ಧರ್ಮವೇನು? ಯಾವ ಅನ್ಯಾಯಗಳಾದರೂ ಪ್ರತಿಭಟಿಸದೆ ಇರುವುದು ಏನು? ಆ ಪ್ರಶ್ನೆಗಳಿಗೆ ಉತ್ತರವಿಲ್ಲ" (ಮಾಧವಿ, ಪು. ೧೨೧–೧೨೨) ಉತ್ತರ ಸಿಗದೆ ಮಾಧವಿ 'ಮಾತನಾಡದಿರುವುದೇ ಧರ್ಮವೆಂದು ಕಾಣುತ್ತದೆ' ಎಂದು ಮೌನಿಯಾಗುತ್ತಾಳೆ.

ಮೌನವೂ ಪ್ರತಿಭಟನೆಯ ಅಸ್ತ್ರವಾಗಬಹುದು! ಅಂತೆಯೇ ಮಾಧವಿ ಮೌನ ಪ್ರತಿಭಟನೆ ವ್ಯಕ್ತಪಡಿಸುತ್ತಾಳೆ. ಇಂದು ವಿಚಾರಸ್ವಾತಂತ್ರ್ಯ, ಪ್ರಜಾಪ್ರಭುತ್ವ ಎಲ್ಲವೂ ಇದೆ. ಪ್ರತಿಭಟನೆ ಏಳುವುದು ಇಂದೇನೂ ದೊಡ್ಡದಾಗಿ ಕಾಣದಿರಬಹುದು. ಆದರೆ ಶತಶತಮಾನಗಳ ಹಿಂದೆ, ಅದರಲ್ಲೂ ಒಂದು ಹೆಣ್ಣು ಸಮಾಜದ ವ್ಯವಸ್ಥೆಯ ವಿರುದ್ಧವೇ ಪ್ರತಿಭಟನೆ ಏಳುವುದು ಮಹತ್ವದ್ದಾಗಿ ತೋರುತ್ತದೆ. ಭಾರತದಲ್ಲಿ ಸ್ತ್ರೀ ದಾಸ್ಯದ ವಿರುದ್ಧ ಮೊದಲು ಬಂಡೆದ್ದ ಮಾಧವಿ ಮುಖ್ಯಳಾಗುತ್ತಾಳೆ. ಮಾಧವಿ ಮೊದಲು ಎಲ್ಲಾ ಬಗೆಯ ಶೋಷಣೆಯನ್ನು ತೆಪ್ಪಗೆ ಅನುಭವಿಸುತ್ತಾಳೆ. ಆ ಅನುಭವದ ಪಾಕ ತುಂಬಿಬಂದಾಗ ಜ್ವಾಲಾಮುಖಿಯಂತೆ ಒಮ್ಮೆಲೇ ಸಿಡಿದು ಬೀಳುತ್ತಾಳೆ.

**ವೆಂಕಟೇಶ ಹೆಚ್. ಕೆ.**
ನಂ. ೭೫, ದಯಾಮಾರ್ಗ, ಸಿದ್ಧಾರ್ಥ ನಗರ, ಮೈಸೂರು

# ಪ್ರೊಫೆಸರ್ ಎಚ್. ಕೆ. ರಾಮಚಂದ್ರಮೂರ್ತಿ

ಇಂಗ್ಲಿಷ್ ಪ್ರಾಧ್ಯಾಪಕರು, ಸಾಹಿತಿ, ರಂಗನಟ, ನಿಘಂಟುತಜ್ಞ, ಭಾಷಾಂತರಕಾರ, ಹೀಗೆ ಬಹುಮುಖೀ ಪ್ರತಿಭಾವಂತರಾಗಿ ೯೩ ವರ್ಷ ಕ್ರಿಯಾಶೀಲರಾಗಿ ಬಾಳಿದ ಪ್ರೊ॥ ಎಚ್. ಕೆ. ರಾಮಚಂದ್ರಮೂರ್ತಿ ಇದೇ ಫೆಬ್ರವರಿ ೭ರಂದು ಬೆಂಗಳೂರಿನಲ್ಲಿ ನಿಧನರಾದರು. ಶ್ರೀಮತಿ. ವಿದ್ಯಾ ಮತ್ತು ಶ್ರೀ. ವೆಂಕಟೇಶ್ ಸೇರಿದಂತೆ ಅವರಿಗೆ ಮೂವರು ಮಕ್ಕಳು. ಪ್ರೊಫೆಸರ್ ಎ. ಎನ್. ಮೂರ್ತಿರಾವ್ ಮತ್ತು ಪ್ರೊಫೆಸರ್ ವಿ. ಸೀತಾರಾಮಯ್ಯ ಮುಂತಾದವರ ವಿದ್ಯಾರ್ಥಿಯಾಗಿ ಮೈಸೂರು ವಿಶ್ವವಿದ್ಯಾನಿಲಯದಿಂದ ಇಂಗ್ಲಿಷ್ ಎಂ.ಎ. ಪದವಿ ಪಡೆದ ಎಚ್. ಕೆ. ಆರ್. ಉಡುಪಿಯ ಎಂ. ಜಿ. ಎಂ. ಕಾಲೇಜಿನಲ್ಲಿ ಮತ್ತು ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಒಟ್ಟು ಸುಮಾರು ನಲವತ್ತು ವರ್ಷ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ಮಾಡಿದ್ದರು. ಅತ್ಯುತ್ತಮ ಅಧ್ಯಾಪಕರೆಂಬ ಕೀರ್ತಿಗೆ ಅವರು ಭಾಜನರಾಗಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯವು ಹೊರತಂದ ಕನ್ನಡ ನಿಘಂಟು, ವಿಶ್ವಕೋಶ ಹಾಗೂ ಬೇರೆ ಅನೇಕ ಯೋಜನೆಗಳಲ್ಲಿ ಅವರು ಸಕ್ರಿಯವಾಗಿ ಭಾಗವಹಿಸಿದ್ದರು. ನ್ಯಾಷನಲ್ ಕಾಲೇಜಿನಲ್ಲಿ ಹಲವು ವರ್ಷಗಳ ಕಾಲ ಅವರ ಸಹೋದ್ಯೋಗಿಯಾಗಿದ್ದು ಅವರಿಂದ ಹತ್ತಾರು ವಿಷಯಗಳನ್ನು ತಿಳಿದುಕೊಳ್ಳುವ ಅವಕಾಶ ನನಗೆ ದೊರೆತಿತ್ತು. ಪ್ಲೆಖನೊವ್‌ನ 'ಸಾಹಿತ್ಯ ಮತ್ತು ಸಾಮಾಜಿಕ ಜೀವನ', ಜಾರ್ಜ್ ಥಾಮ್ಸನ್ನನ 'ಮಾರ್ಕ್ಸ್‌ವಾದ ಮತ್ತು ಕಾವ್ಯ' ಹಾಗೂ 'ಮತಧರ್ಮ – ಒಂದು ಪ್ರಬಂಧ', ಬರ್ಟೋಲ್ಟ್ ಬ್ರೆಕ್ಟ್‌ನ 'ಗೆಲಿಲಿಯೋ' (ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರೊಡನೆ), ಜೆ. ಬಿ. ಪ್ರೀಸ್ಟ್ಲೆಯ 'ಮನವೆಂಬ ಮರ್ಕಟ', ಬ್ಯಾರೋಸ್ ಡನ್‌ಹ್ಯಾಂನ 'ಚಿಂತಕರು ಮತ್ತು ಖಜಾಂಚಿಗಳು', ಹೀಗೆ ಹತ್ತಾರು ಮೌಲಿಕ ಗ್ರಂಥಗಳ ಅನುವಾದಕರು ಅವರು. ಮೋಲಿಯೇರ್ ಕುರಿತ ಅವರ ಗ್ರಂಥ ಬಹಳ ಪ್ರಸಿದ್ಧವಾದುದು. "ಬ್ರೆಕ್ಟ್ ಕಥೆಗಳು" (೧೯೯೧), ಜೂಲಿಯಸ್ ಫ್ಯೂಚಿಕ್‌ನ "ನೇಣುಗಂಬದ ನೆರಳಲ್ಲಿ" ಹಾಗೂ ಇನ್ನಿತರ ಅವರ ಪ್ರಕಟಣೆಗಳು ಜನಪ್ರಿಯವಾಗಿವೆ. ಆರಂಭದಿಂದಲೂ 'ಹೊಸತು' ಪತ್ರಿಕೆಯ ಲೇಖಕರಾಗಿ ವಿವಿಧ ಭಾಷೆಗಳಿಂದ ಕತೆಗಳ ಅನುವಾದಗಳನ್ನು, ಅನನ್ಯವಾದ ಪುಸ್ತಕಗಳ ಪರಿಚಯವನ್ನು,



ಮಾಡಿಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವು ಸ್ಪ್ಯಾನಿಷ್ ಕತೆಗಳೂ ಸೇರಿವೆ. 'ಗೆಲಿಲಿಯೋ' ಮುಂತಾದ ನಾಟಕಗಳಲ್ಲಿ ಅವರ ಅಭಿನಯವು ಮನೋಜ್ಞವಾಗಿರುತ್ತಿದ್ದುದನ್ನು ಪ್ರೇಕ್ಷಕರು ಇಂದಿಗೂ ನೆನೆಯುತ್ತಾರೆ. ಬ್ರೂನೋ ಆಪಿಟ್ಜ್‌ನ "ನೇಕೆಡ್ ಅಮಾಂಗ್ ವುಲ್ವ್ಸ್" ಎಂಬ ಶ್ರೇಷ್ಠ ಕಾದಂಬರಿಯ ಬಗೆಗಿನ ಅವರ ಒಂದು ಉಪನ್ಯಾಸವು ಸ್ಮರಣೀಯವಾಗಿ ಉಳಿದಿದೆ. ಹಲವು ಪತ್ರಿಕೆಗಳಲ್ಲಿ ಸಾಹಿತ್ಯಕ ಅಂಕಣಗಳ ಲೇಖಕರಾಗಿ ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದವರು ಪ್ರೊ॥ ಎಚ್. ಕೆ. ಆರ್. ಕುವೆಂಪು ಭಾಷಾಭಾರತಿ ಪ್ರಶಸ್ತಿ, ವಿ. ಸೀ. ಸಂಪದ ಪ್ರಶಸ್ತಿ, ಮುಂತಾದ ಪ್ರಶಸ್ತಿಗಳನ್ನೂ ಅವರು ಪಡೆದಿದ್ದರು. ಅಸಂಖ್ಯ ವಿದ್ಯಾರ್ಥಿಗಳ ಆದರಣೀಯ ಪ್ರಾಧ್ಯಾಪಕರಾಗಿ ಅವರ ಕೀರ್ತಿ ವಿಶಿಷ್ಟವಾದುದು. ಅವರ ನಿಧನಕ್ಕೆ ಕಂಬನಿಗರೆಯುತ್ತಾ 'ಹೊಸತು' ಪ್ರೊ॥ ರಾಮಚಂದ್ರಮೂರ್ತಿ ಅವರಿಗೆ ತನ್ನ ವಿನಮ್ರ ಗೌರವವನ್ನು ಸೂಚಿಸುತ್ತದೆ.

***– ಜಿ. ಆರ್.***

## ಮಾಲ್ಡೀವ್ಸ್‌ನಲ್ಲಿ ಸರ್ವಾಧಿಕಾರ ಆಡಳಿತೆ

**ಹಿ**ಂದು ಮಹಾಸಾಗರದಲ್ಲಿ ಏಶಿಯ ಖಂಡದ ದಕ್ಷಿಣಕ್ಕಿರುವ ಮಾಲ್ಡೀವ್ಸ್ ದ್ವೀಪಸ್ತೋಮದಲ್ಲಿ ಈಗ ಸರ್ವಾಧಿಕಾರದ ಅಟ್ಟಹಾಸ. ಐದು ಲಕ್ಷಕ್ಕೂ ಕಡಿಮೆ ಜನಸಂಖ್ಯೆ ಇರುವ ಈ ದ್ವೀಪಗಳಲ್ಲಿ ಈಗ ಅಬ್ದುಲ್ಲಾ ಯಾಮೀನ್‌ದೇ ದರ್ಬಾರು.



೨೦೧೩ರಲ್ಲಿ ಅಧಿಕಾರಕ್ಕೆ ಬಂದ ಯಾಮೀನ್ ಈ ವರ್ಷ ಚುನಾವಣೆ ಎದುರಿಸಬೇಕಾಗಿದೆ. ಸೇನೆಯ ಬೆಂಬಲ ಇರುವ ಈತ ದೇಶದ ಸುಪ್ರೀಮ್ ಕೋರ್ಟ್‌ನ ನ್ಯಾಯಾಧೀಶರುಗಳನ್ನೇ ಬಂಧಿಸಿದ್ದಾನೆ. ಪ್ರತಿ ಪಕ್ಷದ ನಾಯಕರುಗಳನ್ನು ಬಂಧನದಲ್ಲಿರಿಸಿ, ೧೨ ಮಂದಿ ಶಾಸಕರನ್ನು ವಜಾ ಮಾಡಿದ್ದೆ ಇಂದಿನ ತುರ್ತುಪರಿಸ್ಥಿತಿಗೆ ಮೂಲ. ದೇಶದ ಸುಪ್ರೀಮ್ ಕೋರ್ಟ್ ಬಂಧಿತ ರಾಜಕೀಯ ನಾಯಕರನ್ನು ಬಿಡುಗಡೆ ಮಾಡಬೇಕು, ಶಾಸಕರ ಅನರ್ಹತೆಯನ್ನು ಅಂತ್ಯಗೊಳಿಸಬೇಕು ಎಂದು ತೀರ್ಪು ನೀಡಿತ್ತು. ನ್ಯಾಯಾಲಯದ ಆದೇಶವನ್ನು ಒಪ್ಪದೇ ಹೋದ ಅಬ್ದುಲ್ಲಾ ಯಾಮೀನ್ ದೇಶದಲ್ಲಿ ತುರ್ತು ಪರಿಸ್ಥಿತಿ ಘೋಷಿಸಿ, ಸುಪ್ರೀಮ್‌ಕೋರ್ಟ್ ನ್ಯಾಯಮೂರ್ತಿಗಳನ್ನೇ ಬಂಧನದಲ್ಲಿರಿಸಿದ್ದಾನೆ. ದೇಶದ ಭದ್ರತಾ ಪಡೆಗಳು ಸುಪ್ರೀಮ್‌ಕೋರ್ಟಿನ ಮೇಲೆ ದಾಳಿ ನಡೆಸಿ, ಈಗ ದೇಶದ ಉಸ್ತುವಾರಿ ನೋಡಿಕೊಳ್ಳುತ್ತಿವೆ. ಅಂತರರಾಷ್ಟ್ರೀಯ ಒತ್ತಡಗಳಾವುದಕ್ಕೂ ಜಗ್ಗದ ಯಾಮೀನ್ ಸರ್ವಾಧಿಕಾರವನ್ನು ಮುಂದುವರಿಸಿದ್ದಾನೆ. ಮಾಲ್ಡೀವ್ಸ್ 'ಸಾರ್ಕ್' ಸದಸ್ಯ ರಾಷ್ಟ್ರ. ಕಾಮನ್‌ವೆಲ್ತ್ ಸದಸ್ಯತ್ವವನ್ನು ಅದು ಹಿಂದೆಯೇ ತ್ಯಜಿಸಿತ್ತು.

ಬ್ರಿಟನ್ನಿನ ರಕ್ಷಣೆಯಲ್ಲಿದ್ದ ಈ ದ್ವೀಪಸ್ತೋಮ ಮಾಲ್ಡೀವ್ಸ್ ಸುಲ್ತಾನರ ಆಳ್ವಿಕೆಯಲ್ಲಿತ್ತು. ೧೯೬೫ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡ ಮಾಲ್ಡೀವ್ಸ್ ೧೯೬೮ರಲ್ಲಿ ಸುಲ್ತಾನರ ಆಳ್ವಿಕೆಯನ್ನು ಅಂತ್ಯಗೊಳಿಸಿ, ಗಣರಾಜ್ಯ ಸ್ಥಾಪಿಸಿತು. ದೇಶದ ಆಡಳಿತ ಸೂತ್ರ ಹಿಡಿದು ಮೂವ್ವತ್ತು ವರ್ಷಗಳ ಕಾಲ ಬಿಗಿಮುಷ್ಟಿಯಿಂದ ಆಳ್ವಿಕೆ ನಡೆಸಿದ ಅಬ್ದುಲ್ಲಾ ಗಯೂಮ್ ಸೋದರ ಸಂಬಂಧಿಯಾದ ಯಾಮೀನ್ ಆತನನ್ನೇ ಗೃಹಬಂಧನದಲ್ಲಿರಿಸಿದ್ದಾನೆ. ಪ್ರಜಾಪ್ರಭುತ್ವ ರೀತಿಯಲ್ಲಿ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದ ಮೊದಲ ಅಧ್ಯಕ್ಷ ಮಹಮ್ಮದ್ ನಶೀದ್ ೨೦೦೮ರಿಂದ ೨೦೧೨ರವರೆಗೆ ಅಧ್ಯಕ್ಷನಾಗಿದ್ದ. ಈತನನ್ನು ಬಂಧಿಸಿ ಕಾರಾಗೃಹದಲ್ಲಿರಿಸಿ, ಅಧಿಕಾರಕ್ಕೆ ಬಂದದ್ದು ಯಾಮೀನ್. ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ನಶೀದ್‌ನನ್ನು ಬಿಡುಗಡೆ ಮಾಡಬೇಕಾಗಿ ಬಂತು. ಈತ ಈಗ ಬ್ರಿಟನ್ನಿನಲ್ಲಿ ಆಶ್ರಯ ಪಡೆದಿದ್ದಾನೆ. ಭಾರತ ಸರಕಾರ ಮಧ್ಯೆ ಪ್ರವೇಶಿಸಿ ಬಿಕ್ಕಟ್ಟು ಪರಿಹರಿಸಬೇಕೆಂಬುದು ಈತನ ನಿಲುವು.

ಸರ್ವಾಧಿಕಾರಿ ಯಾಮೀನ್ ಒಲವು ಸದ್ಯಕ್ಕೆ ಚೀಣಾದ ಕಡೆಗೆ ವಾಲಿದೆ. ಯಾವುದೇ ಬಗೆಯ ಮಧ್ಯಪ್ರವೇಶವನ್ನು ಚೀಣಾ ವಿರೋಧಿಸಿದೆ. ಆಂತರಿಕ ವಿದ್ಯಮಾನವನ್ನು ಅವರೇ ಬಗೆಹರಿಸಿಕೊಳ್ಳಬೇಕೆಂಬುದು ಚೀಣಾದ ನಿಲುವು. ಹಿಂದು ಮಹಾಸಾಗರದಲ್ಲಿ ಆಯಕಟ್ಟಿನ ಪ್ರದೇಶದಲ್ಲಿರುವ ಮಾಲ್ಡೀವ್ಸ್ ದ್ವೀಪಗಳ ಮೇಲೆ ಚೀಣಾ ಕಣ್ಣಿರಿಸಿದೆ. ಅಲ್ಲಿ ಸೇನಾ ನೆಲೆಯೊಂದನ್ನು ಸ್ಥಾಪಿಸಿ, ಈ ಮಹಾಸಾಗರ ಪ್ರದೇಶದಲ್ಲಿ ತನ್ನ ಪಾರಮ್ಯವನ್ನು ಸ್ಥಾಪಿಸಬೇಕೆಂಬುದು ಚೀಣಾದ ಉದ್ದೇಶ. ದಕ್ಷಿಣಚೀಣಾ ಸಮುದ್ರದ ಮೇಲೆ ಈಗಾಗಲೇ ಅದು ಕಣ್ಣಿರಿಸಿದೆ. ಭಾರತದ ತೀರದಿಂದ ೧೨೦೦ ಕಿಲೋಮೀಟರ್ ದೂರದಲ್ಲಿರುವ ಈ ದ್ವೀಪಗಳಲ್ಲಿ ಭಾರತ ಸಂಜಾತರು ಬಹುಕಾಲದಿಂದ ಜೀವನ ಸಾಗಿಸುತ್ತಿದ್ದಾರೆ. ಸುಮಾರು ೨೫,೦೦೦ ಮಂದಿ ಭಾರತೀಯರು ಇದ್ದಾರೆ ಎಂದು ಅಂದಾಜು. ಈ ಬಿಕ್ಕಟ್ಟಿನಿಂದ ಭಾರತ ದೂರ ಉಳಿದರೂ ಕಷ್ಟ, ಮಧ್ಯೆ ಪ್ರವೇಶಿಸಿದರೂ ಕಷ್ಟ. ಆಂತರಿಕ ಬಿಕ್ಕಟ್ಟನ್ನು ಅಲ್ಲಿನ ಜನರೇ ಬಗೆಹರಿಸಿಕೊಳ್ಳುವಂತೆ ಮಾಡುವುದು ಜಾಣತನ.

ಮೀನುಗಾರಿಕೆ ಮತ್ತು ಪ್ರವಾಸೋದ್ಯಮದ ಮೇಲೆ ಅವಲಂಬಿತವಾಗಿರುವ ಈ ಪುಟ್ಟ ದೇಶದಲ್ಲಿ ಚೀಣೀಯರ ಪ್ರಭಾವ ಹೆಚ್ಚುವುದು ಅಮೆರಿಕಾಗೆ ಬೇಕಿಲ್ಲ. ಅದನ್ನು ತಡೆಗಟ್ಟಲು ಟ್ರಂಪ್ ಭಾರತದೊಂದಿಗೆ ಸಮಾಲೋಚನೆಯಲ್ಲಿ ನಿರತರಾಗಿದ್ದಾರೆ. ದ್ವೀಪದ ಬಿಕ್ಕಟ್ಟು ಕುರಿತು ಪ್ರಧಾನಿ ಮೋದಿಯೊಂದಿಗೆ ಈಗಾಗಲೇ ದೂರವಾಣಿ ಸಂಪರ್ಕದಲ್ಲಿದ್ದಾರೆ. ಅಮೆರಿಕದ ಆಮಿಷಗಳಿಗೆ ಬಲಿಯಾಗದಿರುವುದು ಕ್ಷೇಮ.

* * *

## ನೆರೆಯ ಬಂಗ್ಲಾದೇಶದಲ್ಲಿ ತಳಮಳ

**ಮಾ**ಲ್ಡೀವ್ಸ್‌ನಲ್ಲಿ ಪ್ರಜಾಪ್ರಭುತ್ವ ಹರಣವಾಗುತ್ತಿದ್ದಂತೆಯೇ ನೆರೆಯ ಬಂಗ್ಲಾದೇಶದಲ್ಲಿ ವಿಪಕ್ಷದ ನಾಯಕಿ ಬೇಗಮ್ ಖಲೀದಾ ಜ಼ಿಯಾ ಭ್ರಷ್ಟಾಚಾರ ಪ್ರಕರಣದಲ್ಲಿ ಶಿಕ್ಷೆಗೆ ಗುರಿಯಾಗಿ ಕಾರಾಗೃಹ ಸೇರಿದ್ದಾರೆ. ಪೂರ್ವಪಾಕಿಸ್ತಾನ ಬಂಗ್ಲಾದೇಶವಾಗಿ ಪರಿವರ್ತನೆಗೊಂಡ ನಲವತ್ತೈದು ವರ್ಷಗಳಲ್ಲಿ ಒಂದಲ್ಲ ಒಂದು ಗಂಭೀರವಾದ ಬೆಳವಣಿಗೆಗಳಿಗೆ ಗುರಿಯಾಗುತ್ತಿದೆ. ದೇಶದ ಸಂಸ್ಥಾಪಕ ಷೇಕ್‌ಮುಜಿಬುರ್ ರಹಮಾನ್ ಕಗ್ಗೊಲೆ, ನಂತರ ದೇಶದಲ್ಲಿ ಸರ್ವಾಧಿಕಾರದ ಸ್ಥಾಪನೆ. ೧೯೯೧ರಿಂದ ಬೇಗಮ್ ಖಲೀದಾರ ಬಂಗ್ಲಾದೇಶ ನ್ಯಾಷನಲ್ ಪಾರ್ಟಿ ಮತ್ತು ಷೇಕ್ ಹಸೀನಾ ನೇತೃತ್ವದ ಅವಾಮಿಲೀಗ್ ಪಕ್ಷಗಳು ಒಂದು ರೀತಿಯಲ್ಲಿ ಸರದಿಯ ಮೇಲೆ ಅಧಿಕಾರ ನಡೆಸುತ್ತ ಬಂದಿವೆ. ಕಳೆದ ಚುನಾವಣೆಗಳಲ್ಲಿ ಬೇಗಮ್ ಜ಼ಿಯಾ ಪಕ್ಷ ಚುನಾವಣೆಯನ್ನು ಬಹಿಷ್ಕರಿಸಿತ್ತು.



೨೦೧೪ರಿಂದ ಬೇಗಮ್‌ಜ಼ಿಯಾ ಮೇಲೆ ಹಲವಾರು ಭ್ರಷ್ಟಾಚಾರ ಆರೋಪಗಳಿವೆ. ಈಗ ವಿಶೇಷ ನ್ಯಾಯಾಲಯ ಪ್ರಕರಣವೊಂದರಲ್ಲಿ ಐದು ವರ್ಷ ಶಿಕ್ಷೆ ವಿಧಿಸಿದೆ. ಬಂಗ್ಲಾದೇಶದ ನ್ಯಾಷನಲ್ ಪಾರ್ಟಿ (ಬಿಎನ್‌ಪಿ) ಈಗ ನಾಯಕನಿಲ್ಲದ ಪಕ್ಷವಾಗಿದೆ. ಬೇಗಮ್ ಜ಼ಿಯಾ ಪುತ್ರ ಇನ್ನೊಂದು ಭ್ರಷ್ಟಾಚಾರ ಪ್ರಕರಣದಲ್ಲಿ ಅಪರಾಧಿಯಾಗಿ ಶಿಕ್ಷೆಗೆ ಗುರಿಯಾಗಿದ್ದು ಲಂಡನ್‌ನಲ್ಲಿ ಆಶ್ರಯ ಪಡೆದಿದ್ದಾರೆ. ಈ ವರ್ಷದ ಕೊನೆಯಲ್ಲಿ ಚುನಾವಣೆಗಳು ನಡೆಯಲಿವೆ. ಈಗ ಆಡಳಿತದಲ್ಲಿರುವ ಅವಾಮಿ ಲೀಗ್ ಪಕ್ಷ ಮತ್ತೆ ಅಧಿಕಾರಕ್ಕೆ ಬರುವ ಸಾಧ್ಯತೆ ಅಧಿಕವಾಗಿದೆ. ಪ್ರತಿಪಕ್ಷವೇ ಇಲ್ಲದಂತಹ ಸ್ಥಿತಿ ಬಂಗ್ಲಾದೇಶದಲ್ಲಿ ಉದ್ಭವವಾಗಿದೆ. ಸಾರ್ಕ್ ಸದಸ್ಯ ರಾಷ್ಟ್ರವಾಗಿರುವ ಬಂಗ್ಲಾದೇಶ ವಿಶೇಷ ಪರಿಸ್ಥಿತಿ ಎದುರಿಸುತ್ತಿರುವ ಮತ್ತೊಂದು ದೇಶ. ಈಗಾಗಲೇ ಮಾಲ್ಡೀವ್ಸ್ ಅತಂತ್ರ ಸ್ಥಿತಿಯಲ್ಲಿದೆ. ಪಾಕಿಸ್ತಾನದೊಂದಿಗೆ ಭಾರತದ ಸಂಬಂಧಗಳು ಉಲ್ಬಣಗೊಂಡಿದ್ದು 'ಸಾರ್ಕ್' ಸದ್ಯಕ್ಕೆ ಪುನರುತ್ಥಾನವಾಗುವ ಸಾಧ್ಯತೆ ಇಲ್ಲ. ರೋಹಿಂಗ್ಯಾ ಮುಸ್ಲಿಮರ ವಲಸೆ, ಹತ್ಯಾಕಾಂಡದಿಂದಾಗಿ ಮೈನ್ಮಾರ್ ಇಕ್ಕಟ್ಟಿನಲ್ಲಿದೆ. ನೇಪಾಳದಲ್ಲಿ ಚುನಾವಣೆಗಳು ಜರುಗಿ ಕಮ್ಯುನಿಸ್ಟರು ಅಧಿಕಾರ ಹಿಡಿದಿದ್ದಾರೆ. ನೆರೆ ರಾಷ್ಟ್ರಗಳ ಜೊತೆ ಭಾರತದ ಸಂಬಂಧಗಳು ಹೇಳಿಕೊಳ್ಳುವಂಥ ರೀತಿಯಲ್ಲೇನಿಲ್ಲ. ಶ್ರೀಲಂಕಾದಲ್ಲಿ ಇತ್ತೀಚೆಗೆ ನಡೆದ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಪ್ರತಿಪಕ್ಷಗಳು ಜಯಭೇರಿ ಪಡೆದಿವೆ. ಅಲ್ಲಿನ ಸರಕಾರ ಅತಂತ್ರವಾಗಿದೆ. ಚೀಣಾ ಮಗುಮ್ಮಾಗಿ ನಮ್ಮ ನೆರೆಯ ರಾಷ್ಟ್ರಗಳ ಜೊತೆ ಸಂಬಂಧಗಳನ್ನು ಬೆಳೆಸುತ್ತಿದೆ. ನಾನಾ ಬಗೆಯ ವಾಣಿಜ್ಯ ಒಪ್ಪಂದಗಳ ಜೊತೆಗೆ, ಅಭಿವೃದ್ಧಿ ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ಮೋದಿ ಸರಕಾರ ಅಧಿಕಾರ ವಹಿಸಿಕೊಂಡಾಗ 'ಸಾರ್ಕ್' ದೇಶಗಳ ನಾಯಕರನ್ನು ಆಮಂತ್ರಿಸಲಾಗಿತ್ತು. ಆದರೆ ಅನಂತರ ಆಗಿರುವುದೇ ಬೇರೆ. ಈಗ ಮೋದಿ 'ಆಸಿಯಾನ್' ದೇಶಗಳನ್ನು ಒಲಿಸಿಕೊಳ್ಳಲು ನೋಡುತ್ತಿದ್ದಾರೆ. ರಿಪಬ್ಲಿಕ್ ಡೇ ಪೆರೇಡ್‌ಗೆ ಆ ದೇಶಗಳ ನಾಯಕರು ಬಂದಿದ್ದರು.

**ಸೀಯಾರ್ಕೆ**
'ಚೌಬೀನ' ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫






# ಚಿತ್ರಕಲೆಯ ಹವ್ಯಾಸದ ಕಲಾವಿದೆ ಸಿಂಧೂ ಕಾಮತ್




ಬಾಲ್ಯದಿಂದಲೇ ಚಿತ್ರಕಲೆಯ ಬಗ್ಗೆ ಆಸಕ್ತಿ ಬೆಳೆಸಿಕೊಂಡು ಅದನ್ನೇ ಹವ್ಯಾಸವನ್ನಾಗಿ ಮಾಡಿಕೊಂಡು ಸಾಧನೆ ಮಾಡಿದ ಕಲಾವಿದೆ ಸಿಂಧೂ ಕಾಮತ್. ಮೂಲತಃ ಉಡುಪಿಯವರಾದ ಇವರು ಬಾಲ್ಯದಲ್ಲಿ ತಾಯಿ ಸುಮನ್ ಅವರು ರಚಿಸಿದ ಚಿತ್ರಗಳಿಂದಲೇ ಪ್ರಭಾವಿತರಾದವರು. ಮಣಿಪಾಲ್ ವಿಶ್ವವಿದ್ಯಾಲಯದಲ್ಲಿ ಎಂ.ಎಸ್. ಸಿ. ಕಂಪ್ಯೂಟರ್ ಸೈನ್ಸ್ ಓದಿ ವಿಶ್ವವಿದ್ಯಾಲಯಕ್ಕೆ ಪ್ರಥಮ ರ್‍ಯಾಂಕ್ ಪಡೆದರು. ಆದರೂ ಬಾಲ್ಯದ ಹವ್ಯಾಸವಾದ ಚಿತ್ರಕಲೆಯಲ್ಲಿ ಪರಿಣತಿ ಪಡೆದು ಜಲವರ್ಣ, ತೈಲವರ್ಣ, ಅಕ್ರಲಿಕ್, ಪೆರ್‍ರಾಕೋಟಾ ಮಾಧ್ಯಮದಲ್ಲಿ ಕಲಾಕೃತಿಗಳನ್ನು ರಚಿಸಿದ್ದಾರೆ. ರಾಜ್ಯದ ಹಲವಾರು ಕಡೆ ಕಲಾ ಪ್ರದರ್ಶನ ಮಾಡಿದ ಸಿಂಧೂ ಒಬ್ಬ ಭರವಸೆಯ ಕಲಾವಿದೆ.

–ಬಳಕೂರು ವಿ. ಎಸ್. ನಾಯಕ





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

